ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೫೦

# ಶ್ರೀ ಬ್ರಹ್ಮವೈವರ್ತಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೫

ಅನುವಾದಕ:

ಸಾಹಿತ್ಯ ಮತ್ತು ಕನ್ನಡ ವಿದ್ವಾನ್

ಚಿಟ್ನವಪುರದ ಸುಬ್ರಾಯರ ಮಗ ಕೃಷ್ಣಪ್ಪ,

ಸಂಸ್ಕೃತ ಪಂಡಿತ,

ಟ್ರೈನಿಂಗ್ ಕಾಲೇಜು, ಮೈಸೂರು.



ಶ್ರೀ ಶಾರದಾ ಪ್ರೆಸ್,

ಮೈಸೂರು.

೧೯೫೦

# ಮು ನ್ನು ಡಿ

ಗಣಪತಿಖಂಡದ ಈ ಪ್ರಥಮ ಸಂಪುಟದಲ್ಲಿ ಷಣ್ಮುಖ ಮತ್ತು ಗಣಪತಿಯ ಅವತಾರವು (ಪ್ರಧಾನವಾಗಿ) ನಿರೂಪಿತವಾಗಿದೆ. ಷಣ್ಮುಖ ಮತ್ತು ಗಣಪತಿ ಇಬ್ಬರೂ ಅಯೋನಿಜರು. ಶರಣಾಗತರಕ್ಷಕನಾದ ಶಿವನು ದೇವತೆಗಳ ಮೊರೆಯನ್ನು ಕೇಳಿ ಸತಿಯೊಡನೆ ಸಂಭೋಗವನ್ನು ತೊರೆದು ಹೊರಕ್ಕೆ ಬಂದಾಗ ಬಿದ್ದ ತೇಜಸ್ಸಿನ ಬಿಂದುವನ್ನು ಹೊರಲಾರದೆ ಭೂದೇವಿಯು ಅಗ್ನಿದೇವನಿಗೂ, ಅಗ್ನಿದೇವನು ಶರವಣ (ಲಾಳದಗುತ್ತಿ) ಕ್ಕೂ ಅರ್ಪಿಸಿದರು. ಅಲ್ಲಿ ಆವಿರ್ಭವಿಸಿದ ಷಣ್ಮುಖನನ್ನು ಕೃತ್ತಿಕೆಯರು ತಮ್ಮ ಮಂದಿರಕ್ಕೆ ಕರೆದೊಯ್ದು ಪಾಲಿಸಿ ಕಾಲಾಂತರದಲ್ಲಿ ಪಾರ್ವತಿಯ ಸಮೀಪಕ್ಕೆ ಬೀಳ್ಕೊಟ್ಟರು. ಅನಂತರ ಷಣ್ಮುಖನು ದೇವತೆಗಳ ಸೇನಾನಿಯಾದನು.

ಶಿವನ ಪ್ರೇರಣೆಯಂತೆ ಪಾರ್ವತಿಯು ಪುತ್ರಪ್ರಾಪ್ತಿಗಾಗಿ ಪುಣ್ಯಕವ್ರತವನ್ನಾಚರಿಸಿ, ದಾನಧರ್ಮಗಳನ್ನು ಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರಳಾದಳು. ಶ್ರೀಹರಿಯು ವೃದ್ಧಬ್ರಾಹ್ಮಣನ ರೂಪದಲ್ಲಿ ಶಿವಪಾರ್ವತಿಯರ ರತಿಗೃಹದ ಸಮೀಪಕ್ಕೆ ಬಂದು ಕಣ್ಮರೆಯಾಗಿ ಶಿವನ ವೀರ್ಯದಲ್ಲಿ ವ್ಯಕ್ತನಾದನು. ಅವನೇ ಗಣಪತಿಯೆನಿಸಿದನು. ಬಾಲಗಣಪತಿಯನ್ನು ನೋಡಲು ದೇವತೆಗಳೊಡನೆ ಶನೈಶ್ಚರನು ಬಂದಾಗ ಅವನ ದೃಷ್ಟಿಯು ಬಿದ್ದು ಗಣಪತಿಯ ರುಂಡವು ಕತ್ತರಿಸಿಬಿದ್ದಿತು. ಆಗ ಕಾಡಿನಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ ಒಂದು ಆನೆಯ ತಲೆಯನ್ನು ಕತ್ತರಿಸಿ ತಂದು ಗಣಪತಿಯ ಮುಂಡಕ್ಕೆ ಸೇರಿಸಿದರು. ಅಂದಿನಿಂದ ಅವನು ಗಜಾನನನಾದನು.

ಈ ರೀತಿ ಷಡಾನನ ಗಜಾನನರ ಇತಿಹಾಸವು ಅದ್ಭುತವಾಗಿದೆ. ಲೋಕಮಾತೆಯಾದ ಪಾರ್ವತಿಯೇ ಪುತ್ರಪ್ರಾಪ್ತಿಗಾಗಿ ಪುಣ್ಯಕವ್ರತವನ್ನಾಚರಿಸಿ ಇತರರಿಗೆ ಆದರ್ಶಪ್ರಾಯಳಾಗಿದ್ದಾಳೆ. ಈ ರೀತಿ ವಂಶಾಭಿವೃದ್ಧಿಕರನಾದ ಪುತ್ರನನ್ನು ಪಡೆಯುವುದು ವ್ರತನಿಯಮಾದಿಗಳಿಂದ ಮಾತ್ರ ಸಾಧ್ಯವೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ.

ಸಂಪತ್ತಿನಿಂದಲೂ ಸ್ತ್ರೀಲೋಲುಪತೆಯಿಂದಲೂ ಮದಿಸಿದ್ದ ದೇವೇಂದ್ರನು ಶ್ರೀಹರಿಯ ಪ್ರಸಾದವನ್ನು ತಿರಸ್ಕರಿಸಿದುದರ ಫಲವಾಗಿ ಸಂಪದ್ಭ್ರಷ್ಟನಾದನು. ಕಳೆದುಹೋದ ಸಂಪತ್ತನ್ನು ಪುನಃ ಪಡೆಯಲು ಇಂದ್ರನು ಬಹಳ ಕಷ್ಟಪಡಬೇಕಾಯಿತು. ಈ ರೀತಿ ಭಕ್ತಿವಿನಯಾದಿಗಳು ಶ್ರೇಯಸ್ಸಿಗೆ ಸಾಧನವೆಂದೂ, ಅಹಂಕಾರ ಮಮಕಾರಗಳು ಮನುಜನ ದುಃಸ್ಥಿತಿಗೆ ಕಾರಣವೆಂದೂ ಇಲ್ಲಿಯ ಸನ್ನಿವೇಶಗಳಿಂದ ಸ್ಪಷ್ಟವಾಗುತ್ತದೆ.

ಈ ರೀತಿಯಾದ ಮಹಾಪುರಾಣಗಳನ್ನು ಕರ್ಣಾಟಕಭಾಷೆಯಲ್ಲಿ ಅನುವಾದ ಮಾಡಿಸಿ ಜನಸ್ತೋಮಕ್ಕೆ ಮಹದುಪಕಾರವನ್ನು ಮಾಡುತ್ತಿರುವ ಪರಮೋದಾರಿಗಳೂ, ವಿದ್ವದಭಿಮಾನಿಗಳೂ, ಕರ್ಣಾಟಕ ಸಿಂಹಾಸನಾಧೀಶ್ವರರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳವರು ಬಂಧುಮಿತ್ರಕಳತ್ರಾದಿಗಳೊಡನೆ ಚಿರಕಾಲ ಸುಖವಾಗಿದ್ದು ಧರ್ಮದಿಂದ ರಾಜ್ಯವನ್ನು ಪರಿಪಾಲಿಸಲೆಂದು ಮಹಾಗಣಪತಿಯನ್ನು ಪ್ರಾರ್ಥಿಸುವ,

ವಿರೋಧಿ ಸಂ॥ ಫಾಲ್ಗುಣ ಶುದ್ಧ
ಪೂರ್ಣಿಮಾ ಶುಕ್ರವಾರ.

ಅನುವಾದಕ,
**ಬೆಟ್ಟದಪುರದ ಸುಬ್ರಾಯರ ಮಗ ಕೃಷ್ಣಪ್ಪ.**



# ಗಣಪತಿಖಂಡದ ವಿಷಯಾನುಕ್ರಮಣಿಕೆ.

**ಹದಿಮೂರನೆಯ ಅಧ್ಯಾಯ :—**



**ಹದಿನಾಲ್ಕನೆಯ ಅಧ್ಯಾಯ :—**



**ಹದಿನೈದನೆಯ ಅಧ್ಯಾಯ :—**



**ಹದಿನಾರನೆಯ ಅಧ್ಯಾಯ :—**



**ಹದಿನೇಳನೆಯ ಅಧ್ಯಾಯ :—**



**ಹದಿನೆಂಟನೆಯ ಅಧ್ಯಾಯ :—**



**ಹತ್ತೊಂಭತ್ತನೆಯ ಅಧ್ಯಾಯ :—**



**ಇಪ್ಪತ್ತನೆಯ ಅಧ್ಯಾಯ :—**



**ಇಪ್ಪತ್ತೊಂದನೆಯ ಅಧ್ಯಾಯ :—**



**ಇಪ್ಪತ್ತೆರಡನೆಯ ಅಧ್ಯಾಯ :—**



**ಇಪ್ಪತ್ತಮೂರನೆಯ ಅಧ್ಯಾಯ :—**





॥ ಓಂ ॥

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ಪ್ರಥಮೋಽಧ್ಯಾಯಃ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥

॥ ನಾರದ ಉವಾಚ ॥

ಶ್ರುತಂ ಪ್ರಕೃತಿಖಂಡಂ ತದಮೃತಾರ್ಣವಮುತ್ತಮಂ ।
ಸರ್ವೋತ್ಕೃಷ್ಟಮಭೀಷ್ಟಂ ಚ ಮೂಢಾನಾಂ ಜ್ಞಾನವರ್ಧನಂ ॥ ೨ ॥

---

### ಒಂದನೆಯ ಅಧ್ಯಾಯವು

೧. ಮುನಿವರ್ಯರಾದ ನರನಾರಾಯಣರಿಗೆ ನಮಸ್ಕರಿಸಿ, ಸರಸ್ವತೀದೇವಿಯನ್ನೂ ವ್ಯಾಸಮಹರ್ಷಿಯನ್ನೂ ಭಕ್ತಿಯಿಂದ ವಂದಿಸಿ ಅನಂತರ ಪುರಾಣವನ್ನಾರಂಭಿಸಬೇಕು.

೨. ನಾರದ :—ಎಲೈ ನಾರಾಯಣಮಹರ್ಷಿಯೇ, ನಿನ್ನ ಅನುಗ್ರಹದಿಂದ ಸರ್ವೋತ್ಕೃಷ್ಟವೂ, ಅಮೃತದಂತೆ ಆನಂದಕರವೂ, ಅಜ್ಞರಿಗೆ ಜ್ಞಾನದಾಯಕವೂ, ಅಭೀಷ್ಟಫಲಪ್ರದವೂ ಆದ ಪ್ರಕೃತಿಖಂಡದ ಕಥೆಯನ್ನು ಕೇಳಿ ನಾನು ಸಂತೋಷಪಟ್ಟೆನು.

ಅಧುನಾ ಶ್ರೀ ಗಣೇಶಸ್ಯ ಖಂಡಂ ಶ್ರೋತುಮಿಹಾಗತಃ ।
ತಜ್ಜನ್ಮ ಚರಿತಂ ನೃಣಾಂ ಸರ್ವಮಂಗಲಮಂಗಲಂ ॥ ೩ ॥

ಕಥಂ ಜಜ್ಞೇ ಸುರಶ್ರೇಷ್ಠಃ ಪಾರ್ವತ್ಯಾ ಉದರೇ ಶುಭೇ ।
ದೇವೀ ಕೇನ ಪ್ರಕಾರೇಣ ಚಾಲಭತ್ತಾದೃಶಂ ಸುತಂ ॥ ೪ ॥

ಸ ಚಾಂಶಃ ಕಸ್ಯ ದೇವಸ್ಯ ಕಥಂ ಜನ್ಮ ಲಲಾಭ ಸಃ ।
ಅಯೋನಿಸಂಭವಃ ಕಿಂ ವಾ ಕಿಂ ವಾಽಸೌ ಯೋನಿಸಂಭವಃ ॥ ೫ ॥

ಕಿಂ ವಾ ತದ್ಬ್ರಹ್ಮತೇಜೋ ವಾ ಕಿಂ ತಸ್ಯ ಚ ಪರಾಕ್ರಮಃ ।
ಕಾ ತಪಸ್ಯಾ ಚ ಕಿಂ ಜ್ಞಾನಂ ಕಿಂ ವಾ ತನ್ನಿರ್ಮಲಂ ಯಶಃ ॥ ೬ ॥

ಕಥಂ ತಸ್ಯ ಪುರಃ ಪೂಜಾ ವಿಶ್ವೇಷು ನಿಖಿಲೇಷು ಚ ।
ಸ್ಥಿತೇ ನಾರಾಯಣೇ ಶಂಭೌ ಜಗದೀಶೇ ಚ ಧಾತರಿ ॥ ೭ ॥

---

೩. ಈಗ ಜನರಿಗೆ ಮಂಗಳದಾಯಕವಾಗಿ, ಗಣಪತಿಯು ಜನ್ಮ ಮತ್ತು ಕಥೆಯನ್ನು ತಿಳಿಸುವ ಗಣೇಶಖಂಡವನ್ನು ಕೇಳಬೇಕೆಂದು ನನಗೆ ಕುತೂಹಲವಿದೆ.

೪. ದೇವತೆಗಳಲ್ಲಿ ಅಗ್ರಗಣ್ಯನಾದ ಗಣಪತಿಯು ಮಂಗಳಕರವಾದ ಪಾರ್ವತಿಯ ಗರ್ಭದಲ್ಲಿ ಅವತರಿಸಲು ಕಾರಣವೇನು ? ಪಾರ್ವತೀದೇವಿಯೂ ಕೂಡ ಯಾವ ವ್ರತವನ್ನಾಚರಿಸಿ ಅಂಥ ಸತ್ಪುತ್ರನನ್ನು ಪಡೆದಳು.

೫. ಗಣಪತಿಯು ಯಾವ ದೇವತೆಯ ಅಂಶದಿಂದ ಹೇಗೆ ಜನ್ಮವೆತ್ತಿದನು ? ಅವನು ನಮ್ಮೆಲ್ಲರಂತೆ ಮಾತೃಗರ್ಭದಿಂದ ಜನಿಸಿದವನೇ ? ಅಥವಾ ಬ್ರಹ್ಮಾದಿ ದೇವತೆಗಳಂತೆ ಅಯೋನಿಜನೇ ?

೬. ಅವನು ಬ್ರಹ್ಮತೇಜಃಸ್ವರೂಪನೇ ? ಅವನ ಪರಾಕ್ರಮ, ಜ್ಞಾನ, ತಪಸ್ಸು ಮತ್ತು ಕೀರ್ತಿಯ ಮಹಿಮೆಯೇನು ?

೭ ನಾರಾಯಣ, ಶಂಕರ ಮತ್ತು ಜಗತ್ಪತಿಯಾದ ಚತುರ್ಮುಖಬ್ರಹ್ಮ ನಿರುವಾಗ ಇವರನ್ನುಳಿದು ನಿಖಿಲ ಪ್ರಪಂಚದಲ್ಲಿಯೂ ಗಣಪತಿಗೇ ಅಗ್ರಪೂಜೆ ಯಾಗಲು ಕಾರಣವೇನು ?

ಪುರಾಣೇಷು ನಿಗೂಢಂ ಚ ತಜ್ಜನ್ಮ ಪರಿಕೀರ್ತಿತಂ ।
ಕಥಂ ವಾ ಗಜವಕ್ತ್ರೋsಯಮೇಕದಂತೋ ಮಹೋದರಃ ॥ ೮ ॥

ಏತತ್ಸರ್ವಂ ಸಮಾಚಕ್ಷ್ವ ಶ್ರೋತುಂ ಕೌತೂಹಲಂ ಮಮ ।
ಸುವಿಸ್ತೀರ್ಣಂ ಮಹಾಭಾಗ ತದತೀವ ಮನೋಹರಂ ॥ ೯ ॥

॥ ಶ್ರೀ ನಾರಾಯಣ ಉವಾಚ ॥

ಶ್ರುಣು ನಾರದ ವಕ್ಷ್ಯಾಮಿ ರಹಸ್ಯಂ ಪರಮಾದ್ಭುತಂ ।
ಪಾಪಸಂತಾಪಹರಣಂ ಸರ್ವವಿಘ್ನವಿನಾಶನಂ ॥ ೧೦ ॥

ಸರ್ವಮಂಗಲದಂ ಸಾರಂ ಸರ್ವಶ್ರುತಿಮನೋಹರಂ ।
ಸುಖದಂ ಮೋಕ್ಷಬೀಜಂ ಚ ಪಾಪಮೂಲನಿಕೃಂತನಂ ॥ ೧೧ ॥

ದೈತ್ಯಾರ್ದಿತಾನಾಂ ದೇವಾನಾಂ ತೇಜೋರಾಶಿಸಮುದ್ಭವಾ ।
ದೇವೀ ಸಂಹೃತ್ಯ ದೈತ್ಯೌಘಾನ್ ದಕ್ಷಕನ್ಯಾ ಬಭೂವ ಹ ॥ ೧೨ ॥

---

೮. ಇತರ ಪುರಾಣಗಳಲ್ಲಿ ಗೂಢವಾಗಿರುವ ಗಣೇಶನ ಜನ್ಮಕಥೆಯನ್ನೂ ಅವನು ಗಜಮುಖ, ಏಕದಂತ ಮತ್ತು ಲಂಬೋದರನಾಗಲು ಕಾರಣವನ್ನೂ ದಯವಿಟ್ಟು ವಿವರಿಸು.

೯. ಎಲೈ ಪುಣ್ಯಶಾಲಿಯೇ, ಇವೆಲ್ಲವನ್ನೂ ಕೇಳಿ ತಿಳಿದುಕೊಳ್ಳಲು ನನಗೆ ಅತ್ಯಂತ ಕುತೂಹಲವಿರುವುದರಿಂದ ಶ್ರವಣಾನಂದಕರವಾದ ಗಣಪತಿಯ ಕಥೆಯನ್ನು ನನಗೆ ವಿಸ್ತರಿಸಿ ಹೇಳು.

೧೦-೧೧. ನಾರಾಯಣಮಹರ್ಷಿ :—ಎಲೈ ನಾರದಮುಷಿಯೇ, ಅತ್ಯಂತ ಗೋಪ್ಯವೂ, ಅತ್ಯಾಶ್ಚರ್ಯಕರವೂ, ಪಾಪಸಂತಾಪನಾಶಕವೂ, ಸಕಲವಿಘ್ನಪರಿಹಾರಕವೂ, ಸರ್ವಮಂಗಳದಾಯಕವೂ, ವೇದಸಾರವೂ, ಮೋಕ್ಷಸುಖದಾಯಕವೂ ಆದ ಗಣಪತಿಯ ಚರಿತ್ರೆಯನ್ನು ಸಾವಧಾನದಿಂದ ಕೇಳು.

೧೨. ಪೂರ್ವದಲ್ಲಿ ದೈತ್ಯರ ಕೋಟಲೆಗೆ ಸಿಲುಕಿದ ದೇವತೆಗಳ ತೇಜೋರಾಶಿಯಿಂದ ಉತ್ಪತ್ತಿಪಡೆದ ದೇವಿಯು ದೈತ್ಯರನ್ನೆಲ್ಲ ಸದೆಬಡಿದು ದಕ್ಷಪ್ರಜಾಪತಿಯ ಪುತ್ರಿಯಾಗಿ ಜನಿಸಿದಳು-

॥ ಬ್ರಹ್ಮೋವಾಚ ॥

ಸಹಸ್ರವರ್ಷಪರ್ಯಂತಂ ದೇವಮಾನೇನ ಶಂಕರಃ ।
ರತೌ ರತಶ್ಚ ನಿಶ್ಚೇಷ್ಟೋ ನ ಯೋಗೀ ವಿರರಾಮ ಹ ॥ ೨೨ ॥

ಮೈಥುನಸ್ಯ ವಿರಾಮೇ ಚ ದಂಪತ್ಯೋರ್ಜಗದೀಶ್ವರ ।
ಕಿಂ ಭೂತಂ ಭವಿತಾಽಪತ್ಯಂ ತಥ್ಯಂ ಕಥಿತುಮರ್ಹಸಿ ॥ ೨೩ ॥

॥ ಭಗವಾನುವಾಚ ॥

ಚಿಂತಾ ನಾಸ್ತಿ ಜಗದ್ಧಾತಃ ಸರ್ವಂ ಭದ್ರಂ ಭವಿಷ್ಯತಿ ।
ಮಯಿ ಯೇ ಶರಣಾಪನ್ನಾಸ್ತೇಷಾಂ ದುಃಖಂ ಕುತೋ ವಿಧೇ ॥ ೨೪ ॥

ಯೇನೋಪಾಯೇನ ತದ್ವೀರ್ಯಂ ಭೂಮೌ ಪತತಿ ನಿಶ್ಚಿತಂ ।
ತತ್ಕುರುಷ್ವ ಪ್ರಯತ್ನೇನ ಸಾರ್ಧಂ ದೇವಗಣೇನ ಚ ॥ ೨೫ ॥

ಯದಾ ಚ ಶಂಭೋರ್ವೀರ್ಯಂ ತತ್ಪಾರ್ವತ್ಯಾ ಉದರೇ ಪತೇತ್ ।
ತತೋಽಪತ್ಯಂ ಚ ಭವಿತಾ ಸುರಾಸುರವಿಮರ್ದಕಂ ॥ ೨೬ ॥

---

೨೨. ಬ್ರಹ್ಮ:—ಎಲೈ ನಾರಾಯಣನೇ, ಯೋಗೀಶ್ವರನಾದ ಶಂಕರನು ಶಿವೆಯೊಡಗೂಡಿ ದೇವಮಾನದ ಸಾವಿರ ವರ್ಷಗಳಿಂದ ರತಿಸುಖದಲ್ಲಿ ಮಗ್ನನಾಗಿದ್ದಾನೆ.

೨೩. ಜಗದೀಶ್ವರನೇ, ಆ ದಂಪತಿಗಳ ರತಿಸುಖಾನುಭವವು ಮುಗಿದನಂತರ ಅವರಿಗೆ ಪುತ್ರೋತ್ಪತ್ತಿಯಾಗಲು, ನಾವು ಮಾಡಬೇಕಾದುದೇನೆಂಬುದನ್ನು ದಯವಿಟ್ಟು ತಿಳಿಸು.

೨೪. ಭಗವಂತ:—ಜಗತ್ಸೃಷ್ಟಿಕರ್ತನೇ, ನೀನೇನೂ ಯೋಚಿಸಬೇಕಾದ್ದಿಲ್ಲ. ಎಲ್ಲವೂ ಒಳಿತಾಗುವುದು. ನನ್ನನ್ನು ಮರೆಹೊಕ್ಕವರಿಗೆ ದುಃಖದುಗುಡಗಳೆಲ್ಲಿಯವು ?

೨೫. ನೀನು ದೇವತೆಗಳೊಡನೆ ಹೋಗಿ ಯಾವುದಾದರೊಂದುಪಾಯವನ್ನು ಮಾಡಿ, ಆ ಪರಶಿವನ ವೀರ್ಯವು ಅವನ ಶರೀರದಿಂದ ಹೊರಬರುವಂತೆ ಮಾಡು.

೨೬. ಆ ವೀರ್ಯವು ಪಾರ್ವತಿಯ ಗರ್ಭಕ್ಕೆ ಸೇರಿದರೆ, ದೇವತೆಗಳನ್ನೂ ಮತ್ತು ರಾಕ್ಷಸರನ್ನೂ ಸಂಹರಿಸಬಲ್ಲ ವೀರಪುತ್ರನು ಜನಿಸುವನು.

ಹಂಸಕಾರಂಡವಾಕೀರ್ಣೇ ಪುಂಸ್ಕೋಕಿಲರುತಾಕುಲೇ ।
ನಾನಾಪುಷ್ಪವಿಕಾಸಾಢ್ಯಭ್ರಮರಧ್ವನಿಗುಂಜಿತೇ || ೧೮ ||

ಸುಗಂಧಿಕುಸುಮಾಶ್ಲೇಷಿ ವಾಯುನಾ ಸುರಭೀಕೃತೇ ।
ಅತೀವ ಸುಖದೇ ತತ್ರ ಸರ್ವಜಂತುವಿವರ್ಜಿತೇ || ೧೯ ||

ದೃಷ್ಟ್ವಾ ತಯೋಸ್ತಚ್ಛೃಂಗಾರಂ ಚಿಂತಾಂ ಪ್ರಾಪುಃ ಸುರಾಃ ಪರಾಂ ।
ಬ್ರಹ್ಮಾಣಂ ಚ ಪುರಸ್ಕೃತ್ಯ ಯಯುರ್ನಾರಾಯಣಾಂತಿಕಂ || ೨೦ ||

ತಂ ನತ್ವಾ ಕಥಯಾಮಾಸ ಬ್ರಹ್ಮಾ ವೃತ್ತಾಂತಮೀಪ್ಸಿತಂ ।
ತಸ್ಥುರ್ದೇವತಾಃ ಸರ್ವಾಶ್ಚಿತ್ರಪುತ್ತಲಿಕಾ ಯಥಾ || ೨೧ ||

---

೧೮. ಆ ನರ್ಮದಾತೀರವು ಹಂಸ, ಬಾತು, ಕೋಗಿಲೆ ಮುಂತಾದ ಪಕ್ಷಿಗಳ ಮನೋಹರ ಧ್ವನಿಯಿಂದಲೂ, ವಿಕಸಿತವಾದ ಪುಷ್ಪಗಳಲ್ಲಿ ಕುಳಿತು ಮಕರಂದವನ್ನು ಪಾನಮಾಡುತ್ತಿರುವ ದುಂಬಿಗಳ ಇಂಚರದಿಂದಲೂ ಕಾಮಿಗಳಿಗೆ ಉದ್ದೀಪಕ ವಾಗಿದ್ದಿತು.

೧೯. ಉಮಾಮಹೇಶ್ವರರು ದಿವ್ಯ ಕುಸುಮಗಳ ಸುವಾಸನೆಯನ್ನು ಪಸರಿಸುತ್ತಿರುವ ಮಂದಮಾರುತವನ್ನು ಸೇವಿಸುತ್ತ, ಏಕಾಂತವಾದ ಆ ಸ್ಥಳದಲ್ಲಿ ರತ್ಯಾಸಕ್ತರಾಗಿದ್ದರು.

೨೦. ಇಂತು ರತಿಸುಖದಲ್ಲಿ ಮಗ್ನರಾಗಿ ದೇವತೆಗಳ ಯೋಗಕ್ಷೇಮವನ್ನು ದೂರಮಾಡಲು, ಚಿಂತಾಕ್ರಾಂತರಾದ ದೇವತೆಗಳು ಚತುರ್ಮುಖಬ್ರಹ್ಮನನ್ನು ಮುಂದುಮಾಡಿಕೊಂಡು ಶ್ರೀಮನ್ನಾರಾಯಣನ ಸಮೀಪಕ್ಕೆ ಹೋದರು.

೨೧. ಅಲ್ಲಿ ಬ್ರಹ್ಮನು ನಾರಾಯಣನಿಗೆ ನಮಸ್ಕರಿಸಿ, ತಾವು ಬಂದಿರುವ ಕಾರ್ಯವನ್ನು ಬಿನ್ನವಿಸಿದನು. ದೇವತೆಗಳೆಲ್ಲರೂ ಚಿತ್ರದ ಬೊಂಬೆಯಂತೆ ಚಲಿಸದಿದ್ದರು.

ತತಃ ಶಕ್ರಾದಯಃ ಸರ್ವೇ ಸುರಾ ನಾರಾಯಣಾಜ್ಞಯಾ ।
ಪ್ರಯಯುರ್ನರ್ಮದಾತೀರಂ ಯಯೌ ಬ್ರಹ್ಮಾ ನಿಜಾಲಯಂ ॥ ೨೭ ॥

ತತ್ರೈವ ಪರ್ವತೇದ್ರೋಣೀಬಹಿರ್ದೇಶೇ ಸುರಾಃ ಪರಾಃ ।
ವಿಷಣ್ಣವದನಾಃ ಸರ್ವೇ ಬಭೂವುರ್ಭಯಕಾತರಾಃ ॥ ೨೮ ॥

ಶಕ್ರೋ ರಾಜಾ ಕುಬೇರಂ ಚ ಕುಬೇರೋ ವರುಣಂ ತಥಾ ।
ಸಮೀರಣಂ ಚ ವರುಣೋ ಯಮಂ ಚೈವ ಸಮೀರಣಃ ॥ ೨೯ ॥

ಹುತಾಶನಂ ಯಮಶ್ಚೈವ ಭಾಸ್ಕರಂ ಚ ಹುತಾಶನಃ ।
ಚಂದ್ರಂ ತಥಾ ಭಾಸ್ಕರಶ್ಚೇಶಾನಂ ಚಂದ್ರ ಏವ ಚ ॥ ೩೦ ॥

ಏವಂ ದೇವಾಃ ಪ್ರೇರಯಂತಿ ದೇವಾಂಶ್ಚ ರತಿಭಂಜನೇ ।
ಹರಶೃಂಗಾರಭಂಗಂ ಚ ಕುರ್ವಿತ್ಯುಕ್ತ್ವಾ ಪರಸ್ಪರಂ ॥ ೩೧ ॥

ದ್ವಾರಿ ಸ್ಥಿತೋ ವಕ್ರಶಿರಾಃ ಶಕ್ರಃ ಪ್ರಾಹ ಮಹೇಶ್ವರಂ ॥ ೩೨ ॥

---

೨೭. ಶ್ರೀಮನ್ನಾರಾಯಣನಾಡಿದ ಈ ಮಾತುಗಳನ್ನು ಕೇಳಿ ಇಂದ್ರಾದಿ ಸಕಲ ದೇವತೆಗಳೂ ನರ್ಮದಾತೀರಕ್ಕೆ ತೆರಳಿದರು. ಚತುರ್ಮುಖಬ್ರಹ್ಮನು ತನ್ನ ಲೋಕಕ್ಕೆ ಹಿಂತಿರುಗಿದನು.

೨೮. ದೇವತೆಗಳು ವಿಂಧ್ಯಪರ್ವತದ ಕಣಿವೆಯ ಹತ್ತಿರ ಭಯಭ್ರಾಂತರಾಗಿಯೂ, ವಿಷಣ್ಣವದನರಾಗಿಯೂ ನಿಂತುಕೊಂಡರು.

೨೯–೩೦. ಈಶ್ವರನ ರತಿಸುಖವನ್ನು ಭಂಗಗೊಳಿಸಲು ದೇವತೆಗಳ ರಾಜನಾದ ಇಂದ್ರನು ಕುಬೇರನಿಗೆ ಹೇಳಿದನು. ಕುಬೇರನು ವರುಣನಿಗೂ, ವರುಣನು ವಾಯುವಿಗೂ, ವಾಯುವು ಯಮನಿಗೂ, ಯಮನು ಅಗ್ನಿಗೂ. ಅಗ್ನಿಯು ಸೂರ್ಯನಿಗೂ, ಸೂರ್ಯನು ಚಂದ್ರನಿಗೂ, ಚಂದ್ರನು ಈಶಾನನಿಗೂ ಹೇಳಿದರು.

೩೧. ಹೀಗೆಯೇ ಇತರ ದೇವತೆಗಳೂ ತಮ್ಮೊಳಗೆ ಪರಸ್ಪರವಾಗಿ ಶಿವನ ಶೃಂಗಾರಸುಖವನ್ನು ಭಂಗಗೊಳಿಸಲು ಪ್ರೇರಿಸಿದರು.

೩೨. ಕೊನೆಗೆ ಇಂದ್ರನೇ ಧೈರ್ಯಮಾಡಿ, ಶಿವ ಪಾರ್ವತಿಯರ ರತಿಗೃಹದ ಬಾಗಿಲಿನಲ್ಲಿ ತಲೆಬಾಗಿ ನಿಂತು ಮಹೇಶನನ್ನು ಕುರಿತು ಇಂತೆಂದನು.

॥ ಇಂದ್ರ ಉವಾಚ ॥

ಕಿಂ ಕರೋಷಿ ಮಹಾದೇವ ಯೋಗೀಶ್ವರ ನಮೋಽಸ್ತು ತೇ ।
ಜಗದೀಶ ಜಗದ್ಬೀಜ ಭಕ್ತಾನಾಂ ಭಯಭಂಜನ ॥ ೩೩ ॥

ಹರಿರ್ಜಗಾಮೇತ್ಯುಕ್ತ್ವಾ ತಮಾಜಗಾಮ ಚ ಭಾಸ್ಕರಃ ।
ಉವಾಚ ಭೀತೋ ದ್ವಾರಸ್ಥೋ ಭಯಾರ್ತೋ ವಕ್ರಚಕ್ಷುಷಾ ॥ ೩೪ ॥

॥ ಶ್ರೀ ಸೂರ್ಯ ಉವಾಚ ॥

ಕಿಂ ಕರೋಷಿ ಮಹಾದೇವ ಜಗತಾಂ ಪರಿಪಾಲಕ ।
ಸುರಶ್ರೇಷ್ಠ ಮಹಾಭಾಗ ಪಾರ್ವತೀಶ ನಮೋಽಸ್ತುತೇ ॥ ೩೫ ॥

ಇತ್ಯೇವಮುಕ್ತ್ವಾ ಶ್ರೀ ಸೂರ್ಯಃ ಸ ಜಗಾಮ ಭಯಾತ್ತತಃ ।
ಆಜಗಾಮ ತಥಾ ಚಂದ್ರ ಅವ್ರೋಚದ್ವಕ್ರಕಂಧರಃ ॥ ೩೬ ॥

---

೩೩. ಇಂದ್ರ:—ಯೋಗಿವರ್ಯನಾದ ಮಹೇಶನೇ, ನಮ್ಮನ್ನು ಮರೆತು ನೀನೇನು ಮಾಡುತ್ತಿರುವೆ ಜಗದ್ಬೀಜನೂ, ಜಗದೀಶನೂ, ಭಕ್ತವತ್ಸಲನೂ ಆದ ನಿನಗೆ ನಮಸ್ಕರಿಸುವೆನು.

೩೪. ಇಂದ್ರನು ಇಂತು ನುಡಿದು ಸುಮ್ಮನಾಗಲು, ಸೂರ್ಯನು ಬಂದು ಭಯದಿಂದ ಸಂಕುಚಿತದೃಷ್ಟಿಯುಳ್ಳವನಾಗಿ ಬಾಗಿಲಿನಲ್ಲಿನಿಂತು ಇಂತು ಸ್ತುತಿಸಿದನು.

೩೫. ಸೂರ್ಯ :—ಜಗದ್ರಕ್ಷಕನಾದ ಮಹಾದೇವನೇ, ನೀನು ಮಾಡುತ್ತಿರುವುದೇನು ? ದೇವತೆಗಳಿಗೆಲ್ಲ ಶ್ರೇಷ್ಠನಾದ ಎಲೈ ಪಾರ್ವತೀರಮಣನೇ, ನಿನಗೆ ಭಕ್ತಿಯಿಂದ ವಂದಿಸುವೆನು. ನಮ್ಮ ಕಷ್ಟವನ್ನು ಪರಿಹರಿಸು.

೩೬ ಸೂರ್ಯದೇವನು ಹೀಗೆ ಸ್ತುತಿಸಿ ಭಯದಿಂದ ಬೇರೆಕಡೆಗೆ ಹೋಗಲು, ಚಂದ್ರನು ಅಲ್ಲಿಗೆ ಬಂದು ತಲೆಬಾಗಿ ನಿಂತು ಈರೀತಿ ಬಿನ್ನವಿಸಿದನು.

॥ ಚಂದ್ರ ಉವಾಚ ॥

ಕಿಂ ಕರೋಷಿ ತ್ರಿಲೋಕೇಶ ತ್ರಿಲೋಚನ ನಮೋಽಸ್ತು ತೇ ।
ಆತ್ಮಾರಾಮ ಸ್ವಯಂಪೂರ್ಣ ಪುಣ್ಯಶ್ರವಣಕೀರ್ತನ ॥ ೩೭ ॥

ಇತ್ಯೇವಮುಕ್ತ್ವಾ ಭೀತಶ್ಚ ವಿರರಾಮ ನಿಶಾಪತಿಃ ।
ಸಮೀರಣೋಽಪಿ ದ್ವಾರಸ್ಥಸ್ಸಂವೀಕ್ಷ್ಯೋವಾಚ ಸಾದರಂ ॥ ೩೮ ॥

॥ ಪವನ ಉವಾಚ ॥

ಕಿಂ ಕರೋಷಿ ಜಗನ್ನಾಥ ಜಗದ್ಬಂಧೋ ನಮೋಽಸ್ತು ತೇ ।
ಧರ್ಮಾರ್ಥಕಾಮಮೋಕ್ಷಾಣಾಂ ಬೀಜರೂಪ ಸನಾತನ ॥ ೩೯ ॥

ಇತ್ಯೇವಂ ಸ್ತವನಂ ಶ್ರುತ್ವಾ ಯೋಗಜ್ಞಾನವಿಶಾರದಃ ।
ತ್ಯಕ್ತುಕಾಮೋ ನ ತತ್ಯಾಜ ಶೃಂಗಾರಂ ಪಾರ್ವತೀಭಯಾತ್ ॥ ೪೦ ॥

---

೩೭. ಚಂದ್ರ:—ತ್ರಿಲೋಕಾಧಿಪತಿಯೂ, ತ್ರಿಲೋಚನನೂ ಆದ ಎಲೈ ಪರಶಿವನೇ, ನೀನೇಕೆ ಉದಾಸೀನನಾಗಿರುವೆ. ಆತ್ಮಾರಾಮನೂ, ಪರಿಪೂರ್ಣ ಸ್ವರೂಪನೂ, ಪುಣ್ಯಶ್ಲೋಕನೂ ಆದ ನಿನಗೆ ನಮಸ್ಕಾರ ಮಾಡುವೆನು.

೩೮. ಚಂದ್ರನು ಇಂತು ನುಡಿದು ಸುಮ್ಮನಾಗಲು. ವಾಯುವು ಆ ಸ್ಥಳಕ್ಕೆ ಬಂದು ಈಶನನ್ನು ಕುರಿತು ಇಂತೆಂದನು.

೩೯. ವಾಯು :— ಜಗನ್ನಾಥನೂ, ಜಗದ್ಬಾಂಧವನೂ ಆದ ಎಲೈ ಶಂಕರನೇ, ನೀನು ಮಾಡುತ್ತಿರುವುದೇನು? ಧರ್ಮಾರ್ಥಕಾಮಮೋಕ್ಷಗಳಿಗೆ ಕಾರಣರೂಪನೂ, ಅನಾದಿಯೂ ಆದ ನಿನಗೆ ಅನಂತ ವಂದನೆಗಳು.

೪೦. ಈಪ್ರಕಾರವಾಗಿ ದೇವತೆಗಳೆಲ್ಲರೂ ಸ್ತುತಿಸುತ್ತಿರಲು, ಯೋಗಿವರ್ಯನಾದ ಶಂಕರನು ರತಿಕೇಳಿಯನ್ನು ಬಿಟ್ಟು ಹೊರಕ್ಕೆ ಬರಲಿಷ್ಟವುಳ್ಳವನಾದರೂ ಪಾರ್ವತಿಯು ಕುಪಿತಳಾಗುವಳೆಂಬ ಭಯದಿಂದ ಎದ್ದು ಬರಲಿಲ್ಲ.

ದೃಷ್ಟ್ವಾ ಸುರಾನ್ ಭಯೋರ್ತಾಂಶ್ಚ ಪುನಃ ಸ್ತೋತುಂ ಸಮುದ್ಯತಾನ್ ।
ವಿಜಹೌ ಸುಖಸಂಭೋಗಂ ಕಂಠಲಗ್ನಾಂ ಚ ಪಾರ್ವತೀಂ ॥ ೪೧ ॥

ಉತ್ತಿಷ್ಠತೋ ಮಹೇಶಸ್ಯ ತ್ರಾಸಲಜ್ಜಾಯುತಸ್ಯ ಚ ।
ಭೂಮೌ ಪಪಾತ ತದ್ವೀರ್ಯಂ ತತಃ ಸ್ಕಂದೋ ಬಭೂವ ಹ ॥ ೪೨ ॥

ಪಶ್ಚಾತ್ತಾಂ ಕಥಯಿಷ್ಯಾಮಿ ಕಥಾಮತಿಮನೋಹರಾಂ ।
ಸ್ಕಂದಜನ್ಮಪ್ರಸಂಗೇ ಚ ಸಾಂಪ್ರತಂ ವಾಂಛಿತಂ ಶ್ರುಣು ॥ ೪೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದ ನಾರಾಯಣ ಸಂವಾದೇ ಪ್ರಥಮೋಽಧ್ಯಾಯಃ

---

೪೧. ಆದರೆ ಭಯವಿಹ್ವಲರಾದ ದೇವತೆಗಳು ಪುನಃ ಸ್ತುತಿಸಲಾರಂಭಿಸಿದು ದನ್ನು ಕಂಡು, ಸಂಭೋಗ ಸುಖವನ್ನೂ, ಕಂಠಾಲಿಂಗನೆಮಾಡಿಕೊಂಡಿರುವ ಪಾರ್ವತಿ ಯನ್ನೂ ಬಿಟ್ಟು ಎದ್ದು ಬಂದನು.

೪೨. ಲಜ್ಜೆಯಿಂದಲೂ, ಭಯದಿಂದಲೂ ಮೇಲಕ್ಕೆದ್ದ ಶಿವನ ರೇತಸ್ಸು ಭೂಮಿಯಮೇಲೆ ಬಿದ್ದಿತು. ಆದರಿಂದಲೇ ಷಣ್ಮುಖನ ಉತ್ಪತ್ತಿಯಾಯಿತು.

೪೩. ಷಣ್ಮುಖೋತ್ಪತ್ತಿಯ ಕಥೆಯು ಪ್ರಸಕ್ತವಾದಾಗ ಅತಿಮನೋಹರವಾದ ಆ ಕಥೆಯನ್ನು ವಿಸ್ತರಿಸಿ ಹೇಳುವೆನು. ಈಗ ಪ್ರಕೃತ ಕಥೆಯನ್ನು ಕೇಳುವವನಾಗು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ನಾರದನಾರಾಯಣಸಂವಾದರೂಪವಾದ
ಮೊದಲನೆಯ ಅಧ್ಯಾಯವು ಮುಗಿದುದು.



## ಮೊದಲನೆಯ ಅಧ್ಯಾಯದ ಸಾರಾಂಶ



ನಾರದನು ನಾರಾಯಣ ಮಹರ್ಷಿಯನ್ನು ಕುರಿತು ಗಣಪತಿಯ ಉತ್ಪತ್ತಿ, ಚರಿತ್ರೆ ಮತ್ತು ಅವನ ಮಹಿಮೆಯನ್ನು ಅರುಹಬೇಕೆಂದು ಕೇಳಲು, ಆ ಮಹರ್ಷಿಯು ಇಂತು ನುಡಿದನು. ಪೂರ್ವದಲ್ಲಿ ರಾಕ್ಷಸರ ಬಾಧೆಗೆ ಸಿಲುಕಿದ ದೇವತೆಗಳ ತೇಜೋರಾಶಿಯಿಂದ ಸತೀದೇವಿಯು ದಕ್ಷಬ್ರಹ್ಮನ ಪುತ್ರಿಯಾಗಿ ಅವತರಿಸಿ ಪರಶಿವನನ್ನು ವರಿಸಿದಳು. ಕೆಲವುಕಾಲದಮೇಲೆ ತನ್ನ ತಂದೆಯು ಮಾಡಿದ ಯಾಗಕ್ಕೆ ತನ್ನ ಪತಿಯನ್ನು ಆಹ್ವಾನಿಸದೆ ದೂಷಿಸಿದುದರಿಂದ ಅವಮಾನಿತಳಾದ ಸತಿಯು ತಂದೆಯ ಯಾಗಶಾಲೆಯಲ್ಲಿಯೇ ಪ್ರಾಣತ್ಯಾಗಮಾಡಿ, ಹಿಮವಂತನ ಪತ್ನಿಯಾದ ಮೇನೆಯ ಗರ್ಭದಲ್ಲಿ ಪಾರ್ವತಿಯೆಂಬ ನಾಮಾಂತರದಿಂದ ಜನ್ಮವೆತ್ತಿ ಆ ಶಿವನನ್ನೇ ಮತ್ತೆ ವರಿಸಿದಳು. ಅನಂತರ ಬಹಳಕಾಲದವರೆಗೆ ಆ ಶಿವಪಾರ್ವತಿಯರು ಶೃಂಗಾರ ಲೋಲುಪರಾಗಿರಲು, ರಾಕ್ಷಸ (ತಾರಕಾಸುರ) ಬಾಧೆಯನ್ನು ತಡೆಯಲಾರದ ದೇವತೆಗಳು ಬ್ರಹ್ಮನ ಮಾತಿನಂತೆ ಶಿವನಿದ್ದೆಡೆಗೆ ಬಂದು ಅವರ ಶೃಂಗಾರಕ್ಕೆ ಭಂಗ ತಂದರು. ಆಗ ಶಿವನ ವೀರ್ಯವು ಭೂಮಿಯಮೇಲೆ ಬಿದ್ದು ಲಾಳದ ಗುತ್ತಿಯಲ್ಲಿ ಷಣ್ಮುಖನ ಉತ್ಪತ್ತಿಯಾಯಿತು.



—|| ಓಂ ||—

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ದ್ವಿತೀಯೋಽಧ್ಯಾಯಃ ||

|| ನಾರಾಯಣ ಉವಾಚ ||

**ತ್ಯಕ್ತ್ವಾ ರತಿಂ ಮಹಾದೇವೋ ದದರ್ಶ ಪುರತಃ ಸುರಾನ್ ।**
**ಪಲಾಯಧ್ವಮಿತಿ ಪ್ರಾಹ ಕೃಪಯಾ ಪಾರ್ವತೀಭಯಾತ್ || ೧ ||**

**ದೇವಾಃ ಪಲಾಯಿತಾ ಭೀತಾಃ ಪಾರ್ವತೀಶಾಪಹೇತುನಾ ।**
**ಸರ್ವಬ್ರಹ್ಮಾಂಡಸಂಹರ್ತಾ ಚಕಂಪೇ ಪಾರ್ವತೀಭಯಾತ್ || ೨ ||**

---

### ಎರಡನೆಯ ಅಧ್ಯಾಯವು

೧. ನಾರಾಯಣ:—ಮಹೇಶ್ವರನು ರತಿಸುಖವನ್ನು ಬಿಟ್ಟುಬಂದು ದೇವತೆಗಳೆಲ್ಲರನ್ನೂ ಕುರಿತು 'ಪಾರ್ವತಿಯು ಶಾಪಕೊಡುವವಳಾದುದರಿಂದ ನೀವೆಲ್ಲರೂ ಓಡಿಹೋಗಿ' ಎಂದು ಹೇಳಿದನು.

೨. ಶಾಪಭೀತರಾದ ದೇವತೆಗಳೆಲ್ಲರೂ ಶಿವನ ಮಾತನ್ನು ಕೇಳಿ ಓಡಿಹೋದರು. ನಿಖಿಲ ಬ್ರಹ್ಮಾಂಡವನ್ನೂ ಸಂಹರಿಸಲು ಶಕ್ತನಾದ ಶಂಕರನೂ ಕೂಡ ಪಾರ್ವತಿಯ ಭಯದಿಂದ ನಡುಗತೊಡಗಿದನು.

ತಲ್ಪಾದುತ್ಥಾಯ ಸಾ ದುರ್ಗಾ ನ ಚ ದೃಷ್ಟ್ವಾ ಪುರಃ ಸುರಾನ್ ।
ಸಮುತ್ಥಿತಂ ಕೋಪವಹ್ನಿಂ ಸ್ತಂಭಯಾಮಾಸ ದೇಹತಃ ॥ ೩ ॥

ಅದ್ಯ ಪ್ರಭೃತಿ ತೇ ದೇವಾ ವ್ಯರ್ಥವೀರ್ಯಾ ಭವಂತ್ವಿತಿ ।
ಶಶಾಪ ದೇವೀ ತಾನ್ ದೇವಾನತಿರುಷ್ಟಾ ಬಭೂವ ಹ ॥ ೪ ॥

ತತಃ ಶಿವಃ ಶಿವಾಂ ದೃಷ್ಟ್ವಾ ಕ್ರೋಧಸಂರಕ್ತಲೋಚನಾಂ ।
ರುದಂತೀಂ ನಮ್ರವದನಾಂ ಲಿಖಂತೀಂ ಧರಣೀತಲಂ ॥ ೫ ॥

ಶಿವಸ್ತಾಂ ದುಃಖಿತಾಂ ದೃಷ್ಟ್ವಾ ಕ್ರೋಧಸಂರಕ್ತಲೋಚನಾಂ ।
ಹಸ್ತೇ ಗೃಹೀತ್ವಾ ದೇವೇಶೋ ವಾಸಯಾಮಾಸ ವಕ್ಷಸಿ ॥ ೬ ॥

---

೩. ಇತ್ತ ಪಾರ್ವತಿಯಾದರೋ ಹಾಸಿಗೆಯಿಂದೆದ್ದು ತನ್ನ ಮುಂದೆ ದೇವತೆಗಳಿಲ್ಲದುದನ್ನು ಕಂಡು, ಉಕ್ಕಿಬಂದ ಕೋಪಾಗ್ನಿಯನ್ನು ತನ್ನ ಶರೀರದಲ್ಲಿಯೇ ತಡೆದುಕೊಂಡಳು.

೪. ಆದರೂ ಅತ್ಯಂತ ಕೋಪಾವಿಷ್ಟಳಾದ ಆ ದುರ್ಗೆಯು 'ತನ್ನ ಸುಖಕ್ಕೆ ಭಂಗ ತಂದ ದೇವತೆಗಳೆಲ್ಲರೂ ಇಂದು ಮೊದಲುಗೊಂಡು ತಮ್ಮ ವೀರ್ಯವನ್ನು ವ್ಯರ್ಥಮಾಡಿಕೊಳ್ಳಲಿ' ಎಂದು ಶಪಿಸಿದಳು.

೫. ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ, ರತಿಭಂಗದಿಂದ ದುಃಖಿತೆಯಾಗಿ, ನಾಚಿಕೆಯಿಂದ ತಲೆಬಾಗಿ, ಭೂಮಿಯನ್ನು ಉಗುರಿನಿಂದ ಕೆರೆಯುತ್ತಿರುವ ಪಾರ್ವತಿಯನ್ನು ಪರಶಿವನು ನೋಡಿದನು.

೬. ರತಿಭಂಗವಾಯಿತೆಂಬ ದುಃಖದಿಂದಲೂ, ದೇವತೆಗಳ ಮೇಲಿನ ಕೋಪದಿಂದಲೂ ಪರವಶಳಾದ ಪಾರ್ವತಿಯನ್ನು ಶಿವನು ಕೈಯ್ಯಲ್ಲಿ ಹಿಡಿದು ತನ್ನ ವಕ್ಷಃಸ್ಥಳಕ್ಕೆ ಅಪ್ಪಿಕೊಂಡನು.

ಅತೀವಭೀತಃ ಸಂತ್ರಸ್ತ ಉವಾಚ ಮಧುರಂ ವಚಃ ।

॥ ಶಂಕರ ಉವಾಚ ॥

ಕಥಂ ರುಷ್ಟಾ ಗಿರಿಶ್ರೇಷ್ಠಕನ್ಯೇ ಧನ್ಯೇ ಮನೋಹರೇ ॥ ೭

ಮಮ ಸೌಭಾಗ್ಯರೂಪೇ ಚ ಪ್ರಾಣಾಧಿಷ್ಠಾತೃದೇವತೇ ।
ಕಿಂ ತೇಽಭೀಷ್ಟಂ ಕರಿಷ್ಯಾಮಿ ವದ ಮಾಂ ಜಗದಂಬಿಕೇ ॥ ೮ ॥

ಬ್ರಹ್ಮಾಂಡಸಂಘೇ ನಿಖಿಲೇ ಕಿಮಸಾಧ್ಯಮಿಹಾವಯೋಃ ।
ಅಹೋ ನಿರಪರಾಧಂ ಮಾಂ ಪ್ರಸನ್ನಾ ಭವ ಸುಂದರಿ ॥ ೯ ॥

ದೈವಾದಜ್ಞಾತದೋಷಸ್ಯ ಶಾಂತಿಂ ಮೇ ಕರ್ತುಮರ್ಹಸಿ ।
ತ್ವಯಾ ಯುಕ್ತಃ ಶಿವೋಽಹಂ ಚ ಸರ್ವೇಷಾಂ ಶಿವದಾಯಕಃ ॥ ೧೦ ॥

---

೭. ತನ್ನನ್ನು ಎಲ್ಲಿ ಬಯ್ಯುವಳೋ ಎಂಬ ಭಯದಿಂದ ಶಿವನು ನಡುಗುತ್ತ ಇಂತು ಮೃದುಮಧುರನುಡಿಯಾಡಿದನು. ಶಂಕರ:— ಗಿರಿರಾಜನಂದಿನಿಯೂ, ಮನೋಹರಳೂ, ಧನ್ಯಳೂ, ಮಾನ್ಯಳೂ ಆದ ಎಲೌ ಪಾರ್ವತಿಯೇ, ನೀನು ಕೋಪಿಸಿಕೊಳ್ಳುವುದೆಂದರೇನು ?

೮. ನನ್ನ ಪ್ರಾಣಗಳಿಗೆ ಅಧಿಷ್ಠಾತೃದೇವತೆಯೂ, ಸೌಭಾಗ್ಯಸ್ವರೂಪಳೂ, ಜಗದಂಬಿಕೆಯೂ ಆದ ನಿನ್ನ ಯಾವ ಇಷ್ಟಾರ್ಥವನ್ನು ನಾನು ಪೂರ್ಣಗೊಳಿಸಿಲ್ಲ? ಈಗ ನಿನಗಾಗಬೇಕಾದುದೇನು ?

೯. ಸಮಸ್ತವಾದ ಬ್ರಹ್ಮಾಂಡದಲ್ಲಿಯೂ ನಮ್ಮಿಬ್ಬರಿಗೆ ಅಸಾಧ್ಯವಾದು ದಾವುದೂ ಇಲ್ಲ. ಆದುದರಿಂದ ಎಲೌ ಸುಂದರಾಂಗಿಯೇ, ನಿರಪರಾಧಿಯಾದ ನನ್ನಲ್ಲಿ ಪ್ರಸನ್ನಳಾಗಿ ನಿನ್ನಿಷ್ಟಾರ್ಥವನ್ನು ತಿಳುಹು.

೧೦. ನನ್ನ ಮನಃಪೂರ್ವಕವಾಗಿ ಮಾಡದಿರುವ ದೈವಿಕವಾದ ಈ ದೋಷ ವೊಂದನ್ನು ನೀನು ಕ್ಷಮಿಸು. ನಾನು ನಿನ್ನೊಡನಿರುವುದರಿಂದಲೇ ಶಿವನೆಂಬ ಹೆಸರಾಂತು ಎಲ್ಲರಿಗೂ ಶಿವಂ (ಮಂಗಳ) ಕರನಾಗಿರುವೆನು.

ತ್ವಯಾ ವಿನಾ ಹೀಶ್ವರಶ್ಚ ಶವತುಲ್ಯೋಽಶಿವಃ ಸದಾ ।
ಪ್ರಕೃತಿಸ್ತ್ವಂ ಚ ಬುದ್ಧಿಸ್ತ್ವಂ ಶಕ್ತಿಸ್ತ್ವಂ ಚ ಕ್ಷಮಾ ದಯಾ ॥ ೧೧ ॥

ತುಷ್ಟಿಸ್ತ್ವಂ ಚ ತಥಾ ಪುಷ್ಟಿಃ ಶಾಂತಿಸ್ತ್ವಂ ಕ್ಷಾಂತಿರೇವ ಚ
ಕ್ಷುತ್ತ್ವಂ ಛಾಯಾ ತಥಾ ನಿದ್ರಾ ತಂದ್ರಾ ಶ್ರದ್ಧಾ ಸುರೇಶ್ವರಿ ॥ ೧೨ ॥

ಸರ್ವಾಧಾರಸ್ವರೂಪಾ ತ್ವಂ ಸರ್ವಬೀಜಸ್ವರೂಪಿಣೀ ।
ಸ್ಮಿತಪೂರ್ವಂ ವದ ವಚಃ ಸಾಂಪ್ರತಂ ಸರಸಂ ಶಿವೇ ॥ ೧೩ ॥

ತ್ವತ್ಕೋಪವಿಷಸಂದಗ್ಧಂ ದ್ರುತಂ ಜೀವಯ ಮಾಂ ಮೃತಂ ॥ ೧೪ ॥

ಶಂಕರಸ್ಯ ವಚಃ ಶ್ರುತ್ವಾ ಕ್ಷಮಾಯುಕ್ತಾ ಚ ಪಾರ್ವತೀ ।
ಉವಾಚ ಮಧುರಂ ದೇವೀ ಹೃದಯೇನ ವಿದೂಯತಾ ॥ ೧೫ ॥

---

೧೧. ನಿನ್ನನ್ನುಳಿದ ಶಿವನು ಸರ್ವಶಕ್ತನಾದರೂ ಶವಸದೃಶನಾಗುವನು. ನೀನೇ ಪ್ರಕೃತಿ, ಬುದ್ಧಿ, ಶಕ್ತಿ, ಕ್ಷಮಾ, ದಯಾ ಮುಂತಾದ ಶಕ್ತಿಸ್ವರೂಪಿಣಿಯಾಗಿರುವೆ.

೧೨, ಎಲೌ ಸುರೇಶ್ವರಿಯೇ, ತುಷ್ಟಿ ಪುಷ್ಟಿಗಳೂ, ಶಾಂತಿ ಕ್ಷಾಂತಿಗಳೂ ನೀನೇ ಆಗಿರುವೆ. ಕ್ಷುತ್ (ಹಸಿವು) ಛಾಯಾ (ಕಾಂತಿ) ನಿದ್ರಾ, ತಂದ್ರಾ, ಶ್ರದ್ಧಾ ಮುಂತಾದ ಸಕಲ ಶಕ್ತಿಸ್ವರೂಪಿಣಿಯೂ ನೀನೇ.

೧೩. ಸರ್ವಬೀಜಸ್ವರೂಪಿಣಿಯೂ; ಸರ್ವಾಧಾರಳೂ ಆದ ಎಲೌ ಪರಶಿವೆಯೇ, ಈಗ ಸ್ಮಿತಮುಖದಿಂದ ನನ್ನನ್ನೊಮ್ಮೆ ಮಾತನಾಡಿಸು.

೧೪. ನಿನ್ನ ಕೋಪವೆಂಬ ವಿಷಾಗ್ನಿಯಿಂದ ಸುಟ್ಟು ಮೃತಪ್ರಾಯನಾಗಿರುವ ನನ್ನನ್ನು ಅಮೃತಧಾರೆಯಂತಿರುವ ನಿನ್ನ ಮಧುರನುಡಿಗಳಿಂದ ಪುನಃ ಬದುಕಿಸು.

೧೫. ಶಂಕರನಾಡಿದ ಈ ಮಾತುಗಳನ್ನು ಕೇಳಿ ಪಾರ್ವತಿಯು ತನ್ನ ದುಗುಡವನ್ನು ಹೃದಯದಲ್ಲಿಯೇ ಅಡಗಿಸಿಕೊಂಡು ಶಾಂತಳಾಗಿ ಕೆಲವು ಮಧುರ ನುಡಿಗಳನ್ನಾಡಿದಳು.

|| ಪಾರ್ವತ್ಯುವಾಚ ||

ಕಿಂತ್ವಾಹಂ ಕಥಯಿಷ್ಯಾಮಿ ಸರ್ವಜ್ಞಂ ಸರ್ವರೂಪಿಣಂ |
ಆತ್ಮಾರಾಮಂ ಪೂರ್ಣಕಾಮಂ ಸರ್ವದೇಹೇಷ್ವವಸ್ಥಿತಂ || ೧೬ ||

ಕಾಮಿನೀಮಾನಸಂ ಕಾಮಮಪ್ರಜ್ಞಂ ಸ್ವಾಮಿನಂ ವದೇತ್ |
ಸರ್ವೇಷಾಂ ಹೃದಯಜ್ಞಂ ಚ ಹೃದೀಷ್ಟಂ ಕಥಯಾಮಿ ಕಿಂ || ೧೭ ||

ಸುಗೋಪ್ಯಂ ಸರ್ವನಾರೀಣಾಂ ಲಜ್ಜಾಜನನಕಾರಣಂ |
ಅಕಥ್ಯಮಪಿ ಸರ್ವಾಸಾಂ ಮಹೇಶ ಕಥಯಾಮಿ ತೇ || ೧೮ ||

ಸುಖೇಷು ಮಧ್ಯೇ ಸ್ತ್ರೀಣಾಂ ಚ ವಿಭವೇಷು ಸುರೇಶ್ವರ |
ಸತ್ಪುಂಸಾ ಸಹ ಸಂಭೋಗೋ ನಿರ್ಜನೇಷು ಪರಂ ಸುಖಂ || ೧೯ ||

---

೧೬. ಪಾರ್ವತಿ :—ಸರ್ವಜ್ಞನೂ, ಸರ್ವರೂಪಿಯೂ, ಆತ್ಮಾರಾಮನೂ ಪರಿಪೂರ್ಣ ಮನೋರಥನೂ, ಸರ್ವವ್ಯಾಪಕನೂ ಆದ ನಿನಗೆ ನಾನು ಏನಹೇಳಲಿ.

೧೭. ತನ್ನ ಕಾಮಿನಿಯ ಮನೋವೃತ್ತಿಯನ್ನು ತಿಳಿಯಲಾಗದ ಪತಿದೇವನಿ ಏನನ್ನಾದರೂ ಹೇಳಬಹುದು. ಎಲ್ಲರ ಮನೋಭಿಪ್ರಾಯವನ್ನೂ ತಿಳಿಯಬಲ್ಲ ನಿನ ನನ್ನ ಇಷ್ಟಾರ್ಥವನ್ನು ಬೇರೆ ಹೇಳಬೇಕೆ ?

೧೮. ಆಗಲಿ. ಎಲೈ ಮಹೇಶನೇ, ಸ್ತ್ರೀಯರು ಗೋಪ್ಯವಾಗಿಟ್ಟುಕೊ ಬೇಕಾದುದೂ, ಎಲ್ಲರಿಗೂ ಹೇಳಬಾರದುದೂ, ಮತ್ತು ಲಜ್ಜಾಸ್ಪದವೂ ಆ ಸಮಾಚಾರವನ್ನು ಈಗ ನಿನಗೆ ಹೇಳುವೆನು.

೧೯. ಸ್ತ್ರೀಯರಿಗೆ ಅಭೀಷ್ಟವಾದ ಸುಖಗಳಲ್ಲಿ ತನಗೆ ಅನುರೂಪನಾ ಪುರುಷನೊಡಗೂಡಿ ನಿರ್ಜನಪ್ರದೇಶದಲ್ಲಿ ಅನುಭವಿಸುವ ಸಂಭೋಗಸುಖವ ಅತ್ಯುತ್ತಮವಾದುದು.

ತದ್ಭಂಗೇನ ಚ ಯದ್ದುಃಖಂ ತತ್ಸಮಂ ನಾಸ್ತಿ ಚ ಸ್ತ್ರಿಯಾಃ ।
ಕಾಂತಾನಾಂ ಕಾಂತವಿಚ್ಛೇದಶೋಕಃ ಪರಮದಾರುಣಃ ॥ ೨೦ ॥

ಕೃಷ್ಣಪಕ್ಷೇ ಯಥಾ ಚಂದ್ರಃ ಕ್ಷೀಯಮಾಣೋ ದಿನೇದಿನೇ ।
ತಥಾ ಕಾಂತಂ ವಿನಾ ಕಾಂತಾ ಕ್ಷೀಣಾ ಕಾಂತೆ ಕ್ಷಣೇ ಕ್ಷಣೇ ॥ ೨೧ ॥

ಚಿಂತಾಜ್ವರಶ್ಚ ಸರ್ವೇಷಾಮುಪತಾಪಶ್ಚ ವಾಸಸಾಂ ।
ಸಾಧ್ವೀನಾಂ ಕಾಂತವಿಚ್ಛೇದಸ್ತುರಗಾನಾಂ ಚ ಮೈಥುನಂ ॥ ೨೨ ॥

ರತಿಭಂಗೋ ದುಃಖಮೇಕಂ ದ್ವಿತೀಯಂ ವೀರ್ಯಪಾತನಂ ।
ಸುಖಾತಿರೇಕಿದುಃಖಂಚ ತೃತೀಯಮನಪತ್ಯತಾ ॥ ೨೩ ॥

ತ್ರಿಲೋಕ್ಯಕಾಂತಂ ಕಾಂತಂ ತ್ವಾಂ ಲಬ್ಧ್ವಾಪಿ ನ ಚ ಮೇ ಸುತಃ ।
ಯಾ ಸ್ತ್ರೀ ಪುತ್ರವಿಹೀನಾ ಚ ಜೀವನಂ ತನ್ನಿರರ್ಥಕಂ ॥ ೨೪ ॥

---

೨೦. ಆ ಸುಖಕ್ಕೆ ಭಂಗವುಂಟಾದರೆ ಸ್ತ್ರೀಯರಿಗೆ ಉಂಟಾಗುವ ದುಃಖವು ಅಸದೃಶವಾದುದು. ಕಾಂತೆಯರಿಗೆ ಕಾಂತನವಿರಹದಿಂದುಂಟಾಗುವ ದುಃಖವು ದಾರುಣವಾದುದು.

೨೧. ಎಲೈ ಪ್ರಾಣಕಾಂತನೇ, ಕೃಷ್ಣಪಕ್ಷದಲ್ಲಿ ಚಂದ್ರನು ದಿನದಿನಕ್ಕೂ ಕ್ಷೀಣನಾಗುವಂತೆ, ಪತಿವಿರಹಿತಳಾದ ಪತಿವ್ರತೆಯು ದಿನದಿನಕ್ಕೂ ಕೃಶಳಾಗುವಳು.

೨೨. ಮನೋವ್ಯಥೆಯು ಸರ್ವರಿಗೂ, ಬಿಸಿಲು ಬಟ್ಟೆಗೂ, ಪತಿವಿರಹವು ಪತಿವ್ರತೆಗೂ, ಸಂಭೋಗವು ಕುದುರೆಗೂ ನಾಶಕಾರಣವಾಗುವುದು.

೨೩. ನನಗೆ ಸಂಭೋಗ ಭಂಗದಿಂದುಂಟಾದ ದುಃಖವು, ನಿನ್ನ ವೀರ್ಯವು ವ್ಯರ್ಥವಾದುದರಿಂದ ದ್ವಿಗುಣಿತವಾಗಿ, ಪುತ್ರಪ್ರಾಪ್ತಿಗೆ ಅವಕಾಶವಿಲ್ಲದುದರಿಂದ ತ್ರಿಗುಣಿತವೂ ದುಸ್ಸಹವೂ ಆಯಿತು.

೨೪. ತ್ರಿಲೋಕೈಕಸುಂದರನಾದ ನಿನ್ನನ್ನು ಪತಿಯಾಗಿ ಪಡೆದರೂ ನಾನು ಅಪುತ್ರವತಿಯಾದೆನಲ್ಲ. ಅಪತ್ಯರಹಿತರಾದ ಸ್ತ್ರೀಯರ ಜನ್ಮವು ನಿರರ್ಥಕವಲ್ಲವೇ ?

ಜನ್ಮಾಂತರಸುಖಂ ಪುಣ್ಯಂ ತಪೋದಾನಸಮುದ್ಭವಂ ।
ಸದ್ವಂಶಜಾತಪುತ್ರಶ್ಚ ಪರತ್ರೇಹ ಸುಖಪ್ರದಃ ॥ ೨೫ ॥

ಸುಪುತ್ರಃ ಸ್ವಾಮಿನೋಂಶಶ್ಚ ಸ್ವಾಮಿತುಲ್ಯಸುಖಪ್ರದಃ ।
ಕುಪುತ್ರಶ್ಚ ಕುಲಾಂಗಾರೋ ಮನಸ್ತಾಪಾಯ ಕೇವಲಂ ॥ ೨೬ ॥

ಸ್ವಾಮೀ ಸ್ವಾಂಶೇನ ಸುಸ್ತ್ರೀಣಾಂ ಗರ್ಭೇ ಜನ್ಮ ಲಭೇದ್ಧ್ರುವಂ ।
ಸಾಧ್ವೀ ಸ್ತ್ರೀ ಮಾತೃತುಲ್ಯಾ ಚ ಸಂತತಂ ಹಿತಕಾರಿಣೀ ॥ ೨೭ ॥

ಅಸಾಧ್ವೀ ವೈರಿತುಲ್ಯಾ ಚ ಶಶ್ವತ್ಸಂತಾಪದಾಯಿನೀ ।
ಮುಖದುಷ್ಟಾ ಯೋನಿದುಷ್ಟಾ ಚಾಸಾಧ್ವೀತಿ ತ್ರಿಧಾ ಸ್ಮೃತಾ ॥ ೨೮ ॥

---

೨೫. ತಪೋದಾನಗಳಿಂದ ಪಡೆದ ಪುಣ್ಯವು ಜನ್ಮಾಂತರದಲ್ಲಿ ಸುಖಪ್ರದ ವಾಗುವುದು. ಸದ್ವಂಶದಲ್ಲಿ ಹುಟ್ಟಿದ ಮಗನಾದರೋ ಇಹಪರಗಳಲ್ಲೂ ಸುಖವ ನ್ನೀಯುವನು.

೨೬. ಸತ್ಪುತ್ರನು ಪತಿಯ ಅಂಶದಿಂದ ಜನಿಸಿ ಮಾತೆಯನ್ನು ಪ್ರೀತಿಯಿಂದ ಸೇವಿಸುವನು. ಕುಪುತ್ರನಾದರೋ ಕುಲನಾಶಕ್ಕೆ ಕಾರಣನಾಗುವುದಲ್ಲದೆ, ಯಾವ ಜ್ಜೀವವೂ ತಾಯಿಯ ಮನೋವ್ಯಥೆಗೆ ಕಾರಣನಾಗುವನು.

೨೭. ಪತಿಯು ಪತಿವ್ರತೆಯಾದ ಪತ್ನಿಯ ಗರ್ಭದಲ್ಲಿ ತನ್ನ ಅಂಶದಿಂದಲೇ ಪ್ರವೇಶಿಸಿ ಪುತ್ರನಾಗಿ ಜನಿಸುವನು. ಸಾಧ್ವೀಮಣಿಯು ಸರ್ವದಾ ಪತಿಯ ಹಿತವನ್ನೇ ಬಯಸುವುದರಿಂದ ತಾಯಿಗೆ ಸಮವೆನಿಸುವಳು

೨೮. ಪದೆಪದೆ ದುಃಖಸಂಕಟಗಳನ್ನೊದಗಿಸುವ ದುಷ್ಟಸ್ತ್ರೀಯು ಪತಿಗೆ ಶತ್ರುಸದೃಶಳಾಗುವಳು. ದುಷ್ಟಸ್ತ್ರೀಯರಲ್ಲಿ ಕಠಿನವಾಕ್ಯವಾಡುವವಳನ್ನು ಮುಖ ದುಷ್ಟಳೆಂದೂ, ದುರಾಚಾರಪರಳನ್ನು ಯೋನಿದುಷ್ಟಳೆಂದೂ, ಪತಿನಿಂದಾಪರಳನ್ನು ಅಸಾಧ್ವಿಯೆಂದೂ ಮೂರುವಿಧವಾಗಿ ಹೇಳುವರು.

ಕಿಮುಪಾಯಂ ಕರಿಷ್ಯಾಮಿ ವದ ಯೋಗೀಶ್ವರೇಶ್ವರ ।
ಉಪಾಯಸಿಂಧೋ ತಪಸಾಂ ಸರ್ವೇಷಾಂ ಚ ಫಲಪ್ರದ ॥ ೨೯ ॥

ಇತ್ಯುಕ್ತ್ವಾ ಪಾರ್ವತೀ ದೇವೀ ನಮ್ರವಕ್ತ್ರಾ ಬಭೂವ ಹ ।
ಪ್ರಹಸ್ಯ ಶಂಕರೋ ದೇವೋ ಬೋಧಯಾಮಾಸ ಪಾರ್ವತೀಂ ॥ ೩೦ ॥

ಸತ್ಪುತ್ರಬೀಜಂ ಸುಖದಂ ತಾಪನಾಶನಕಾರಣಂ ।
ಮಿತಂ ಸ್ನಿಗ್ಧಂ ಸುರುಚಿರಂ ಪ್ರವಕ್ತುಮುಪಚಕ್ರಮೇ ॥ ೩೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದ–ನಾರಾಯಣಸಂವಾದೇ ದ್ವಿತೀಯೋಽಧ್ಯಾಯಃ

---

೨೯. ಯೋಗೀಶ್ವರನಾದ ಎಲೈ ಶಂಕರನೇ, ಸಕಲರ ತಪಃಫಲದಾಯಕನೂ, ಉಪಾಯಗಳಿಗೆ ಗಣಿಯೂ ಆದ ನೀನು ಪುತ್ರಪ್ರಾಪ್ತಿಗೆ ಯಾವ ಉಪಾಯಮಾಡಬೇಕೆಂದು ನನಗೆ ಅಪ್ಪಣೆಮಾಡು.

೩೦. ಪಾರ್ವತಿಯು ಈ ರೀತಿಯಾಗಿ ನುಡಿದು ತಲೆಬಾಗಿ ನಿಂತುಕೊಳ್ಳಲು, ಶಂಕರನು ಹಸನ್ಮುಖನಾಗಿ ಆಕೆಯನ್ನು ಕುರಿತು ಈ ರೀತಿಯಾಗಿ ಬೋಧಿಸಿದನು.

೩೧. ಸತ್ಪುತ್ರಪ್ರಾಪ್ತಿಗೆ ಕಾರಣವೂ, ಮನಃಕಷಾಯನಾಶಕವೂ, ಸುಖಕರವೂ, ಮನೋಹರವೂ, ಮಿತಾಕ್ಷರಗುಂಫಿತವೂ ಆದ ಮಹಾದೇವನ ಆ ಮಧುರ ವಾಣಿಯು ಮುಂದೆ ಹೇಳುವಂತಿದ್ದಿತು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.



## ಎರಡನೆಯ ಅಧ್ಯಾಯದ ಸಾರಾಂಶ

ದಯಾಸಮುದ್ರನಾದ ಶಂಕರನು, ದೇವತೆಗಳು ಪಾರ್ವತಿಯ ಶಾಪಕ್ಕೊಳಗಾಗಬಾರದೆಂದು ಬಗೆದು, ಎಲ್ಲರನ್ನೂ ಹೊರಟುಹೋಗುವಂತೆ ಹೇಳಲು, ಅವನ ಆಜ್ಞೆಯಂತೆ ದೇವತೆಗಳೆಲ್ಲರೂ ಕಣ್ಮರೆಯಾದರು. ಇತ್ತ ಪಾರ್ವತಿಯು ಎಚ್ಚೆತ್ತು, ತನ್ನ ಮುಂದೆ ದೇವತೆಗಳಿಲ್ಲದುದನ್ನು ಕಂಡು ಅವರೆಲ್ಲರೂ ವ್ಯರ್ಥವೀರ್ಯರಾಗುವಂತೆ ಶಪಿಸಿದಳು. ಮತ್ತು ದುಃಖ ಸಂಕೋಚಗಳಿಂದ ಶಿವನ ಸಮೀಪಕ್ಕೆ ಬಂದು ತಲೆಬಾಗಿ ನಿಂತಳು. ಆಗ ಪರಶಿವನು ಅವಳನ್ನು ಅಪ್ಪಿಕೊಂಡು ನಿನ್ನ ಇಷ್ಟಾರ್ಥವೇನೆಂದು ಕೇಳಿದನು. ಪಾರ್ವತಿಯು ತನಗೆ ರತಿವಿಚ್ಛೇದದಿಂದ ಅಪಾರ ದುಃಖವಾಯಿತೆಂದೂ, ತಾನು ಅಪುತ್ರವತಿಯಾದೆನೆಂದೂ ವಿಜ್ಞಾಪಿಸಿಕೊಂಡು, ಅಪುತ್ರವತಿಯಾದ ಹೆಂಗಸಿನ ಜನ್ಮವು ವ್ಯರ್ಥವಾದುದರಿಂದ ತನಗೆ ಸತ್ಪುತ್ರನನ್ನು ಕರುಣಿಸಬೇಕೆಂಮ ಬೇಡಿಕೊಂಡಳು.

—॥ ಓಂ ॥—

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ತೃತೀಯೋऽಧ್ಯಾಯಃ ॥

**॥ ಶ್ರೀ ಮಹಾದೇವ ಉವಾಚ ॥**

**ಶೃಣು ಪಾರ್ವತಿ ವಕ್ಷ್ಯಾಮಿ ತವ ಭದ್ರಂ ಭವಿಷ್ಯತಿ ।**
**ಉಪಾಯತಃ ಕಾರ್ಯಸಿದ್ಧಿರ್ಭವತ್ಯೇವ ಜಗತ್ತ್ರಯೇ ॥ ೧ ॥**

**ಸರ್ವವಾಂಛಿತಸಿದ್ಧೇಸ್ತು ಬೀಜರೂಪಂ ಸುಮಂಗಲಂ ।**
**ಮನಸಃ ಪ್ರೀತಿಜನನಮುಪಾಯಂ ಕಥಯಾಮಿ ತೇ ॥ ೨ ॥**

---

### ಮೂರನೆಯ ಅಧ್ಯಾಯವು

೧. ಶ್ರೀಮಹಾದೇವ:— ಎಲೌ ಪಾರ್ವತಿಯೇ, ನನ್ನ ಹಿತವಚನಗಳ ನ್ನಾಲಿಸು. ನಿನಗೆ ಮಂಗಳವಾಗುವುದು. ಮೂರುಲೋಕದಲ್ಲಿಯೂ ಉಪಾಯದಿಂದ ಕಾರ್ಯಸಿದ್ಧಿಯುಂಟಾಗುವುದು.

೨. ಸಕಲೇಷ್ಟಾರ್ಥಸಿದ್ಧಿಗೆ ಬೀಜರೂಪವೂ, ಮಂ[illegible]ಕವೂ, [illegible] ಸ್ಸಂತೋಷಕರವೂ ಆದ ಉಪಾಯವನ್ನು ಹೇಳುವೆನು ಕೆ[illegible]



ಹರೇರಾರಾಧನಂ ಕೃತ್ವಾ ವ್ರತಂ ಕುರು ವರಾನನೇ ।
ವ್ರತಂ ಚ ಪುಣ್ಯಕಂ ನಾಮ ವರ್ಷಮೇಕಂ ಕರಿಷ್ಯಸಿ ॥ ೩ ॥

ಮಹಾಕಠೋರಬೀಜಂ ಚ ವಾಂಛಾಕಲ್ಪತರುಂ ಪರಂ ।
ಸುಖದಂ ಪುಣ್ಯದಂ ಸಾರಂ ಪುತ್ರದಂ ಸರ್ವಸೌಖ್ಯದಂ ॥ ೪ ॥

ನದೀನಾಂ ಚ ಯಥಾ ಗಂಗಾ ದೇವಾನಾಂ ಚ ಹರಿರ್ಯಥಾ ।
ವೈಷ್ಣವಾನಾಂ ಯಥಾऽಹಂ ಚ ದೇವೀನಾಂ ತ್ವಂ ಯಥಾ ಪ್ರಿಯೇ ॥ ೫ ॥

ವರ್ಣಾನಾಂ ಚ ಯಥಾ ವಿಪ್ರಸ್ತೀರ್ಥಾನಾಂ ಪುಷ್ಕರಂ ಯಥಾ ।
ಪುಷ್ಪಾಣಾಂ ಪಾರಿಜಾತಂ ಚ ಪತ್ರಾಣಾಂ ತುಲಸೀ ಯಥಾ ॥ ೬ ॥

ಯಥಾ ಪುಣ್ಯಪ್ರದಾನಾಂ ಚ ತಿಥಿರೇಕಾದಶೀ ಸ್ಮೃತಾ ।
ರವಿವಾರಶ್ಚ ವಾರಾಣಾಂ ಯಥಾ ಪುಣ್ಯಪ್ರದಃ ಶಿವೇ ॥
ಮಾಸಾನಾಂ ಮಾರ್ಗಶೀರ್ಷಶ್ಚ ಋತೂನಾಂ ಮಾಧವೋ ಯಥಾ ॥ ೭ ॥

---

೩. ಎಲೌ ಕಮಲಮುಖಿಯೇ, ಶ್ರೀಹರಿಯನ್ನು ಪೂಜಿಸಿ ಪುಣ್ಯಕವೆಂಬ ವ್ರತವನ್ನು ಒಂದುವರ್ಷಕಾಲ ಭಕ್ತಿಯಿಂದ ಆಚರಿಸು.

೪. ಈ ವ್ರತವು ಅತ್ಯಂತ ಕಠಿಣವಾದರೂ ಕಲ್ಪವೃಕ್ಷದಂತೆ ಇಷ್ಟಾರ್ಥದಾಯಕವೂ, ಪುತ್ರಪೌತ್ರಾದಿ ಸಕಲಸಂಪತ್ಪ್ರದವೂ, ಪುಣ್ಯಕರವೂ, ಶ್ರುತಿಸಾರವೂ ಆದುದು.

೫–೬. ನದಿಗಳಲ್ಲಿ ಗಂಗೆಯೂ, ದೇವತೆಗಳಲ್ಲಿ ಶ್ರೀಹರಿಯೂ, ವಿಷ್ಣುಭಕ್ತರಲ್ಲಿ ಶಿವನೂ, ದೇವಿಯರಲ್ಲಿ ಪಾರ್ವತಿಯೂ, ಚತುರ್ವರ್ಣದವರಲ್ಲಿ ಬ್ರಾಹ್ಮಣನೂ, ಕ್ಷೇತ್ರಗಳಲ್ಲಿ ಪುಷ್ಕರವೂ, ಪುಷ್ಪಗಳಲ್ಲಿ ಪಾರಿಜಾತವೂ, ಪತ್ರೆಗಳಲ್ಲಿ ತುಳಸಿಯೂ ಶ್ರೇಷ್ಠವಾಗಿರುವಂತೆ, ವ್ರತಗಳಲ್ಲಿ ಪುಣ್ಯಕವ್ರತವು ಶ್ರೇಷ್ಠವಾದುದು

೭–೮. ಏಕಾದಶಿಯು ಪುಣ್ಯತಿಥಿಗಳಲ್ಲಿಯೂ, ಭಾನುವಾರವು ವಾರಗಳಲ್ಲಿಯೂ, ಮಾರ್ಗಶೀರ್ಷವು ಮಾಸಗಳಲ್ಲಿಯೂ, ವಸಂತಋತುವು ಋತುಗಳಲ್ಲಿಯೂ, ಈಶ್ವರವತ್ಸರವು ಸಂವತ್ಸರಗಳಲ್ಲಿಯೂ, ಕೃತಯುಗವು ಯುಗಗಳಲ್ಲಿಯೂ, ವಿದ್ಯಾಗುರುವು ಪೂಜ್ಯರಲ್ಲಿಯೂ, ತಾಯಿಯು ಹಿರಿಯರಲ್ಲಿಯೂ, ಸಾಧ್ವೀಸತಿಯು ಆಪ್ತ

ಸಂವತ್ಸರೋ ವತ್ಸರಾಣಾಂ ಯುಗಾನಾಂ ಚ ಕೃತಂ ಯಥಾ ।
ವಿದ್ಯಾಪ್ರದಶ್ಚ ಪೂಜ್ಯಾನಾಂ ಗುರೂಣಾಂ ಜನನೀ ಯಥಾ
ಸಾಧ್ವೀ ಪತ್ನೀ ಯಥಾಪ್ತಾನಾಂ ವಿಶ್ವಸ್ತಾನಾಂ ಮನೋ ಯಥಾ ॥ ೮ ॥

ಯಥಾ ಧನಾನಾಂ ರತ್ನಂ ಚ ಪ್ರಿಯಾಣಾಂ ಚ ಯಥಾ ಪತಿಃ ।
ಯಥಾ ಪುತ್ರಶ್ಚ ಬಂಧೂನಾಂ ವೃಕ್ಷಾಣಾಂ ಕಲ್ಪಪಾದಪಃ ॥ ೯ ॥

ಫಲಾನಾಂ ವೈ ಚೂತಫಲಂ ವರ್ಷಾಣಾಂ ಭಾರತಂ ಯಥಾ ।
ವೃಂದಾವನಂ ವನಾನಾಂ ಚ ಶತರೂಪಾ ಚ ಯೋಷಿತಾಂ ॥ ೧೦ ॥

ಯಥಾ ಕಾಶೀ ಪುರೀಣಾಂ ಚ ಸೂರ್ಯಸ್ತೇಜಸ್ವಿನಾಂ ಯಥಾ ।
ಯಥೇಂದುಃ ಸುಖದಾನಾಂ ಚ ಸುಂದರಾಣಾಂ ಚ ಮನ್ಮಥಃ ॥ ೧೧ ॥

ಶಾಸ್ತ್ರಾಣಾಂ ಚ ಯಥಾ ವೇದಾಃ ಸಿದ್ಧಾನಾಂ ಕಪಿಲೋ ಯಥಾ ।
ಹನೂಮಾನ್ವಾನರಾಣಾಂ ಚ ಕ್ಷೇತ್ರಾಣಾಂ ಬ್ರಾಹ್ಮಣಾನನಂ ॥ ೧೨ ॥

---

ರಲ್ಲಿಯೂ, ಮನಸ್ಸು ನಂಬಲರ್ಹವಾದವುಗಳಲ್ಲಿಯೂ ಹೇಗೆ ಉತ್ತಮವೆನಿಸುವುದೋ ಹಾಗೆ ಪುಣ್ಯಕವ್ರತವು ವ್ರತಗಳಲ್ಲಿ ಉತ್ತಮವಾದುದು.

೯–೧೦. ಧನಗಳಲ್ಲಿ ರತ್ನವೂ, ಪ್ರೀತಿಪಾತ್ರರಲ್ಲಿ ಪತಿಯೂ, ಬಂಧುಗಳಲ್ಲಿ ಪುತ್ರನೂ, ವೃಕ್ಷಗಳಲ್ಲಿ ಕಲ್ಪವೃಕ್ಷವೂ, ಹಣ್ಣುಗಳಲ್ಲಿ ಮಾವಿನಹಣ್ಣೂ, ವರ್ಷಗಳಲ್ಲಿ ಭಾರತವರ್ಷವೂ, ವನಗಳಲ್ಲಿ ವೃಂದಾವನವೂ, ಸ್ತ್ರೀಯರಲ್ಲಿ ಶತರೂಪೆ(ಸ್ವಾಯಂಭೂ ಮನುವಿನ ಪತ್ನಿ) ಯೂ ಹೇಗೆ ಶ್ರೇಷ್ಠರೋ ಹಾಗೆ ವ್ರತಗಳಲ್ಲಿ ಪುಣ್ಯಕವ್ರತವು ಶ್ರೇಷ್ಠವೆನಿಸಿರುವುದು.

೧೧–೧೨. ಕಾಶಿಯು ಪಟ್ಟಣಗಳಿಗೂ, ಸೂರ್ಯನು ತೇಜಸ್ವಿಗಳಿಗೂ, ಚಂದ್ರನು ಆಹ್ಲಾದಜನಕರಿಗೂ, ಮನ್ಮಥನು ಸುಂದರರಿಗೂ, ವೇದವು ಶಾಸ್ತ್ರಗಳಿಗೂ, ಕಪಿಲನು ಸಿದ್ಧರಿಗೂ, ಹನುಮಂತನು ವಾನರರಿಗೂ, ಬ್ರಾಹ್ಮಣನ ಮುಖವು ಕ್ಷೇತ್ರಗಳಿಗೂ ಅಗ್ರಗಣ್ಯವಾಗಿರುವಂತೆ, ಪುಣ್ಯಕವ್ರತವು ವ್ರತಗಳಲ್ಲಿ ಅಗ್ರಗಣ್ಯವಾದುದು.

ಯಶೋದಾನಾಂ ಯಥಾ ವಿದ್ಯಾ ಕವಿತಾ ಚ ಮನೋಹರಾ ।
ಆಕಾಶೋ ವ್ಯಾಪಕಾನಾಂ ಚ ಹ್ಯಂಗಾನಾಂ ಲೋಚನಂ ಯಥಾ ॥ ೧೩ ॥

ವಿಭವಾನಾಂ ಹರಿಕಥಾ ಸುಖಾನಾಂ ಹರಿಚಿಂತನಂ ।
ಸ್ಪರ್ಶಾನಾಂ ಪುತ್ರಸಂಸ್ಪರ್ಶೋ ಹಿಂಸ್ರಾಣಾಂ ಚ ಯಥಾ ಖಲಃ ॥ ೧೪ ॥

ಪಾಪಾನಾಂ ಚ ಯಥಾ ಮಿಥ್ಯಾ ಪಾಪಿನಾಂ ಪುಂಶ್ಚಲೀ ಯಥಾ ।
ಪುಣ್ಯಾನಾಂ ಚ ಯಥಾ ಸತ್ಯಂ ತಪಸಾಂ ಹರಿಸೇವನಂ ॥ ೧೫ ॥

ಯಥಾ ಘೃತಂ ಚ ಗವ್ಯಾನಾಂ ಯಥಾ ಬ್ರಹ್ಮಾ ತಪಸ್ವಿನಾಂ ।
ಅಮೃತಂ ಭಕ್ಷ್ಯವಸ್ತೂನಾಂ ಸಸ್ಯಾನಾಂ ಧಾನ್ಯಕಂ ಯಥಾ ॥ ೧೬ ॥

---

೧೩–೧೪. ಕೀರ್ತಿದಾಯಕವಾದವುಗಳಲ್ಲಿ ವಿದ್ಯೆಯೂ, ಮನೋಹರವಾದವುಗಳಲ್ಲಿ ಕವಿತೆಯೂ, ವಿಸ್ತಾರವಾದವುಗಳಲ್ಲಿ ಆಕಾಶವೂ, ಇಂದ್ರಿಯಗಳಲ್ಲಿ ನಯನವೂ, ಪುಣ್ಯಕರವಾದವುಗಳಲ್ಲಿ ಹರಿಕಥಾಶ್ರವಣವೂ, ಸುಖಗಳಲ್ಲಿ ಹರಿಸ್ಮರಣೆಯೂ, ಸ್ಪರ್ಶದಲ್ಲಿ ಪುತ್ರಗಾತ್ರಸಂಸ್ಪರ್ಶವೂ ಮೇಲೆನಿಸಿರುವಂತೆ, ವ್ರತಗಳಲ್ಲಿ ಪುಣ್ಯಕವ್ರತವು ಮೇಲಾದುದು.

೧೫–೧೬. ದುಷ್ಟನು ಹಿಂಸಕರಲ್ಲಿಯೂ, ಸುಳ್ಳುಮಾತು ಪಾಪಗಳಲ್ಲಿಯೂ, ವೇಶ್ಯಾಸ್ತ್ರೀಯು ಪಾಪಿಗಳಲ್ಲಿಯೂ ಹೇಗೆ ಅಗ್ರಗಣ್ಯರೋ, ಸತ್ಯವಚನವು ಪುಣ್ಯಗಳಲ್ಲಿಯೂ, ಹರಿಸೇವೆಯು ತಪಸ್ಸುಗಳಲ್ಲಿಯೂ, ತುಪ್ಪವು ಪಂಚಗವ್ಯದಲ್ಲಿಯೂ, ಬ್ರಹ್ಮನು ತಪಸ್ವಿಗಳಲ್ಲಿಯೂ, ಅಮೃತವು ಆಹಾರದಲ್ಲಿಯೂ, ಕೊತ್ತಂಬರಿಯು ಸಸ್ಯಗಳಲ್ಲಿಯೂ ಹೇಗೆ ಶ್ರೇಷ್ಠವೆನಿಸಿರುವುದೋ, ಹಾಗೆ ಪುಣ್ಯಕವ್ರತವು ವ್ರತಗಳಲ್ಲಿ ಶ್ರೇಷ್ಠವಾದುದು. (ಉತ್ತಮ ವಸ್ತುಗಳಿಗೆ ಅತ್ಯುತ್ತಮ ವಸ್ತುಗಳನ್ನು ಹೋಲಿಸುವಂತೆ, ನೀಚವಸ್ತುಗಳಿಗೆ ಅತಿನೀಚವಸ್ತುಗಳನ್ನು ಹೋಲಿಸಿರುವ ಈ ಸ್ಥಳದಲ್ಲಿ 'ಅತಿ' ಎಂಬ ಪದದ ಶ್ರೇಷ್ಠಾರ್ಥವನ್ನು ಮಾತ್ರ ಸಾಧಾರಣ ಧರ್ಮವೆಂದು ತಿಳಿಯಬೇಕು.)

ಪುಣ್ಯದಾನಾಂ ಯಥಾ ತೋಯಂ ಶುದ್ಧಾನಾಂ ಚ ಹುತಾಶನಃ ।
ಸುವರ್ಣಂಚ ತೈಜಸಾನಾ ಮಿಷ್ಟಾನಾಂ ಪ್ರಿಯಭಾಷಣಂ　　|| ೧೭ ||

ಗರುಡಃ ಪಕ್ಷಿಣಾಂ ಚೈವ ಹಸ್ತಿನಾಮಿಂದ್ರವಾಹನಂ ।
ಯೋಗೀನಾಂ ಚ ಕುಮಾರಶ್ಚ ದೇವರ್ಷೀಣಾಂ ಚ ನಾರದಃ　　|| ೧೮ ||

ಗಂಧರ್ವಾಣಾಂ ಚಿತ್ರರಥೋ ಜೀವೋ ಬುದ್ಧಿಮತಾಂ ಯಥಾ ।
ಸುಕವೀನಾಂ ಯಥಾ ಶುಕ್ರಃ ಕಾವ್ಯಾನಾಂ ಚ ಪುರಾಣಕಂ　　|| ೧೯ ||

ಸ್ರೋತಸ್ವತಾಂ ಸಮುದ್ರಶ್ಚ ಯಥಾ ಪೃಥ್ವೀ ಕ್ಷಮಾವತಾಂ ।
ಲಾಭಾನಾಂ ಚ ಯಥಾ ಮುಕ್ತಿರ್ಹರಿಭಕ್ತಿಶ್ಚ ಸಂಪದಾಂ　　|| ೨೦ ||

ಪವಿತ್ರಾಣಾಂ ವೈಷ್ಣವಾಶ್ಚ ವರ್ಣಾನಾಂ ಪ್ರಣವೋ ಯಥಾ ।
ವಿಷ್ಣುಮಂತ್ರಶ್ಚ ಮಂತ್ರಾಣಾಂ ಬೀಜಾನಾಂ ಪ್ರಕೃತಿರ್ಯಥಾ　　|| ೨೧ ||

---

೧೭–೧೮. ಪುಣ್ಯಕರವಾದವುಗಳಲ್ಲಿ ತೀರ್ಥದಂತೆಯೂ, ಪರಿಶುದ್ಧವಾದವುಗಳಲ್ಲಿ ಅಗ್ನಿಯಂತೆಯೂ, ತೈಜಸವಸ್ತುಗಳಲ್ಲಿ ಸುವರ್ಣದಂತೆಯೂ. ಇಷ್ಟವಾದವುಗಳಲ್ಲಿ ಪ್ರಿಯನುಡಿಯಂತೆಯೂ, ಪಕ್ಷಿಗಳಲ್ಲಿ ಗರುಡನಂತೆಯೂ, ಆನೆಗಳಲ್ಲಿ ಐರಾವತದಂತೆಯೂ, ಯೋಗಿಗಳಲ್ಲಿ ಷಣ್ಮುಖನಂತೆಯೂ, ದೇವರ್ಷಿಗಳಲ್ಲಿ ನಾರದನಂತೆಯೂ, ವ್ರತಗಳಲ್ಲಿ ಪುಣ್ಯಕವ್ರತವು ಉತ್ತಮವಾದುದು.

೧೯–೨೦. ಚಿತ್ರರಥನು ಗಂಧರ್ವರಲ್ಲಿಯೂ, ಬೃಹಸ್ಪತಿಯು ಪಂಡಿತರಲ್ಲಿಯೂ, ಶುಕ್ರಾಚಾರ್ಯನು ಕವಿಗಳಲ್ಲಿಯೂ, ಪುರಾಣವು ಕಾವ್ಯಗಳಲ್ಲಿಯೂ. ಸಮುದ್ರವು ಜಲಾಶಯಗಳಲ್ಲಿಯೂ, ಪೃಥ್ವಿಯು ಕ್ಷಮಾವಂತರಲ್ಲಿಯೂ, ಮುಕ್ತಿಯು ಲಾಭಗಳಲ್ಲಿಯೂ, ಹರಿಭಕ್ತಿಯು ಸಂಪತ್ತಿನಲ್ಲಿಯೂ ಶ್ರೇಷ್ಠವಾಗಿರುವಂತೆ, ಪುಣ್ಯಕವ್ರತವು ವ್ರತಗಳಲ್ಲಿ ಶ್ರೇಷ್ಠವಾದುದು.

೨೧–೨೭. ಪವಿತ್ರರಲ್ಲಿ ವಿಷ್ಣುಭಕ್ತರಂತೆಯೂ, ವರ್ಣಗಳಲ್ಲಿ ಓಂಕಾರದಂತೆಯೂ, ಮಂತ್ರಗಳಲ್ಲಿ ವಿಷ್ಣುಮಂತ್ರದಂತೆಯೂ, ಬೀಜಗಳಲ್ಲಿ ಮೂಲಪ್ರಕೃತಿಯಂತೆಯೂ, ಪಂಡಿತರಲ್ಲಿ ಸರಸ್ವತಿಯಂತೆಯೂ, ಛಂದಸ್ಸಿನಲ್ಲಿ ಗಾಯತ್ರಿಯಂ

ವಿದುಷಾಂ ಚ ಯಥಾ ವಾಣೀ ಗಾಯತ್ರೀ ಛಂದಸಾಂ ಯಥಾ ।
ಯಥಾ ಕುಬೇರೋ ಯಕ್ಷಾಣಾಂ ಸರ್ಪಾಣಾಂ ವಾಸುಕಿರ್ಯಥಾ ॥ ೨೨ ॥

ಯಥಾ ಪಿತಾ ತೇ ಶೈಲಾನಾಂ ಗವಾಂ ಚ ಸುರಭಿರ್ಯಥಾ ।
ವೇದಾನಾಂ ಸಾಮವೇದಶ್ಚ ತೃಣಾನಾಂ ಚ ಯಥಾ ಕುಶಃ ॥ ೨೩ ॥

ಸುಖದಾನಾಂ ಯಥಾ ಲಕ್ಷ್ಮೀರ್ಮನೋ ವೈ ಶೀಘ್ರಗಾಮಿನಾಂ ।
ಅಕ್ಷರಾಣಾಮಕಾರಶ್ಚ ಯಥಾ ತಾತೋ ಹಿತೈಷಿಣಾಂ ॥ ೨೪ ॥

ಶಾಲಗ್ರಾಮಶ್ಚ ಮೂರ್ತೀನಾಂ ಪರ್ಶೂನಾಂ ವಿಷ್ಣುಪಂಜರಃ ।
ಚತುಷ್ಪದಾನಾಂ ಪಂಚಾಸ್ಯೋ ಮಾನವೋ ಜೀವಿನಾಂ ಯಥಾ ॥ ೨೫ ॥

ಯಥಾ ಸ್ವಾನ್ತಂ ಚೇಂದ್ರಿಯಾಣಾಂ ಮಂದಾಗ್ನಿಶ್ಚ ರುಜಾಂ ಯಥಾ ।
ಬಲಿನಾಂ ಚ ಯಥಾ ಶಕ್ತಿರಹಂ ಶಕ್ತಿಮತಾಂ ಯಥಾ ॥ ೨೬ ॥

---

ತೆಯೂ, ಯಕ್ಷರಲ್ಲಿ ಕುಬೇರನಂತೆಯೂ, ಸರ್ಪಗಳಲ್ಲಿ ವಾಸುಕಿಯಂತೆಯೂ, ವ್ರತಗಳಲ್ಲಿ ಪುಣ್ಯಕವ್ರತವು ಅತ್ಯುತ್ತಮವಾದುದು.

೨೩–೨೪. ಪರ್ವತಗಳಲ್ಲಿ ಹಿಮಾಲಯದಂತೆಯೂ, ಗೋವುಗಳಲ್ಲಿ ಕಾಮಧೇನುವಿನಂತೆಯೂ, ವೇದಗಳಲ್ಲಿ ಸಾಮವೇದದಂತೆಯೂ, ತೃಣಗಳಲ್ಲಿ ದರ್ಭೆಯಂತೆಯೂ, ಸುಖಪ್ರದರಲ್ಲಿ ಲಕ್ಷ್ಮಿಯಂತೆಯೂ, ವೇಗಗಾಮಿಗಳಲ್ಲಿ ಮನಸ್ಸಿನಂತೆಯೂ, ಅಕ್ಷರಗಳಲ್ಲಿ ಅಕಾರದಂತೆಯೂ, ಹಿತಕಾರಿಗಳಲ್ಲಿ ತಂದೆಯಂತೆಯೂ, ವ್ರತಗಳಲ್ಲಿ ಪುಣ್ಯಕವ್ರತವು ಅತ್ಯುತ್ಕೃಷ್ಟವಾದುದು.

೨೫–೨೬. ದೇವತಾಪ್ರತಿಮೆಗಳಲ್ಲಿ ಸಾಲಿಗ್ರಾಮವೂ, ಪರಶುಗಳಲ್ಲಿ ವಿಷ್ಣುಪಂಜರವೂ, ಚತುಷ್ಪಾದಿಗಳಲ್ಲಿ ಸಿಂಹವೂ, ಜೀವಿಗಳಲ್ಲಿ ಮನುಷ್ಯನೂ, ಇಂದ್ರಿಯಗಳಲ್ಲಿ ಮನಸ್ಸೂ, ರೋಗಗಳಲ್ಲಿ ಅಗ್ನಿಮಾಂದ್ಯವೂ, ಬಲಿಷ್ಠರಲ್ಲಿ ಶಕ್ತಿದೇವತೆಯೂ, ಶಕ್ತಿಯುಳ್ಳವರಲ್ಲಿ ಶಿವನೂ ಅಗ್ರಗಣ್ಯರಾಗಿರುವಂತೆ ವ್ರತಗಳಲ್ಲಿ ಪುಣ್ಯಕವ್ರತವು ಅಗ್ರಗಣ್ಯವಾದುದು.

ಮಹಾನ್ವಿರಾಟ್ ಚ ಸ್ಥೂಲಾನಾಂ ಸೂಕ್ಷ್ಮಾಣಾಂ ಪರಮಾಣುಕಃ ।
ಯಥೇಂದ್ರ ಆದಿತೇಯಾನಾಂ ದೈತ್ಯಾನಾಂ ಚ ಬಲಿರ್ಯಥಾ ॥ ೨೭ ॥

ಯಥಾ ದಧೀಚಿರ್ದಾತೄಣಾಂ ಪ್ರಹ್ಲಾದಶ್ಚೈವ ಸಾಧುಷು ।
ಬ್ರಹ್ಮಾಸ್ತ್ರಂ ಚ ಯಥಾಸ್ತ್ರಾಣಾಂ ಚಕ್ರಾಣಾಂ ಚ ಸುದರ್ಶನಂ । ॥ ೨೮ ॥

ನೃಣಾಂ ರಾಜಾ ರಾಮಚಂದ್ರೋ ಧನ್ವಿನಾಂ ಲಕ್ಷ್ಮಣೋ ಯಥಾ ।
ಸರ್ವಾಧಾರಃ ಸರ್ವಸೇವ್ಯಃ ಸರ್ವಬೀಜಂ ಚ ಸರ್ವದಃ ।
ಸರ್ವಸಾರೋ ಯಥಾ ಕೃಷ್ಣೋ ವ್ರತಾನಾಂ ಪುಣ್ಯಕಂ ತಥಾ ॥ ೨೯ ॥

ವ್ರತಂ ಕುರು ಮಹಾಭಾಗೇ ತ್ರಿಷು ಲೋಕೇಷು ದುರ್ಲಭಂ ।
ಸರ್ವಶ್ರೇಷ್ಠಶ್ಚ ಪುತ್ರಸ್ತೇ ವ್ರತಾದೇವ ಭವಿಷ್ಯತಿ ॥ ೩೦ ॥

---

೨೭–೨೮. ಸ್ಥೂಲವಸ್ತುಗಳಲ್ಲಿ ಮಹಾವಿರಾಟ್ಪುರುಷನಂತೆಯೂ, ಸೂಕ್ಷ್ಮ ವಸ್ತುಗಳಲ್ಲಿ ಪರಮಾಣುವಿನಂತೆಯೂ, ದೇವತೆಗಳಲ್ಲಿ ಇಂದ್ರನಂತೆಯೂ, ರಾಕ್ಷಸರಲ್ಲಿ ಬಲಿಚಕ್ರವರ್ತಿಯಂತೆಯೂ, ದಾನಶೀಲರಲ್ಲಿ ದಧೀಚಿಯಂತೆಯೂ, ಸಾಧುಗಳಲ್ಲಿ ಪ್ರಹ್ಲಾದನಂತೆಯೂ, ಅಸ್ತ್ರಗಳಲ್ಲಿ ಬ್ರಹ್ಮಾಸ್ತ್ರದಂತೆಯೂ, ಚಕ್ರಗಳಲ್ಲಿ ಸುದರ್ಶನದಂತೆಯೂ, ವ್ರತಗಳಲ್ಲಿ ಪುಣ್ಯಕವ್ರತವು ಅತಿಮಾನ್ಯವಾದುದು.

೨೯. ಶ್ರೀರಾಮಚಂದ್ರನು ರಾಜರಲ್ಲಿಯೂ, ಲಕ್ಷ್ಮಣನು ಧನುರ್ಧಾರಿಗಳಲ್ಲಿಯೂ, ಸರ್ವಬೀಜಸ್ವರೂಪನೂ, ಸರ್ವಾಧಾರನೂ, ಸರ್ವಸೇವ್ಯನೂ, ಸರ್ವಫಲಪ್ರದನೂ ಆದ ಶ್ರೀಕೃಷ್ಣಪರಮಾತ್ಮನು ಸಾರವಸ್ತುಗಳಲ್ಲಿಯೂ ಉತ್ತಮರೆನಿಸಿರುವಂತೆ ಪುಣ್ಯಕವ್ರತವು ವ್ರತಗಳಲ್ಲಿ ಉತ್ತಮವಾದುದು.

೩೦. ಎಲೌ ಮಹಾಭಾಗ್ಯಶಾಲಿನಿಯಾದ ಪಾರ್ವತಿಯೇ, ಲೋಕತ್ರಯದಲ್ಲಿಯೂ ಅತ್ಯಂತ ದುರ್ಲಭವಾದ ಈ ವ್ರತವನ್ನಾಚರಿಸು. ಅದರಿಂದ ನಿನಗೆ ಸರ್ವಶ್ರೇಷ್ಠನಾದ ಪುತ್ರನು ಜನಿಸುವನು.

ವ್ರತಾರಾಧ್ಯಶ್ಚ ವೈ ಕೃಷ್ಣಃ ಸರ್ವೇಷಾಂ ವಾಂಛಿತಪ್ರದಃ ।
ಜನೋ ಯತ್ಸೇವನಾನ್ಮುಕ್ತಃ ಪಿತೃಭಿಃ ಕೋಟಿಭಿಃ ಸಹ ॥ ೩೧ ॥

ಹರಿಮಂತ್ರಂ ಗೃಹೀತ್ವಾ ಚ ಹರಿಸೇವಾಂ ಕರೋತಿ ಯಃ ।
ಭಾರತೇ ಜನ್ಮ ಸಫಲಂ ಸ್ವಾತ್ಮನಃ ಸ ಕರೋತಿ ಚ ॥ ೩೨ ॥

ಉದ್ಧೃತ್ಯ ಕೋಟಿಪುರುಷಾನ್ ವೈಕುಂಠಂ ಯಾತಿ ನಿಶ್ಚಿತಂ ।
ಶ್ರೀಕೃಷ್ಣಪಾರ್ಷದೋ ಭೂತ್ವಾ ಸುಖಂ ತತ್ರೈವ ಮೋದತೇ ॥ ೩೩ ॥

ಸಹೋದರಾನ್ ಸ್ವಭೃತ್ಯಾಂ ಚ ಸ್ವಬಂಧೂನ್ ಸಹಚಾರಿಣಃ ।
ಸ್ವಸ್ತ್ರಿಯಶ್ಚ ಸಮುದ್ಧೃತ್ಯ ಭಕ್ತೋ ಯಾತಿ ಹರೇಃ ಪದಂ ॥ ೩೪ ॥

ತಸ್ಮಾದ್ಗೃಹಾಣ ಗಿರಿಜೇ ಹರೇರ್ಮಂತ್ರಂ ಸುದುರ್ಲಭಂ ।
ಜಪ ಮಂತ್ರಂ ವ್ರತೇ ತತ್ರ ಪಿತೄಣಾಂ ಮುಕ್ತಿಕಾರಣಂ ॥ ೩೫

---

೩೧. ಜನರು ಯಾವ ಶ್ರೀಕೃಷ್ಣಪರಮಾತ್ಮನ ಸೇವೆಮಾಡಿ ತಮ್ಮ ಅನಂ ಕೋಟಿ ಪಿತೃಗಳೊಡನೆ ಮುಕ್ತರಾಗುವರೋ, ಆ ಪರಮಾತ್ಮನು ಈ ವ್ರತಾಚರ ಯಿಂದ ಪ್ರಸನ್ನನಾಗಿ ಸಕಲರ ಇಷ್ಟಾರ್ಥವನ್ನು ಕೈಗೂಡಿಸುವನು.

೩೨. ಶ್ರೀಹರಿಯ ಮಂತ್ರೋಪದೇಶವನ್ನು ಸ್ವೀಕರಿಸಿ, ಸೇವೆ ಮಾಡು ಮನುಜನು ಭರತಖಂಡದಲ್ಲಿ ತಾನು ಜನ್ಮವೆತ್ತಿದುದಕ್ಕೆ ಸಫಲನಾಗುವನು.

೩೩. ವಿಷ್ಣುಮಂತ್ರೋಪಾಸಕನು ತನ್ನ ವಂಶದ ಕೋಟಿಪುರುಷರನ ಉದ್ಧರಿಸಿ, ವೈಕುಂಠಕ್ಕೆ ಹೋಗಿ ಶ್ರೀಕೃಷ್ಣನ ಪಾರ್ಷದನಾಗಿ ಚಿರಕಾಲ ಆನಂ ದಿಂದಿರುವನು.

೩೪. ಹರಿಭಕ್ತನು ತನ್ನ ಸಹೋದರರನ್ನೂ, ಸೇವಕರನ್ನೂ, ಬಂಧುಗಳನ್ನೂ ಸಹವಾಸಿಗಳನ್ನೂ, ಪತ್ನೀಪುತ್ರರನ್ನೂ ಪಾಪಕೂಪದಿಂದ ಉದ್ಧರಿಸಿ, ಶ್ರೀಹರಿ ಸಾನ್ನಿಧ್ಯವನ್ನು ಹೊಂದುವನು.

೩೫. ಆದ್ದರಿಂದ ಎಲೌ ಗಿರಿಜೆಯೇ, ದುರ್ಲಭವಾದ ಶ್ರೀಹರಿ ಮಂತ್ರೋಪದೇಶವನ್ನು ಸ್ವೀಕರಿಸಿ, ವ್ರತಾಚರಣೆಯ ಕಾಲದಲ್ಲಿ ಪಿತೃಗಳ ಮುಕ್ತಿ ಕಾರಣವಾದ ಆ ಮಂತ್ರವನ್ನು ಜಪಿಸು.

ಇತ್ಯುಕ್ತ್ವಾ ಶಂಕರೋ ದೇವೋ ಗತ್ವಾ ಗಿರಿಜಯಾ ಸಹ ।
ಶೀಘ್ರಂ ಚ ಜಾಹ್ನವೀತೀರಂ ಹರೇರ್ಮಂತ್ರಂ ಮನೋಹರಂ　　|| ೩೬ ||

ತಸ್ಯೈ ದದೌ ಚ ಸಂಪ್ರೀತ್ಯಾ ಕವಚಂ ಸ್ತೋತ್ರಸಂಯುತಂ ।
ಪೂಜಾವಿಧಾನನಿಯಮಂ ಕಥಯಾಮಾಸ ತಾಂ ಮುನೇ　　|| ೩೭ ||

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ**
**ನಾರದ ನಾರಾಯಣ ಸಂವಾದೇ ತೃತೀಯೋಽಧ್ಯಾಯಃ**

---

೩೬–೩೭. ಶಂಕರನು ಈ ರೀತಿಯಾಗಿ ಉಪದೇಶಿಸಿ, ಪಾರ್ವತಿಯೊಡನೆ ಗಂಗಾತೀರಕ್ಕೆ ಹೋಗಿ ಮನೋಹರವಾದ ಶ್ರೀಹರಿಯ ಮಂತ್ರವನ್ನೂ, ಕವಚ, ಸ್ತೋತ್ರ ಮತ್ತು ಪೂಜಾವಿಧಾನವನ್ನೂ ಆದರದಿಂದ ಆಕೆಗೆ ಅನುಗ್ರಹಿಸಿದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.



## ಮೂರನೇ ಅಧ್ಯಾಯದ ಸಾರಾಂಶ

ಪರಮೇಶ್ವರನು ಪಾರ್ವತಿಯನ್ನು ಕುರಿತು ಪುಣ್ಯಕವ್ರತದ ಮಹಿಮೆಯನ್ನು ವರ್ಣಿಸಿ, ಆ ವ್ರತಾಚರಣೆಯಿಂದ ಸತ್ಪುತ್ರನು ಜನಿಸುವನೆಂದು ಹೇಳಿ, ಅದರ ಆಚರಣೆಗೆ ಅವಶ್ಯಕವಾದ ಶ್ರೀಹರಿಯ ಮಂತ್ರವನ್ನು ಗಂಗಾತೀರದಲ್ಲಿ ಉಪದೇಶಿಸಿದನು.



ಕಾನಿ ವ್ರತೋಪಯುಕ್ತಾನಿ ದ್ರವ್ಯಾಣಿ ಚ ಫಲಾನಿ ಚ ।
ಸರ್ವಂ ಸನಿಯಮಂ ಭಕ್ಷ್ಯಂ ವಿಧಾನಂ ತತ್ಫಲಂ ಪ್ರಭೋ ॥ ೩ ।

ದೇಹಿ ಮಹ್ಯಂ ವಿನೀತಾಯೈ ನಿಯುಕ್ತಂ ಸತ್ಪುರೋಹಿತಂ ।
ಪುಷ್ಪೋಪಹಾರಾನ್ ವಿಪ್ರಾಂಶ್ಚ ದ್ರವ್ಯಾಹರಣಕಿಂಕರಾನ್ ॥ ೪ ।

ಅನ್ಯಾನಿ ಚೋಪಯುಕ್ತಾನಿ ಮಯಾಜ್ಞಾತಾನಿ ಯಾನಿ ಚ ।
ಸನ್ನಿಯೋಜಯ ತತ್ಸರ್ವಂ ಸ್ತ್ರೀಣಾಂ ಸ್ವಾಮೀ ಚ ಸರ್ವದಃ ॥ ೫ ।

ಪಿತಾ ಕೌಮಾರಕಾಲೇ ಚ ಸದಾ ಪಾಲನಕಾರಕಃ ।
ಭರ್ತಾ ಮಧ್ಯೇ ಸುತಃ ಶೇಷೇ ತ್ರಿಧಾವಸ್ಥಾ ಸುಯೋಷಿತಾಂ ॥ ೬

೩. ಆ ವ್ರತಕ್ಕೆ ಉಪಯುಕ್ತವಾದ ಪೂಜಾಸಾಮಗ್ರಿಗಳು ಮತ್ತು ನಿಯಮಗಳಾವುವು? ಆ ವ್ರತಾಚರಣೆಯ ಕ್ರಮ ಮತ್ತು ಅದರ ಫಲವನ್ನೂ, ದೇವತೆ ನಿವೇದಿಸಬೇಕಾದ ಭಕ್ಷ್ಯಭೋಜ್ಯಾದಿಗಳನ್ನೂ ತಿಳಿಸು.

೪. ವಿನಯಸಂಪನ್ನಳಾದ ನನ್ನಿಂದ ಈ ವ್ರತವನ್ನು ಮಾಡಿಸಲು ಸಮರ್ಥನಾದ ಒಬ್ಬ ಒಳ್ಳೆಯ ಪುರೋಹಿತನನ್ನೂ, ಹೂ ಹಣ್ಣುಗಳನ್ನು ತಂದುಕೊಡು ಬ್ರಾಹ್ಮಣರನ್ನೂ, ಇತರ ಸಾಮಗ್ರಿಗಳನ್ನು ಸಿದ್ಧಗೊಳಿಸುವ ಸೇವಕರನ್ನೂ ಅ ಗ್ರಹಿಸು.

೫. ನನಗೆ ತಿಳಿಯದಿರುವ ವ್ರತೋಪಯುಕ್ತವಾದ ಹೆಚ್ಚಿನ ವಿಷಯಗಳಿದ್ದ ಅವೆಲ್ಲವನ್ನೂ ನನಗೆ ಉಪದೇಶಿಸು. ಸ್ತ್ರೀಯರಿಗೆ ಪತಿಯೇ ಸರ್ವಾನುಗ್ರಹ ಯಕನಲ್ಲವೇ ?

೬. ಹೆಂಗಸನ್ನು ಬಾಲ್ಯಕೌಮಾರಾವಸ್ಥೆಗಳಲ್ಲಿ ತಂದೆಯೂ, ಪ್ರಾಯಕಾ ದಲ್ಲಿ ಪತಿಯೂ, ವಾರ್ಧಕ್ಯದಲ್ಲಿ ಪುತ್ರನೂ ಪಾಲಿಸುವರು. ಸತ್ಕುಲದಲ್ಲಿ ಹುಟ್ಟಿ ಸ್ತ್ರೀಯು ಎಂದೆಂದಿಗೂ ಸ್ವಾತಂತ್ರ್ಯವನ್ನು ಬಯಸಳು.

|| ಓಂ ||

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

|| ಚತುರ್ಥೋಽಧ್ಯಾಯಃ ||

|| ನಾರಾಯಣ ಉವಾಚ ||

ಶ್ರುತ್ವಾ ವ್ರತವಿಧಾನಂ ಚ ದುರ್ಗಾ ಸಂಹೃಷ್ಟಮಾನಸಾ |
ಸರ್ವಂ ವ್ರತವಿಧಾನಂ ಚ ಸಂಪ್ರಷ್ಟುಮುಪಚಕ್ರಮೇ || ೧ ||

|| ಪಾರ್ವತ್ಯುವಾಚ ||

ಸರ್ವಂ ವ್ರತವಿಧಾನಂ ಮಾಂ ವದ ವೇದವಿದಾಂ ವರ |
ಹೇ ನಾಥ ಕರುಣಾಸಿಂಧೋ ದೀನಬಂಧೋ ಪರಾತ್ಪರ || ೨ ||

---

### ನಾಲ್ಕನೆಯ ಅಧ್ಯಾಯವು

೧. ನಾರಾಯಣ:— ಪಾರ್ವತಿಯು ಪುಣ್ಯಕ ವ್ರತದ ಮಹಿಮೆಯನ್ನು ಕೇಳಿ ಬಹಳವಾಗಿ ಸಂತೋಷಪಟ್ಟು, ಆ ವ್ರತಾಚರಣೆಯ ಕ್ರಮವನ್ನು ತಿಳಿಯ ಬೇಕೆಂದು ಈ ರೀತಿ ಪ್ರಶ್ನಿಸಿದಳು.

೨. ಪಾರ್ವತಿ:—ಕರುಣಾಸಾಗರನೂ, ದೀನಬಂಧುವೂ, ಸರ್ವೋತ್ತಮನೂ ಆದ ಎಲೈ ಪ್ರಾಣಕಾಂತನೇ, ವೇದವೇದಾಂಗಪಾರಂಗತನಾದ ನೀನು ಆ ವ್ರತಾ ಚರಣೆಯ ಕ್ರಮವನ್ನು ವಿವರಿಸು.

ತಾತೋಽಶೋಕಃ ಪ್ರಾಣತುಲ್ಯಾಂ ದತ್ವಾ ಸತ್ಸ್ವಾಮಿನೇ ಸುತಾಂ ।
ಸ್ವಾಮೀ ನಿವೃತ್ತಿಮಾಪ್ನೋತಿ ಸಂನ್ಯಸ್ಯ ಸ್ವಸುತೇ ಪ್ರಿಯಾಂ ॥ ೭ ॥

ಬಂಧುತ್ರಯಯುತಾ ಯಾ ಸ್ತ್ರೀ ಸಾ ಚ ಭಾಗ್ಯವತೀ ಪರಾ ।
ಕಿಂಚಿದ್ವಿಹೀನಾ ಮಧ್ಯಾ ಚ ಸರ್ವಹೀನಾಽಧಮಾ ಭುವಿ ॥ ೮ ॥

ಏತೇಷಾಂ ಚ ಸಮೀಪಸ್ಥಾ ಪ್ರಶಂಸ್ಯಾ ಸಾ ಜಗತ್ತ್ರಯೇ ।
ನಿಂದಿತಾನ್ಯೇಷು ಸಂನ್ಯಸ್ತಾ ಸರ್ವಮೇತಚ್ಛ್ರುತೌ ಶ್ರುತಂ ॥ ೯ ॥

ಸರ್ವಾತ್ಮಾ ಭಗವಾಂಸ್ತ್ವಂ ಚ ಸರ್ವಸಾಕ್ಷೀ ಚ ಸರ್ವವಿತ್ ।
ದೇಹಿ ಮಹ್ಯಂ ಪುತ್ರವರಂ ಸ್ವಾತ್ಮನಿರ್ವೃತಿಹೇತುಕಂ ॥ ೧೦ ॥

---

೭. ತನ್ನ ಪ್ರಾಣಸದೃಶಳಾದ ಪುತ್ರಿಯನ್ನು ಸತ್ಪುರುಷನಿಗೆ ಸಮರ್ಪಿಸಿದ ತಂದೆಯು ನಿಶ್ಚಿಂತನಾಗುವನು. ಅಂತೆಯೇ ಪತಿಯೂ ತನ್ನ ಪತ್ನಿಯನ್ನು ಕಾಪಾಡ ಬಲ್ಲ ಸತ್ಪುತ್ರನನ್ನು ಪಡೆದು ನಿಶ್ಚಿಂತನಾಗುವನು.

೮. ಇಂತು ಪಿತಾ, ಪತಿ ಮತ್ತು ಪುತ್ರರೂಪವಾದ ಬಂಧುತ್ರಯದಿಂದ ಕೂಡಿರುವ ಹೆಂಗಸೇ ಭಾಗ್ಯಶಾಲಿನಿಯು. ಈ ಮೂವರಲ್ಲಿ ಒಬ್ಬರಿಲ್ಲದಿದ್ದರೂ ಹೆಂಗಸು ಮಧ್ಯಮಳೆನಿಸುವಳು. ಅಂದಮೇಲೆ ಈ ಬಂಧುತ್ರಯವನ್ನು ಕಳೆದು ಕೊಂಡವಳು ಅಧಮಳೆಂದು ಬೇರೆ ಹೇಳಬೇಕೆ ?

೯. ಹೆಂಗಸು ತನ್ನ ತಂದೆಯೊಡನಾಗಲೀ, ಪತಿಯೊಡನಾಗಲೀ, ಪುತ್ರನೊಡ ನಾಗಲೀ ಬಾಳ್ವೆಯನ್ನು ಸಾಗಿಸುತ್ತಿದ್ದರೆ ಜಗತ್ತ್ರಯದಲ್ಲೂ ಆಕೆಯು ಪೂಜ್ಯಳಾಗು ವಳು. ಇವರನ್ನು ಬಿಟ್ಟು ಬೇರೆ ಯಾರೊಡನೆ ಬಾಳುತ್ತಿದ್ದರೂ ಆಕೆಯನ್ನು ನಿಂದಿಸುವರು. ಇದು ಅನಾದಿಕಾಲದಿಂದಲೂ ಬಂದಿದೆ.

೧೦. ಷಡ್ಗುಣೈಶ್ವರ್ಯಪರಿಪೂರ್ಣನೂ, ಸರ್ವಾಂತರ್ಯಾಮಿಯೂ ಆದ ನೀನು ಸರ್ವಸಾಕ್ಷಿಯೂ ಸರ್ವಜ್ಞನೂ ಆಗಿರುವೆ. ಆದುದರಿಂದ ನೀನು ನನ್ನ ಮನದಳಲನ್ನು ಹೋಗಲಾಡಿಸುವ ಸತ್ಪುತ್ರನನ್ನು ನನಗೆ ಅನುಗ್ರಹಿಸಿ ಕಾಪಾಡು.

ಸ್ವಾತ್ಮಬೋಧಾನುಮಾನೇನ ಮಹಾತ್ಮನಿ ನಿವೇದಿತಂ ।
ಸರ್ವಾಂತರಾಭಿಪ್ರಾಯಜ್ಞಂ ಬೋಧಜ್ಞಂ ಬೋಧಯಾಮಿ ಕಿಂ ॥ ೧೧ ॥

ಇತ್ಯುಕ್ತ್ವಾ ಪಾರ್ವತೀ ಪ್ರೀತ್ಯಾ ಪಪಾತ ಸ್ವಾಮಿನಃ ಪದೇ ।
ಕೃಪಾಸಿಂಧುಶ್ಚ ಭಗವಾನ್ಸ್ತವಕ್ತುಮುಪಚಕ್ರಮೇ ॥ ೧೨ ॥

॥ ಶ್ರೀ ಮಹಾದೇವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ವಿಧಾನಂ ನಿಯಮಂ ಫಲಂ ।
ಫಲಾನಿ ಚೈವ ದ್ರವ್ಯಾಣಿ ವ್ರತಯೋಗ್ಯಾನಿ ಯಾನಿ ಚ ॥ ೧೩ ॥

ವಿಪ್ರಾಣಾಂ ಶತಕಂ ಶುದ್ಧಂ ಫಲಪುಷ್ಪೋಪಹಾರಕಂ ।
ಕಿಂಕರಾಣಾಂ ಚ ಶತಕಂ ದ್ರವ್ಯಾಹರಣಕಾರಕಂ ॥ ೧೪ ॥

---

೧೧. ನಾನು ತಿಳಿದಿರುವುದು ಸರಿಯೋ ? ತಪ್ಪೋ ? ಎಂಬ ಸಂದೇಹದಿಂದ ಮಹಾತ್ಮನಾದ ನಿನ್ನನ್ನು ಪ್ರಶ್ನಿಸುತ್ತಿರುವೆನೇ ಹೊರತು, ಸರ್ವಜ್ಞನಾದ ನಿನಗೆ ನಾನು ಹೊಸದಾಗಿ ಏನೂ ತಿಳಿಸುತ್ತಿಲ್ಲ.

೧೨. ಪಾರ್ವತಿಯು ಇಂತು ನುಡಿದು ತನ್ನ ಪತಿಯ ಪಾದಾರವಿಂದಗಳಿಗೆರಗಿದಳು. ಆಗ ದಯಾಸಮುದ್ರನಾದ ಪರಮೇಶ್ವರನು ಆಕೆಯನ್ನು ಸಾಂತ್ವನಗೊಳಿಸುತ್ತ ಇಂತೆಂದನು.

೧೩. ಶ್ರೀಮಹಾದೇವ:—ಎಲೌ ದೇವಿ, ನೀನು ಕೇಳಿದ ಪುತ್ರಫಲಪ್ರಾಪ್ತಿಯಾಗಬೇಕಾದರೆ ಪುಣ್ಯಕವ್ರತವನ್ನಾಚರಿಸಬೇಕು. ಆ ವ್ರತಕ್ಕೆ ಅವಶ್ಯಕವಾದ ದ್ರವ್ಯಗಳನ್ನೂ, ಫಲಪುಷ್ಪಗಳನ್ನೂ, ಆಚರಣೆಯ ವಿಧಾನವನ್ನೂ ಈಗ ವಿವರಿಸುವೆನು.

೧೪. ವ್ರತೋಪಯುಕ್ತವಾದ ಪುಷ್ಪಫಲಾದಿಗಳನ್ನು ತಂದುಕೊಡಲು ನೂರು ಜನ ಬ್ರಾಹ್ಮಣರನ್ನೂ, ಇತರ ಸಾಮಗ್ರಿಗಳನ್ನೊದಗಿಸಲು ನೂರುಜನ ಸೇವಕರನ್ನೂ ನಿನಗೆ ಅನುಗ್ರಹಿಸುವೆನು.

ದಾಸೀನಾಂ ಶತೈಕಂ ಲಕ್ಷಂ ನಿಯುಕ್ತಂ ಚ ಪುರೋಹಿತಂ ।
ಸರ್ವವ್ರತವಿಧಾನಜ್ಞಂ ವೇದವೇದಾಂತಪಾರಗಂ ॥ ೧೫ ॥

ಪ್ರವರಂ ಹರಿಭಕ್ತಾನಾಂ ಸರ್ವಜ್ಞಂ ಜ್ಞಾನಿನಾಂ ವರಂ ।
ಸನತ್ಕುಮಾರಂ ಮತ್ತುಲ್ಯಂ ಗೃಹಾಣ ವ್ರತಹೇತವೇ ॥ ೧೬ ॥

ದೇವಿ ಶುದ್ಧೇ ಚ ಕಾಲೇ ಚ ಪರಂ ನಿಯಮಪೂರ್ವಕಂ ।
ಮಾಘೇಶುಕ್ಲ ತ್ರಯೋದಶ್ಯಾಂ ವ್ರತಾರಂಭಃ ಶುಭಃ ಪ್ರಿಯೇ ॥ ೧೭ ॥

ಗಾತ್ರಂ ಸುನಿರ್ಮಲಂ ಕೃತ್ವಾ ಶಿರಸ್ಸಂಸ್ಕಾರಪೂರ್ವಕಂ ।
ಉಪೋಷ್ಯ ಪೂರ್ವದಿವಸೇ ವಸ್ತ್ರಂ ಸಂಶೋಧ್ಯ ಯತ್ನತಃ ॥ ೧೮ ॥

ಅರುಣೋದಯವೇಲಾಯಾಂ ತಲ್ಪಾದುತ್ಥಾಯ ಸುವ್ರತೀ ।
ಮುಖಪ್ರಕ್ಷಾಲನಂ ಕೃತ್ವಾ ಸ್ನಾತ್ವಾ ವೈ ನಿರ್ಮಲೇ ಜಲೇ ॥ ೧೯ ॥

---

೧೫. ನಿನ್ನ ಸೇವೆಗಾಗಿ ನೂರುಲಕ್ಷ ದಾಸಿಯರನ್ನೂ, ಪೂಜೆಮಾಡಿಸಲು ಸಮರ್ಥನೂ, ವೇದವೇದಾಂಗಪಾರಂಗತನೂ ಆದ ಪುರೋಹಿತನನ್ನೂ ನಿಯಮಿಸುವೆನು.

೧೬. ಹರಿಭಕ್ತರಲ್ಲಿ ಶ್ರೇಷ್ಠನೂ, ಜ್ಞಾನಿಗಳಲ್ಲಿ ಉತ್ತಮನೂ, ನನಗೆ ಸದೃಶನೂ ಆದ ಸನತ್ಕುಮಾರನನ್ನು ಆ ವ್ರತಕ್ಕೆ ಪುರೋಹಿತನನ್ನಾಗಿ ಸ್ವೀಕರಿಸು.

೧೭. ಎಲೌ ಪ್ರಿಯಳೇ, ದಿನಶುದ್ಧಿಯನ್ನು ನೋಡಿಸಿ, ಮಾಘ ಶುಕ್ಲ ತ್ರಯೋದಶಿಯ ದಿವಸ ನಿಯಮಪೂರ್ವಕವಾಗಿ ಈ ವ್ರತವನ್ನಾರಂಭಿಸುವುದು ಶುಭಕರವಾದುದು.

೧೮. ತಲೆಗೂದಲನ್ನು ತೈಲಾದಿಗಳಿಂದ ಸಂಸ್ಕರಿಸಿಕೊಂಡು, ಶರೀರವನ್ನು ಶುದ್ಧಿಗೊಳಿಸಿಕೊಂಡು, ವ್ರತದ ಹಿಂದಿನ ದಿವಸ ಉಪವಾಸಮಾಡಿ, ವ್ರತಕಾಲದಲ್ಲಿ ಶುಭ್ರವಸ್ತ್ರವನ್ನುಟ್ಟು ವ್ರತವನ್ನಾಚರಿಸಬೇಕು

೧೯–೨೦. ವ್ರತವನ್ನಾಚರಿಸುವವರು ಅರುಣೋದಯಸಮಯದಲ್ಲಿ ಹಾಸಿಗೆಯಿಂದೆದ್ದು, ಮುಖವನ್ನು ತೊಳೆದು, ನಿರ್ಮಲವಾದ ನೀರಿನಲ್ಲಿ ಸ್ನಾನಮಾಡಿ, ಹ

ಆಚಮ್ಯ ಯುಕ್ತಪೂತೋ ಹಿ ಹರಿಸ್ಮರಣಪೂರ್ವಕಂ ।
ದತ್ವಾರ್ಘ್ಯಂ ಹರಯೇ ಭಕ್ತ್ಯಾ ಗೃಹಮಾಗತ್ಯ ಸತ್ವರಂ ॥ ೨೦ ॥

ಧೌತೇ ಚ ವಾಸಸೀ ಧೃತ್ವಾ ಹ್ಯುಪವಿಶ್ಯಾಸನೇ ಶುಚೌ ।
ಆಚಮ್ಯ ತಿಲಕಂ ಧೃತ್ವಾ ಸಮಾಪ್ಯ ಸ್ವಾಹ್ನಿಕಂ ಪುನಃ ॥ ೨೧ ॥

ಘಟಂ ಸಂಸ್ಥಾಪ್ಯ ವಿಧಿವತ್ ಸ್ವಸ್ತಿವಾಚನಪೂರ್ವಕಂ ।
ಪುರೋಹಿತಸ್ಯ ವರಣಂ ಪುರಃ ಕೃತ್ವಾ ಪ್ರಯತ್ನತಃ ॥ ೨೨ ॥

ಸಂಕಲ್ಪಂ ವೇದವಿಹಿತಂ ವ್ರತಮೇತತ್ಸಮಾಚರೇತ್ ।
ವ್ರತೇ ದ್ರವ್ಯಾಣಿ ನಿತ್ಯಾನಿ ಚೋಪಚಾರಸ್ತು ಷೋಡಶ ॥ ೨೩ ॥

ದೇಯಾನಿ ನಿತ್ಯಂ ದೇವೇಶಿ ಕೃಷ್ಣಾಯ ಪರಮಾತ್ಮನೇ ।
ಆಸನಂ ಸ್ವಾಗತಂ ಪಾದ್ಯಮರ್ಘ್ಯಮಾಚಮನೀಯಕಂ ॥ ೨೪ ॥

---

ಸ್ಮರಣಪೂರ್ವಕವಾಗಿ ಆಚಮನಮಾಡಿ ಶುದ್ಧಿಹೊಂದಿ, ಭಕ್ತಿಪೂರ್ವಕವಾಗಿ ಶ್ರೀಹರಿಗೆ ಅರ್ಘ್ಯಸಮರ್ಪಣೆಮಾಡಿ ಮನೆಗೆ ಬರಬೇಕು.

೨೧. ಅನಂತರ ಎರಡು ಶುಭ್ರವಸ್ತ್ರಗಳನ್ನು ಧರಿಸಿ, ಶುಚಿಯಾದ ಪೀಠದಲ್ಲಿ ಕುಳಿತು, ಆಚಮನಪೂರ್ವಕವಾಗಿ ತಿಲಕಧಾರಣೆಮಾಡಿ, ನಿತ್ಯಕರ್ಮವಾದ ಆಹ್ನಿಕವನ್ನು ಮುಗಿಸಬೇಕು.

೨೨. ಅನಂತರ ವಿಧಿಪೂರ್ವಕವಾಗಿ ಸ್ವಸ್ತಿವಾಚನಮಾಡಿಸಿ, ಕಲಶವನ್ನಿಟ್ಟು ವ್ರತಮಾಡಿಸಲು ಪುರೋಹಿತನನ್ನು ಪ್ರಾರ್ಥಿಸಿಕೊಳ್ಳಬೇಕು.

೨೩. ವೇದವಿಹಿತವಾದ ಸಂಕಲ್ಪಪೂರ್ವಕವಾಗಿ ಈ ವ್ರತವನ್ನು ಆಚರಿಸಬೇಕು. ಎಲ್ಲ ವ್ರತಗಳಂತೆ ಇದರಲ್ಲಿಯೂ ನಿಯಮಿತ ದ್ರವ್ಯಗಳಿಂದ ಷೋಡಶೋಪಚಾರವನ್ನು ಸಮರ್ಪಿಸಬೇಕು.

೨೪–೨೬ ಎಲೌ ದೇವೇಶ್ವರಿಯೇ, ಶ್ರೀಕೃಷ್ಣಪರಮಾತ್ಮನಿಗೆ ನಿತ್ಯವೂ ಆಸನ ಮತ್ತು ಸ್ವಾಗತವನ್ನೂ, ಪಾದ್ಯ, ಅರ್ಘ್ಯ ಮತ್ತು ಆಚಮನೀಯಗಳನ್ನೂ,

ಸ್ನಾನೀಯಂ ಮಧುಪರ್ಕಂ ಚ ವಸ್ತ್ರಾಣ್ಯಾಭರಣಾನಿ ಚ ।
ಸುಗಂಧಿಪುಷ್ಪಧೂಪಂ ಚ ದೀಪನ್ನೈವೇದ್ಯಚಂದನಂ ॥ ೨೫ ॥

ಯಜ್ಞಸೂತ್ರಂ ಚ ತಾಂಬೂಲಂ ಕರ್ಪೂರಾದಿ ಸುವಾಸಿತಂ
ದ್ರವ್ಯಾಣ್ಯೇತಾನಿ ಪೂಜಾಯಾಶ್ಚಾಂಗರೂಪಾಣಿ ಸುಂದರಿ ॥ ೨೬ ॥

ದೇವಿ ಕಿಂಚಿದ್ವಿಹೀನೇನ ಚಾಂಗಹಾನಿಃ ಪ್ರಜಾಯತೇ ।
ಅಂಗಹೀನಂ ಚ ಯತ್ಕರ್ಮ ಚಾಂಗಹೀನೋ ಯಥಾ ನರಃ ।
ಅಂಗಹೀನೇ ಚ ಕಾರ್ಯೇ ಚ ಫಲಹಾನಿಃ ಪ್ರಜಾಯತೇ ॥ ೨೭ ॥

ಅಷ್ಟೋತ್ತರ ಶತಂ ಪುಷ್ಪಂ ಪಾರಿಜಾತಸ್ಯ ವಿಷ್ಣವೇ ।
ದೇಯಂ ಪ್ರತಿದಿನಂ ದುರ್ಗೇ ಸ್ವಾತ್ಮನೋ ರೂಪಹೇತವೇ ॥ ೨೮ ॥

ಶ್ವೇತಚಂಪಕಪುಷ್ಪಾಣಾಂ ಲಕ್ಷಮುಕ್ತಮಿಷ್ಟಿತಂ ।
ಪ್ರದೇಯಂ ಹರಯೇ ಭಕ್ತ್ಯಾ ವರ್ಣಸೌಂದರ್ಯಹೇತವೇ ॥ ೨೯ ॥

---

ಸ್ನಾನ ಮತ್ತು ಮಧುಪರ್ಕಗಳನ್ನೂ, ವಸ್ತ್ರಾಭರಣಗಳನ್ನೂ, ಗಂಧ, ಪುಷ್ಪ, ಧೂಪ, ದೀಪ ನೈವೇದ್ಯಗಳನ್ನೂ ಸಮರ್ಪಿಸಬೇಕು.

೨೬. ಅಂತೆಯೇ ಯಜ್ಞೋಪವೀತವನ್ನೂ, ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನೂ ಅರ್ಪಿಸಬೇಕು. ಎಲೌ ಸುಂದರಾಗಿಯೇ, ಈ ದ್ರವ್ಯಗಳೆಲ್ಲವೂ ಪೂಜೆಗೆ ಅಂಗರೂಪವಾಗಿರುವುವು.

೨೭. ಎಲೌ ದೇವಿಯೇ, ಈ ಪೂಜಾಂಗ ದ್ರವ್ಯಗಳಲ್ಲಿ ಸ್ವಲ್ಪ ನ್ಯೂನತೆ ಯುಂಟಾದರೂ ಅಂಗಹಾನಿಯಾಗುವುದು. ಅಂಗಹೀನವಾದ ಕರ್ಮವು ಅಂಗಹೀನ ನಾದ ಮನುಜನಿಗೆ ಸಮನೆನಿಸುವುದು. ಕರ್ಮವು ಅಂಗಹೀನವಾದರೆ ಫಲಹಾನಿ ಯಾಗುವುದು.

೨೮. ಎಲೌ ದುರ್ಗಾದೇವಿಯೇ, ತನಗೆ ಒಳ್ಳೆಯ ರೂಪುಬೇಕೆನ್ನುವವರು ಪ್ರತಿದಿನವೂ ವಿಷ್ಣುವಿಗೆ ನೂರೆಂಟು ಪಾರಿಜಾತ ಪುಷ್ಪವನ್ನು ಭಕ್ತಿಯಿಂದರ್ಪಿಸ ಬೇಕು.

೨೯. ಶರೀರದ ವರ್ಣಸೌಂದರ್ಯವನ್ನಪೇಕ್ಷಿಸುವವರು ವಿಷ್ಣುವಿಗೆ ಅತ್ಯಂತ ಪ್ರೀತಿಪಾತ್ರವಾದ ಬಿಳಿ ಸಂಪಿಗೆ ಹೂವನ್ನು ಲಕ್ಷಸಂಖ್ಯಾತವಾಗಿ ಪೂಜಿಸಬೇಕು.

ಸಹಸ್ರಪತ್ರಪದ್ಮಾನಾಮಕ್ಷತಂ ಲಕ್ಷಕಂ ತಥಾ ।
ಭಕ್ತ್ಯಾ ದೇಯಂ ಚ ಹರಯೇ ಮುಖಸೌಂದರ್ಯಹೇತವೇ ॥ ೩೦ ॥

ಅಮೂಲ್ಯರತ್ನರಚಿತಂ ದರ್ಪಣಾನಾಂ ಸಹಸ್ರಕಂ ।
ದೇಯಂ ನಾರಾಯಣಾಯೈವ ನೇತ್ರಯೋರ್ದೀಪ್ತಿಹೇತವೇ ॥ ೩೧ ॥

ನೀಲೋತ್ಪಲಾನಾಂ ಲಕ್ಷಂ ಚ ದೇಯಂ ಕೃಷ್ಣಾಯ ಭಕ್ತಿತಃ ।
ವ್ರತಾಂಗಭೂತಂ ದೇವೇಶಿ ಚಕ್ಷುಷೋ ರೂಪಹೇತವೇ ॥ ೩೨ ॥

ಹಿಮಾಲಯೋದ್ಭವಂ ಲಕ್ಷಂ ರುಚಿರಂ ಶ್ವೇತಚಾಮರಂ ।
ಪ್ರದೇಯಂ ಕೇಶವಾಯೈವ ಕೇಶಸೌಂದರ್ಯಹೇತವೇ ॥ ೩೩ ॥

ಅಮೂಲ್ಯಂ ರತ್ನರಚಿತಂ ಪುಟಿಕಾನಾಂ ಸಹಸ್ರಕಂ ।
ಪ್ರದೇಯಂ ಗೋಪಿಕೇಶಾಯ ನಾಸಾಸೌಂದರ್ಯಹೇತವೇ ॥ ೩೪ ॥

---

೩೦. ಸಹಸ್ರದಳಗಳುಳ್ಳ ಲಕ್ಷ ಪದ್ಮಪುಷ್ಪಗಳನ್ನು ಶ್ರೀಹರಿಗೆ ಭಕ್ತಿಯಿಂದ ಸಮರ್ಪಿಸಿ ಮುಖಸೌಂದರ್ಯವನ್ನು ಪಡೆಯಬಹುದು

೩೧. ಹೊಳಪಾದ ಕಣ್ಣುಗಳನ್ನು ಬಯಸುವವರು ಅಮೂಲ್ಯ ರತ್ನಗಳಿಂದ ರಚಿತವಾದ ಸಾವಿರಾರು ಕನ್ನಡಿಗಳನ್ನು ನಾರಾಯಣನಿಗೆ ಸಮರ್ಪಿಸಬೇಕು.

೩೨. ನೇತ್ರಗಳ ಸೌಂದರ್ಯವನ್ನು ಇಚ್ಛಿಸುವವರು ಈ ವ್ರತದ ಅಂಗವಾಗಿ ಲಕ್ಷ ಕನ್ನೈದಿಲೆಗಳನ್ನು ಭಕ್ತಿಯಿಂದ ಶ್ರೀಕೃಷ್ಣನಿಗೆ ಸಲ್ಲಿಸಬೇಕು.

೩೩. ಸುಂದರವಾದ ತಲೆಗೂದಲನ್ನು ಅಪೇಕ್ಷಿಸುವವರು ಹಿಮಾಲಯದಲ್ಲಿ ಉತ್ಪನ್ನವಾಗಿ ಮನೋಹರವಾಗಿರುವ ಲಕ್ಷ ಶ್ವೇತಚಾಮರಗಳನ್ನು ಕೇಶವನಿಗೆ ಭಕ್ತಿಯಿಂದ ಕಾಣಿಕೆಯಾಗಿ ಕೊಡಬೇಕು.

೩೪. ಸುಂದರವಾದ ಮೂಗನ್ನು ಬಯಸುವವರು ಅಮೂಲ್ಯ ರತ್ನಖಚಿತವಾದ ಸಾವಿರಾರು ಭರಣಿಗಳನ್ನು ಗೋಪಿಕಾವಲ್ಲಭನಾದ ಶ್ರೀಕೃಷ್ಣನಿಗೆ ಸಮರ್ಪಿಸಬೇಕು.

ಬಂಧೂಕಪುಷ್ಪಲಕ್ಷಂ ಚ ದೇಯಂ ರಾಧೇಶ್ವರಾಯ ಚ ।
ಸೌವರ್ಣ್ಯೋಷ್ಠಾಧರಯೋಶ್ಚೈವ ವರ್ಣಸೌಂದರ್ಯಹೇತವೇ || ೩೫ ||

ಮುಕ್ತಾಫಲಾನಾಂ ಲಕ್ಷಂ ಚ ದಂತಸೌಂದರ್ಯಹೇತವೇ ।
ದೇಯಂ ಗೋಲೋಕನಾಥಾಯ ಶೈಲಜೇ ಭಕ್ತಿಪೂರ್ವಕಂ || ೩೬ ||

ರತ್ನಗಂಡೂಷಲಕ್ಷಂ ಚ ಗಂಡಸೌಂದರ್ಯಹೇತವೇ ।
ಮಹೇಶ್ವರಾಯ ದಾತವ್ಯಂ ವ್ರತೇ ಶೈಲೇಂದ್ರಕನ್ಯಕೇ || ೩೭ ||

ರತ್ನಪಾಶಕಲಕ್ಷಂ ಚ ದೇಯಂ ಬ್ರಹ್ಮೇಶ್ವರಾಯ ಚ ।
ಓಷ್ಠಾಧಃಸ್ಥಲರೂಪಾಯ ವ್ರತೀ ಪ್ರಾಣೇಶಿ ಭಕ್ತಿತಃ || ೩೮ ||

ಕರ್ಣಭೂಷಣಲಕ್ಷಂ ಚ ರತ್ನಸಾರವಿನಿರ್ಮಿತಂ ।
ದೇಯಂ ಸರ್ವೇಶ್ವರಾಯೈವ ಕರ್ಣಸೌಂದರ್ಯಹೇತವೇ || ೩೯ ||

---

೩೫. ತುಟಿಗಳು ಮೃದುವಾಗಿಯೂ, ಸುಂದರವರ್ಣವುಳ್ಳವುಗಳಾಗಿಯೂ ಇರಬೇಕಾದರೆ ರಾಧಾರಮಣನಿಗೆ ಲಕ್ಷ ಗುಲಾಬಿ ಹೂಗಳನ್ನು ಭಕ್ತಿಯಿಂದರ್ಪಿಸಬೇಕು.

೩೬. ಎಲೌ ಶೈಲರಾಜತನಯೇ, ಹಲ್ಲುಗಳ ಸೌಂದರ್ಯವನ್ನಪೇಕ್ಷಿಸುವವರು ಗೋಲೋಕಾಧಿಪತಿಯಾದ ಶ್ರೀಕೃಷ್ಣನಿಗೆ ಭಕ್ತಿಪೂರ್ವಕವಾಗಿ ಲಕ್ಷ ಮುತ್ತಿನ ಮಣಿಗಳನ್ನು ಸಮರ್ಪಿಸಬೇಕು.

೩೭. ಸುಂದರವಾದ ಕಪೋಲಗಳನ್ನು ಬಯಸುವವರು, ಈ ವ್ರತದಲ್ಲಿ ಮಹೇಶ್ವರನಿಗೆ ಲಕ್ಷ ರತ್ನ ಕನ್ನಡಿಗಳನ್ನು ವಿನಯಪೂರ್ವಕವಾಗಿ ಕಾಣಿಕೆ ಕೊಡಬೇಕು.

೩೮. ಎಲೌ ಪ್ರಾಣಕಾಂತೆಯೇ, ತುಟಿಯ ಕೆಳಭಾಗದ ಸೌಂದರ್ಯವನ್ನು ಇಚ್ಛಿಸುವವರು ಲಕ್ಷ ರತ್ನಕರಂಡಕ (ಭರಣಿ) ಗಳನ್ನು ಸಕಲೇಶ್ವರನಾದ ಪರಬ್ರಹ್ಮನಿಗೆ ಭಕ್ತಿಯಿಂದ ಸಮರ್ಪಿಸಬೇಕು.

೩೯. ಶ್ರೇಷ್ಠ ರತ್ನಗಳಿಂದ ನಿರ್ಮಿತವಾದ ಲಕ್ಷಸಂಖ್ಯಾಯುತವಾದ ಕರ್ಣಕುಂಡಲಗಳನ್ನು ಸರ್ವೇಶ್ವರನಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದರೆ ಸುಂದರವಾದ ಕಿವಿಗಳನ್ನು ಪಡೆಯಬಹುದು.

ಮಾಧ್ವೀಕಕಲಶಾನಾಂ ಚ ಲಕ್ಷಂ ರತ್ನವಿನಿರ್ಮಿತಂ ।
ದೇಯಂ ವಿಶ್ವೇಶ್ವರಾಯೈವ ಸ್ವರಸೌಂದರ್ಯಹೇತವೇ ॥ ೪೦ ॥

ಸುಧಾಪೂರ್ಣಂ ಚ ಕುಂಭಾನಾಂ ಸಹಸ್ರಂ ರತ್ನನಿರ್ಮಿತಂ
ದೇಯಂ ಕೃಷ್ಣಾಯ ದೇವೇಶಿ ವಾಕ್ಯಸೌಂದರ್ಯಹೇತವೇ ॥ ೪೧ ॥

ರತ್ನಪ್ರದೀಪಲಕ್ಷಂ ಚ ಗೋಪವೇಷವಿಧಾಯಿನೇ ।
ದೇಯಂ ಕಿಶೋರವೇಷಾಯ ದೃಷ್ಟಿಸೌಂದರ್ಯಹೇತವೇ ॥ ೪೨ ॥

ಧತ್ತೂರಕುಸುಮಾಕಾರಂ ರತ್ನಪಾತ್ರಸಹಸ್ರಕಂ ।
ದೇಯಂ ಗೋರಕ್ಷಕಾಯೈವ ಬಲಸೌಂದರ್ಯಹೇತವೇ ॥ ೪೩ ॥

ಸದ್ರತ್ನಸಾರರಚಿತಂ ಪದ್ಮನಾಲಸಹಸ್ರಕಂ ।
ದೇಯಂ ಸ್ವರ್ಣಕಪಾಲಾಯ ಬಾಹುಸೌಂದರ್ಯಹೇತವೇ ॥ ೪೪ ॥

---

೪೦. ರತ್ನನಿರ್ಮಿತವಾದ ಲಕ್ಷ ಕಲಶಗಳಲ್ಲಿ ಮಧುವನ್ನು ತುಂಬಿ ವಿಶ್ವೇಶ್ವರನಿಗೆ ಸಮರ್ಪಿಸುವುದರಿಂದ ಕಂಠಧ್ವನಿಯು ಇಂಪಾಗುವುದು.

೪೧. ಎಲೌ ದೇವೇಶ್ವರಿಯೇ, ಮಾತಿನ ಜಾಣ್ಮೆಯನ್ನು ಬಯಸುವವರು, ರತ್ನನಿರ್ಮಿತವಾದ ಸಹಸ್ರ ಕುಂಭಗಳಲ್ಲಿ ಅಮೃತವನ್ನು ತುಂಬಿ ಶ್ರೀಕೃಷ್ಣಪರಮಾತ್ಮನಿಗೆ ಭಕ್ತಿಯಿಂದರ್ಪಿಸಬೇಕು.

೪೨. ಗೋಪಕಿಶೋರವೇಷಧಾರಿಯಾದ ಪರಮಾತ್ಮನಿಗೆ ಲಕ್ಷ ರತ್ನದೀಪಗಳನ್ನು ಸಮರ್ಪಿಸಿದರೆ ದೃಷ್ಟಿ ಸೌಂದರ್ಯವನ್ನು ಪಡೆಯಬಹುದು.

೪೩. ದೈಹಿಕವಾದ ಬಲವೃದ್ಧಿಯನ್ನು ಬಯಸುವವರು, ಧತ್ತೂರಿ ಹೂವಿನ ಆಕಾರವುಳ್ಳ ಸಾವಿರ ರತ್ನಪಾತ್ರೆಗಳನ್ನು ಗೋಪಾಲಕನಾದ ಶ್ರೀಕೃಷ್ಣಪರಮಾತ್ಮನಿಗೆ ಸಮರ್ಪಿಸಬೇಕು.

೪೪. ಬಂಧುರ (ಮನೋಹರ) ವಾದ ಬಾಹುಗಳಲ್ಲಿ ಬಯಕೆಯಿದ್ದರೆ, ಶ್ರೇಷ್ಠರತ್ನಗಳಿಂದ ರಚಿತವಾದ ಸಾವಿರ ಕಮಲನಾಳಗಳನ್ನು ಸ್ವರ್ಣಕಪಾಲನಾದ ಪರಮಾತ್ಮನಿಗೆ ಸಲ್ಲಿಸಬೇಕು.

ಲಕ್ಷಂ ಚ ರಕ್ತಪದ್ಮಾನಾಂ ಕರಸೌಂದರ್ಯಹೇತವೇ ।
ದೇಯಂ ಗೋಪಾಂಗನೇಶಾಯ ನಾರಾಯಣಿ ಹರಿವ್ರತೇ || ೪೫ ||

ಅಂಗುಲೀಯಕಲಕ್ಷಂ ಚ ರತ್ನಸಾರವಿನಿರ್ಮಿತಂ ।
ಅಂಗುಲೀನಾಂ ಚ ರೂಪಾರ್ಥಂ ದೇಯಂ ದೇವೇಶ್ವರಾಯ ಚ || ೪೬ ||

ಮಣೀಂದ್ರಸಾರಲಕ್ಷಾಣಿ ಚ ಶ್ವೇತವರ್ಣಂ ಮನೋಹರಂ ।
ದೇಯಂ ಮುನೀಂದ್ರನಾಥಾಯ ಮುಖಸೌಂದರ್ಯಹೇತವೇ || ೪೭ ||

ಸದ್ರತ್ನಸಾರಹಾರಾಣಾಂ ಲಕ್ಷಂ ಚಾತಿಮನೋಹರಂ ।
ದೇಯಂ ಮದನಮೋಹಾಯ ವಕ್ಷಃಸೌಂದರ್ಯಹೇತವೇ || ೪೮ ||

ಸುಪಕ್ವಶ್ರೀಫಲಾನಾಂ ಚ ಲಕ್ಷಂ ಚ ಸುಮನೋಹರಂ ।
ದೇಯಂ ಸಿದ್ಧೇಂದ್ರನಾಥಾಯ ಸ್ತನಸೌಂದರ್ಯಹೇತವೇ || ೪೯ ||

---

೪೫. ನಾರಾಯಣಾಂಶಸಂಜಾತಳೂ, ಹರಿವ್ರತಪರಾಯಣಳೂ ಆದ ಎಲೌ ದೇವಿಯೇ, ಲಕ್ಷ ಕೆಂದಾವರೆ ಪುಷ್ಪಗಳನ್ನು ಗೋಪಾಂಗನಾ ಪತಿಯಾದ ಪರಮಾತ್ಮನಿಗೆ ಅರ್ಪಿಸಿದರೆ ಸುಂದರವಾದ ಕೈಗಳನ್ನು ಹೊಂದಬಹುದು.

೪೬. ಬೆರಳುಗಳ ಸೌಂದರ್ಯವನ್ನು ಬಯಸುವವರು ಶ್ರೇಷ್ಠ ರತ್ನಗಳಿಂದ ನಿರ್ಮಿತವಾದ ಲಕ್ಷ ಉಂಗುರಗಳನ್ನು ದೇವದೇವನಿಗೆ ಸಮರ್ಪಿಸಬೇಕು.

೪೭. ಉಗುರುಗಳು ಸುಂದರವಾಗಿರಬೇಕಾದರೆ, ಬಿಳುವಾಗಿಯೂ, ಮನೋಹರವಾಗಿಯೂ ಇರುವ ಲಕ್ಷ ಶ್ರೇಷ್ಠ ಮಣಿಗಳನ್ನು ಮುನೀಂದ್ರರಿಗೆಲ್ಲ ಶ್ರೇಷ್ಠನಾದ ಪರಮಹಂಸನಿಗೆ ಸಮರ್ಪಿಸಬೇಕು.

೪೮. ಮದನಮೋಹಕನಾದ ಕೃಷ್ಣಪರಮಾತ್ಮನಿಗೆ, ಶ್ರೇಷ್ಠರತ್ನಗಳಿಂದ ರಚಿತವಾಗಿ ಮನೋಹರವಾದ ಲಕ್ಷ ಹಾರಗಳನ್ನು ಸಮರ್ಪಿಸಿದರೆ ವಕ್ಷಸ್ಥಲವು ರಮ್ಯವಾಗುವುದು.

೪೯. ಸುಪಕ್ವವೂ ಮನೋಹರವೂ ಆದ ಲಕ್ಷ ಬಿಲ್ವಫಲಗಳನ್ನು, ಸಿದ್ಧೇಶ್ವರನಾದ ಪರಮಾತ್ಮನಿಗೆ ಅರ್ಪಿಸಿದರೆ ಸ್ತನಗಳು ಸುಂದರವಾಗುವುವು.

ಸದ್ರತ್ನವರ್ತುಲಾಕಾರ ಪತ್ರಲಕ್ಷಂ ಮನೋಹರಂ ।
ದೇಯಂ ಪದ್ಮಾಲಯೇಶಾಯ ದೇಹಸೌಂದರ್ಯಹೇತವೇ ॥ ೫೦ ॥

ಸದ್ರತ್ನಸಾರರಚಿತಂ ನಾಭೀನಾಂ ಚ ಸಹಸ್ರಕಂ ।
ಪ್ರದೇಯಂ ಪದ್ಮನಾಭಾಯ ನಾಭಿಸೌಂದರ್ಯಹೇತವೇ ॥ ೫೧ ॥

ಸದ್ರತ್ನಸಾರರಚಿತಂ ರಥಚಕ್ರ ಸಹಸ್ರಕಂ ।
ನಿತಂಬಸೌಂದರ್ಯಾರ್ಥಂ ಚ ದೇಯಂ ವೈ ಚಕ್ರಪಾಣಯೇ ॥ ೫೨ ॥

ಸುವರ್ಣರಂಭಾಸ್ತಂಭಾನಾಂ ಲಕ್ಷಂ ಚ ಸುಮನೋಹರಂ ।
ಪ್ರದೇಯಂ ಶ್ರೀನಿವಾಸಾಯ ಶ್ರೋಣಿಸೌಂದರ್ಯಹೇತವೇ ॥ ೫೩ ॥

ಶತಪತ್ರಸ್ಥಲಾಬ್ಜಾನಾಂ ಲಕ್ಷಮಮ್ಲಾನಮಕ್ಷತಂ ।
ಪ್ರದೇಯಂ ಪದ್ಮನೇತ್ರಾಯ ಪಾದಸೌಂದರ್ಯಹೇತವೇ ॥ ೫೪ ॥

---

೫೦. ಶರೀರವು ಸುಂದರವಾಗಿರಬೇಕಾದರೆ, ವರ್ತುಳಾಕಾರವೂ, ಮನೋಹರವೂ ಆದ ರತ್ನದ ಲಕ್ಷ ಪತ್ರಗಳನ್ನು ಪದ್ಮಾಲಯಾಪತಿಗೆ ಪ್ರತ್ಯರ್ಪಿಸಬೇಕು.

೫೧. ನಾಭಿಯು (ಹೊಕ್ಕಳು) ಸುಂದರವಾಗಿರಬೇಕಾದರೆ, ನಾಭಿಯ ಆಕಾರದಲ್ಲಿ ರಚಿತವಾಗಿರುವ ಸಾವಿರ ರತ್ನಗಳನ್ನು ಪದ್ಮನಾಭನಿಗೆ ಪ್ರೀತಿಪೂರ್ವಕವಾಗಿ ಅರ್ಪಿಸಬೇಕು.

೫೨. ಚಕ್ರಪಾಣಿಗೆ ಶ್ರೇಷ್ಠ ರತ್ನಗಳಿಂದ ನಿರ್ಮಿತವಾದ ಸಾವಿರ ರಥ ಚಕ್ರಗಳನ್ನು ಭಕ್ತಿಯಿಂದರ್ಪಿಸಿದರೆ ನಿತಂಬಗಳು ಸುಂದರವಾಗುವುವು

೫೩. ಮನೋಹರವಾದ ಚಿನ್ನದ ಲಕ್ಷ ಬಾಳೆಯ ಕಂಭಗಳನ್ನು ಶ್ರೀನಿವಾಸನಿಗೆ ಸಲ್ಲಿಸಿದರೆ ತೊಡೆಗಳು ಸುಂದರವಾಗುವುವು.

೫೪. ಸ್ವಲ್ಪವೂ ಬಾಡದೆ ಮನೋಹರವಾಗಿರುವ, ಸಹಸ್ರದಳವುಳ್ಳ ಲಕ್ಷ ಕಮಲಗಳನ್ನು ಪದ್ಮನಯನನಿಗೆ ಪ್ರತ್ಯರ್ಪಣಮಾಡಿ ಪಾದಗಳ ಸೌಂದರ್ಯವನ್ನು ಪಡೆಯಬಹುದು.

ಸುವರ್ಣರಚಿತಾನಾಂ ಚ ಖಂಜನಾನಾಂ ಸಹಸ್ರಕಂ ।
ಗತಿಸೌಂದರ್ಯಹೇತ್ವರ್ಥಂ ದೇಯಂ ಲಕ್ಷ್ಮೀಶ್ವರಾಯ ಚ ॥ ೫೫ ॥

ರಾಜಹಂಸಸಹಸ್ರಂ ಚ ಗಜೇಂದ್ರಾಣಾಂ ಸಹಸ್ರಕಂ ।
ಸುವರ್ಣರಚಿತಂ ದೇಯಂ ಹರಯೇ ಗತಿಹೇತವೇ ॥ ೫೬ ॥

ಸುವರ್ಣಛತ್ರಲಕ್ಷಂ ಚ ದೇಯಂ ನಾರಾಯಣಾಯ ಚ ।
ವಿಚಿತ್ರಂ ರತ್ನಸಾರೇಣ ಮೂರ್ಧಸೌಂದರ್ಯಹೇತವೇ ॥ ೫೭ ॥

ಮಾಲತೀನಾಂ ಚ ಕುಸುಮಮಕ್ಷತಂ ಲಕ್ಷಮೀಶ್ವರಿ ।
ದೇಯಂ ವೃಂದಾವನೇಶಾಯ ಹಾಸಸೌಂದರ್ಯಹೇತವೇ ॥ ೫೮ ॥

ಅಮೂಲ್ಯರತ್ನಲಕ್ಷಂ ಚ ದೇಯಂ ನಾರಾಯಣಾಯ ವೈ ।
ಸುವ್ರತೇ ವ್ರತಪೂರ್ಣಾರ್ಥಂ ಶೀಲಸೌಂದರ್ಯಹೇತವೇ ॥ ೫೯ ॥

---

೫೫. ಚಿನ್ನದಿಂದ ರಚಿತವಾದ ಸಹಸ್ರ ಖಂಜರೀಟ ಪಕ್ಷಿಗಳನ್ನು (ದಾಸರಿ ಹಕ್ಕಿ) ಲಕ್ಷ್ಮೀಪತಿಗೆ ಪ್ರತ್ಯರ್ಪಿಸಿದರೆ ನಡಿಗೆಯು ಸುಂದರವಾಗುವುದು.

೫೬. ಅಂತೆಯೇ ಸಹಸ್ರ ರಾಜಹಂಸಗಳನ್ನೂ, ಸಹಸ್ರ ಮದಗಜಗಳನ್ನೂ ಸುವರ್ಣದಿಂದ ರಚಿಸಿ ಶ್ರೀಹರಿಗೆ ಅರ್ಪಿಸಿದರೆ ನಡಿಗೆಯು ರಮ್ಯವಾಗುವುದು.

೫೭. ಶ್ರೇಷ್ಠರತ್ನಗಳಿಂದ ರಚಿತವಾಗಿ, ವಿಚಿತ್ರವಾಗಿರುವ ಲಕ್ಷ ಸುವರ್ಣ ಛತ್ರಗಳನ್ನು ನಾರಾಯಣನಿಗೆ ಕಾಣಿಕೆಯಾಗಿ ಕೊಟ್ಟು ಸುಂದರವಾದ ಶಿರಸ್ಸನ್ನು ಪಡೆಯಬಹುದು.

೫೮. ಹಾಸವು (ನಗು) ಮನೋಹರವಾಗಬೇಕಾದರೆ, ಮನೋಹರವಾದ ಲಕ್ಷ ಜಾಜೀ ಪುಷ್ಪಗಳನ್ನು ವೃಂದಾವನವಿಹಾರಿಗೆ ವಿನಯಪೂರ್ವಕವಾಗಿ ಪೂಜಿಸಬೇಕು.

೫೯. ಎಲೌ ಸುವ್ರತಳೇ, ವ್ರತದ ಪರಿಪೂರ್ಣತೆಯನ್ನೂ, ಒಳ್ಳೆಯ ನಡತೆಯನ್ನೂ ಬಯಸುವವರು ಶ್ರೀಮನ್ನಾರಾಯಣನಿಗೆ ಅಮೂಲ್ಯವಾದ ಲಕ್ಷರತ್ನಗಳನ್ನು ಕಾಣಿಕೆಯಾಗಿ ಕೊಡಬೇಕು.

ಸ್ವಚ್ಛಸ್ಫಟಿಕಸಂಕಾಶಂ ಮಣೀಂದ್ರಶ್ರೇಷ್ಠಲಕ್ಷಕಂ ।
ದೇಯಂ ಮುನೀಂದ್ರನಾಥಾಯ ಮನಸ್ಸೌಂದರ್ಯಹೇತವೇ ॥ ೬೦ ॥

ಪ್ರವಾಲಸಾರಸಂಕಾಶಂ ಮಣಿಸಾರಸಹಸ್ರಕಂ ।
ದೇಯಂ ಕೃಷ್ಣಾಯ ಭಕ್ತ್ಯಾ ಚ ಪ್ರಿಯರಾಗವಿವೃದ್ಧಯೇ ॥ ೬೧ ॥

ಮಾಣಿಕ್ಯಸಾರಲಕ್ಷಂ ಚ ದೇಯಂ ಕೃಷ್ಣಾಯ ಯತ್ನತಃ ।
ಜನ್ಮನಃ ಕೋಟಿಪರ್ಯನ್ತಂ ಸ್ವಾಮಿಸೌಭಾಗ್ಯಹೇತವೇ ॥ ೬೨ ॥

ಕೂಷ್ಮಾಂಡಂ ನಾರಿಕೇಲಂ ಚ ಜಂಬೀರಂ ಶ್ರೀಫಲಂ ತಥಾ ।
ಫಲಾನ್ಯೇತಾನಿ ದೇಯಾನಿ ಹರಯೇ ಪುತ್ರಹೇತವೇ ॥ ೬೩ ॥

ರತ್ನೇಂದ್ರಸಾರಲಕ್ಷಂ ಚ ದೇಯಂ ಕೃಷ್ಣಾಯ ಯತ್ನತಃ ।
ಅಸಂಖ್ಯ ಜನ್ಮಪರ್ಯನ್ತಂ ಸ್ವಾಮಿನೋ ಧನವೃದ್ಧಯೇ ॥ ೬೪ ॥

---

೬೦. ನಿರ್ಮಲವಾದ ಮನಸ್ಸನ್ನು ಬಯಸುವವರು, ಶುದ್ಧಸ್ಫಟಿಕದಂತೆ ನಿರ್ಮಲವಾದ, ಶ್ರೇಷ್ಠವಾದ ಲಕ್ಷ ಮಣಿಗಳನ್ನು ಮುನೀಂದ್ರರಿಗೆಲ್ಲ ಮಾನ್ಯನಾದ ಪರಮಾತ್ಮನಿಗೆ ಪ್ರತ್ಯರ್ಪಿಸಬೇಕು.

೬೧. ಪತಿಯ ಪ್ರೇಮಾಧಿಕ್ಯವನ್ನು ಬಯಸುವವರು, ಕೋಮಲವಾದ ಚಿಗುರುಗಳಿಗೆ ಸದೃಶವಾದ, ಸಹಸ್ರ ಶ್ರೇಷ್ಠ ಮಣಿಗಳನ್ನು ಭಕ್ತಿಯಿಂದ ಶ್ರೀಕೃಷ್ಣ ಪರಮಾತ್ಮನಿಗೆ ಸಲ್ಲಿಸಬೇಕು.

೬೨. ಕೋಟಿಜನ್ಮಗಳಪರ್ಯಂತವಾಗಿ ಪತಿಯ ಸೌಭಾಗ್ಯವನ್ನು ಬಯಸುವವರು ಶ್ರೇಷ್ಠವಾದ ಲಕ್ಷಮಾಣಿಕ್ಯಗಳನ್ನು ಶ್ರೀಕೃಷ್ಣಪರಮಾತ್ಮನಿಗೆ ಪ್ರಯತ್ನ ಪೂರ್ವಕವಾಗಿ ಸಂಪಾದಿಸಿ ಸಮರ್ಪಿಸಬೇಕು.

೬೩. ಸಂತಾನವನ್ನಿಚ್ಛಿಸುವವರು, ಬೂದುಗುಂಬಳ, ನಾರಿಕೇಳ, ನಿಂಬೆ ಮತ್ತು ಬಿಲ್ವ ಫಲಗಳನ್ನು ಶ್ರೀಹರಿಗೆ ಕಾಣಿಕೆಯಾಗಿ ಕೊಡಬೇಕು.

೬೪. ಅನೇಕ ಜನ್ಮಪರ್ಯಂತವಾಗಿ ಪತಿಗೆ ಧನಧಾನ್ಯಸಂಪತ್ಸಮೃದ್ಧಿಯನ್ನು ಬಯಸುವವರು, ಅತ್ಯುತ್ತಮವಾದ ಲಕ್ಷರತ್ನಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸಬೇಕು.

ವಾದ್ಯಂ ನಾನಾಪ್ರಕಾರಂ ಚ ಕಾಂಸ್ಯತಾಲಾದಿಕಂ ಪರಂ ।
ವ್ರತೇ ಸಂಪತ್ತಿವೃದ್ಧ್ಯರ್ಥಂ ಶ್ರೀಹರಿಂ ಶ್ರಾವಯೇದ್ವ್ರತೀ ॥ ೬೫ ॥

ಪಾಯಸಂ ಪಿಷ್ಟಕಂ ಸರ್ಪಿಃ ಶರ್ಕರಾಕ್ತಂ ಮನೋಹರಂ ।
ಪ್ರದೇಯಂ ಹರಯೇ ಭಕ್ತ್ಯಾ ಸ್ವಾಮಿನೋ ಭೋಗವೃದ್ಧಯೇ ॥ ೬೬ ॥

ಸುಗಂಧಿಪುಷ್ಪಮಾಲಾನಾಂ ಲಕ್ಷಮಕ್ಷತವಾಪ್ಸಿತಂ ।
ಪ್ರದೇಯಂ ಹರಯೇ ಭಕ್ತ್ಯಾ ಹರಿಭಕ್ತಿವಿವೃದ್ಧಯೇ ॥ ೬೭ ॥

ನೈವೇದ್ಯಾನಿ ಚ ದೇಯಾನಿ ಸ್ವಾದೂನಿ ಮಧುರಾಣಿ ಚ ।
ಶ್ರೀಕೃಷ್ಣಪ್ರೀತಿಸಂಪ್ರಾಪ್ತ್ಯರ್ಥಂ ದುರ್ಗೇ ನಾನಾವಿಧಾನಿ ಚ ॥ ೬೮ ॥

ನಾನಾವಿಧಾನಿ ಪುಷ್ಪಾಣಿ ತುಲಸೀಸಂಯುತಾನಿ ಚ ।
ಶ್ರೀಕೃಷ್ಣಪ್ರೀತಯೇ ಭಕ್ತ್ಯಾ ವ್ರತೇ ದೇಯಾನಿ ಸುವ್ರತೇ ॥ ೬೯ ॥

---

೬೫. ಸಂಪತ್ಸಮೃದ್ಧಿಯನ್ನು ಬಯಸುವ ವ್ರತಿಗಳು, ವ್ರತಕಾಲದಲ್ಲಿ ನಾನಾ ಪ್ರಕಾರವಾದ ವಾದ್ಯಗಳ ಮತ್ತು ಕಂಚಿನ ತಾಳಗಳ ಸೇವೆಯನ್ನು ಶ್ರೀಹರಿಗೆ ಸಲ್ಲಿಸಬೇಕು.

೬೬. ಪತಿಯ ಸುಖಭೋಗಗಳು ಅಭಿವೃದ್ಧಿಯಾಗಬೇಕಾದರೆ, ಪಾಯಸ, ತಂಬಿಟ್ಟು, ತುಪ್ಪ, ಸಕ್ಕರೆ ಮುಂತಾದವುಗಳನ್ನು ಶ್ರೀಹರಿಗೆ ಭಕ್ತಿಯಿಂದ ಸಮರ್ಪಣೆ ಮಾಡಬೇಕು.

೬೭. ಶ್ರೀಹರಿಯಲ್ಲಿ ಭಕ್ತಿವೃದ್ಧಿಯಾಗಬೇಕಾದರೆ, ಲಕ್ಷಸುಗಂಧಮಾಲೆಗಳನ್ನು ಭಕ್ತಿಯಿಂದ ಶ್ರೀಹರಿಗೆ ಅರ್ಪಿಸಬೇಕು.

೬೮. ಎಲೌ ದುರ್ಗಾದೇವಿಯೇ, ಶ್ರೀಕೃಷ್ಣನ ಪ್ರೀತಿಗೆ ಪಾತ್ರರಾಗಬೇಕೆನ್ನುವವರು ಮಧುರವೂ, ರುಚಿಕರವೂ ಆದ ನಾನಾವಿಧ ನೈವೇದ್ಯಗಳನ್ನು ಭಕ್ತಿಯಿಂದ ಭಕ್ತವತ್ಸಲನಿಗೆ ಸಮರ್ಪಿಸಬೇಕು.

೬೯. ನಾನಾವಿಧ ಪುಷ್ಪಗಳನ್ನೂ, ತುಳಸೀ ದಳಗಳನ್ನೂ (ಈ ವ್ರತದಲ್ಲಿ) ಭಕ್ತಿಯಿಂದ ಸಮರ್ಪಿಸಿ, ಶ್ರೀಕೃಷ್ಣನ ಪ್ರೀತಿಗೆ ಪಾತ್ರರಾಗಬಹುದು.

ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ ।
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರಿತ್ಯಪಿ　　॥ ೭೪ ॥

ಸ್ವಪ್ನಮೈಥುನಕಂ ತ್ಯಾಜ್ಯಂ ವ್ರತಿನಾ ವ್ರತಶುದ್ಧಯೇ ।
ಸಂಪೂರ್ಣೇ ಚ ವ್ರತೇ ದೇವಿ ಪ್ರತಿಷ್ಠಾ ತದನಂತರಂ　　॥ ೭೫ ॥

ತ್ರಿಶತಂ ವೈ ಷಷ್ಟ್ಯಧಿಕಂ ರಲ್ಲಕಂ ವಸ್ತ್ರಸಂಯುತಂ ।
ಸಭೋಜ್ಯಂ ಸೋಪವೀತಂ ಚ ಸೋಪಹಾರಂ ದದಾತ್ಸ್ವಯಂ　　॥ ೭೬ ॥

ತ್ರಿಶತಂ ವೈ ಷಷ್ಟ್ಯಧಿಕಸಹಸ್ರಂ ವಿಪ್ರಭೋಜನಂ ।
ತ್ರಿಶತಂ ವೈ ಷಷ್ಟ್ಯಧಿಕಂ ಸಹಸ್ರಂ ತಿಲಹೋಮಕಂ　　॥ ೭೭ ॥

ತ್ರಿಶತಂ ವೈ ಷಷ್ಟ್ಯಧಿಕಂ ಸಹಸ್ರಂ ಸ್ವರ್ಣಮೇವ ಚ ।
ದೇಯಾ ವ್ರತಸಮಾಪ್ತೌ ಚ ದಕ್ಷಿಣಾವಿಧಿಬೋಧಿತಾ　　॥ ೭೮ ॥

---

೭೪. ವ್ರತಾಸಕ್ತರಾದವರು ವ್ರತದ ಪರಿಶುದ್ಧತೆಗಾಗಿ, ತಮ್ಮ ಪ್ರಾಣಕಾಂತರ ಸ್ಮರಣೆಯನ್ನೂ, ಗುಣಕೀರ್ತನೆಯನ್ನೂ, ಅವರೊಡನೆ ರತಿಕ್ರೀಡೆಯನ್ನೂ, ಅವರ ದರ್ಶನವನ್ನೂ, ರಹಸ್ಯವಚನಗಳನ್ನೂ, ಕೂಡಬೇಕೆಂಬ ಸಂಕಲ್ಪವನ್ನೂ ಪ್ರಯತ್ನವನ್ನೂ, ಕ್ರಿಯಾನಿವೃತ್ತಿಯನ್ನೂ ಬಯಸಬಾರದು. ಹಾಗೆ ಬಯಸಿದರೆ ವ್ರತವು ಅಪರಿಶುದ್ಧವಾಗುವುದು.

೭೫. ಸ್ವಪ್ನಕಾಲದಲ್ಲಿಯಾದರೂ ರತಿಸುಖಾನುಭವವನ್ನು ಪಡೆದರೆ ವ್ರತಶುದ್ಧಿಯುಂಟಾಗುವುದಿಲ್ಲ. ಈ ರೀತಿ ವ್ರತವು ಪೂರ್ಣವಾದನಂತರ ಕೀರ್ತಿಬರುವ ಕಾರ್ಯವನ್ನಾಚರಿಸಬೇಕು.

೭೬–೭೮. ಮುನ್ನೂರ ಅರವತ್ತು ಜನ ಬ್ರಾಹ್ಮಣರಿಗೆ ಮಿಷ್ಟಾನ್ನ ಭೋಜನದಿಂದ ತೃಪ್ತಿಬಡಿಸಿ, ಮುನ್ನೂರ ಅರವತ್ತು ರತ್ನಕಂಬಳಿಗಳನ್ನೂ, ವಸ್ತ್ರ ಮತ್ತು ಉಪವೀತಗಳನ್ನೂ, ಉಪಹಾರಗಳನ್ನೂ ಕೊಡಬೇಕು. ಅಂತೆಯೇ ಮುನ್ನೂರ ಅರವತ್ತು ತಿಲಹೋಮಗಳನ್ನು ಮಾಡಿಸಿ ಮುನ್ನೂರ ಅರವತ್ತು ಸುವರ್ಣನಾಣ್ಯಗಳನ್ನು ವ್ರತಸಮಾಪ್ತಿಗಾಗಿ ದಾನಮಾಡಬೇಕು.

ಬ್ರಾಹ್ಮಣಾನಾಂ ಸಹಸ್ರಂ ಚ ಪ್ರತ್ಯಹಂ ಭೋಜಯೇತ್ಸ್ವತೀ ।
ಸ್ವಾತ್ಮನಃ ಸಸ್ಯವೃದ್ಧ್ಯರ್ಥಂ ವ್ರತೇ ಜನ್ಮನಿ ಜನ್ಮನಿ ॥ ೭೦ ॥

ಪುಷ್ಪಾಂಜಲಿಶತಂ ದೇಯಂ ನಿತ್ಯಂ ಪೂರ್ಣಂ ಚ ಪೂಜನೇ ।
ಪ್ರಣಾಮಶತಕಂ ದೇವಿ ಕರ್ತವ್ಯಂ ಭಕ್ತಿವೃದ್ಧಯೇ ॥ ೭೧ ॥

ಷಣ್ಮಾಸಾಂಶ್ಚ ಹವಿಷ್ಯಾನ್ನಂ ಮಾಸಾನ್ಪಂಚ ಫಲಾದಿಕಂ ।
ಹವಿಃಪಕ್ಷಂ ಜಲಂ ಪಕ್ಷಂ ವ್ರತೇ ಭಕ್ಷೇಚ್ಚ ಸುವ್ರತೇ ॥ ೭೨ ॥

ರತ್ನಪ್ರದೀಪಶತಕಂ ವಹ್ನಿಂ ದದ್ಯಾದ್ದಿವಾನಿಶಂ ।
ರಾತ್ರೌ ಕುಶಾಸನಂ ಕೃತ್ವಾ ನಿತ್ಯಂ ಜಾಗರಣಂ ವ್ರತೇ ॥ ೭೩ ॥

---

೭೦. ಜನ್ಮಜನ್ಮಾಂತರದಲ್ಲೂ ತನಗೆ ಧಾನ್ಯಸಮೃದ್ಧಿಯಾಗಬೇಕೆನ್ನುವವರು ವ್ರತಕಾಲದಲ್ಲಿ ಪ್ರತಿದಿನವೂ ಸಾವಿರಾರು ಬ್ರಾಹ್ಮಣರಿಗೆ ಮಿಷ್ಟಾನ್ನವನ್ನು ಊಟ ಮಾಡಿಸಬೇಕು.

೭೧. ಪೂಜೆಯ ಪರಿಪೂರ್ಣತೆಗಾಗಿ ಪ್ರತಿನಿತ್ಯವೂ ಪುಷ್ಪಾಂಜಲಿಯನ್ನು ನೂರುಬಾರಿ ಅರ್ಪಿಸಬೇಕು. ಭಕ್ತಿಯು ವೃದ್ಧಿಗೊಳ್ಳಲು ನಿತ್ಯವೂ ಪರಮಾತ್ಮನಿಗೆ ನೂರು ನಮಸ್ಕಾರಗಳನ್ನು ಮಾಡಬೇಕು.

೭೨. ಎಲೌ ಸುವ್ರತಳೇ, ಈ ವ್ರತವನ್ನಾಚರಿಸುವಾಗ ಆರುತಿಂಗಳಕಾಲ ಹವಿಷ್ಯಾನ್ನವನ್ನೂ, ಐದು ತಿಂಗಳು ಹಣ್ಣುಹಂಪಲುಗಳನ್ನೂ, ಹದಿನೈದುದಿವಸ ಕೇವಲ ಹುತಶೇಷವಾದ ಹವಿಸ್ಸನ್ನೂ, ಉಳಿದ ಹದಿನೈದುದಿವಸಗಳೂ ಕೇವಲ ನೀರನ್ನೂ ಸೇವಿಸಿಕೊಂಡಿರಬೇಕು.

೭೩. ಹಗಲು ಹೊತ್ತಿನಲ್ಲಿ ನೂರಾರು ರತ್ನದೀಪಗಳನ್ನೂ, ತೇಜೋಮಯವಾದ ದೀಪದಿಂದ ತುಂಬಿದ ತಟ್ಟೆಗಳನ್ನೂ ದಾನಮಾಡಿ, ರಾತ್ರಿ ದರ್ಭಾಸನದಲ್ಲಿ ಕುಳಿತು ಜಾಗರಣೆ ಮಾಡಬೇಕು.

## ನಾಲ್ಕನೆಯ ಅಧ್ಯಾಯದ ಸಾರಾಂಶ

ಪಾರ್ವತಿಯು ಪುಣ್ಯಕವ್ರತವನ್ನಾಚರಿಸುವ ವಿಧಾನವನ್ನೂ, ನಿಯಮಗಳನ್ನೂ, ತಿಳುಹಬೇಕೆಂದು ಕೇಳಲು, ಈಶ್ವರನು ಅದೆಲ್ಲವನ್ನೂ ಸವಿಸ್ತರವಾಗಿ ಹೇಳಿ, ಇಷ್ಟಾರ್ಥಪ್ರಾಪ್ತಿಯಾಗಬೇಕಾದರೆ ಮಾಡಬೇಕಾದ ಪೂಜಾವಿಶೇಷವನ್ನೂ ವಿವರಿಸಿ, ವ್ರತೋಪಯುಕ್ತವಾದ ಸಂಭಾರಗಳನ್ನು ಸೇವಕರ ಮೂಲಕ ಸಿದ್ಧಗೊಳಿಸಿಕೊಂಡು ವ್ರತವನ್ನಾಚರಿಸಬೇಕೆಂದು ಪಾರ್ವತಿಗೆ ಹೇಳಿದನು.

ಅನ್ಯಾಂ ಸಮಾಪ್ತಿದಿವಸೇ ಕಥಯಿಷ್ಯಾಮಿ ದಕ್ಷಿಣಾಂ ।
ಏತದ್ವ್ರತಫಲಂ ದೇವಿ ದೃಢಾ ಭಕ್ತಿರ್ಹರೌ ಭವೇತ್ ॥ ೭೯ ॥

ಹರಿತುಲ್ಯೋ ಭವೇತ್ಪುತ್ರೋ ವಿಖ್ಯಾತೋ ಭುವನತ್ರಯೇ ।
ಸೌಂದರ್ಯಂ ಸ್ವಾಮಿಸೌಭಾಗ್ಯಮೈಶ್ವರ್ಯಂ ವಿಪುಲಂ ಧನಂ ॥ ೮೦ ॥

ಸರ್ವವಾಂಛಿತಸಿದ್ಧೀನಾಂ ಬೀಜಂ ಜನ್ಮನಿ ಜನ್ಮನಿ ।
ಇತ್ಯೇವಂ ಕಥಿತಂ ದೇವಿ ವ್ರತಂ ಕುರು ಮಹೇಶ್ವರಿ ॥ ೮೧ ॥

ಪುತ್ರಸ್ತೇ ಭವಿತಾ ಸಾಧ್ವೀತ್ಯುಕ್ತ್ವಾ ಸ ವಿರರಾಮ ಹ ॥ ೮೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದ ನಾರಾಯಣ ಸಂವಾದೇ ಪುಣ್ಯಕವ್ರತವಿಧಾನಂ
ನಾಮ ಚತುರ್ಥೋಽಧ್ಯಾಯಃ

---

೭೯ ವ್ರತಸಮಾಪ್ತಿಯಾದನಂತರ ಉಳಿದ ದಕ್ಷಿಣೆಯ ವಿಷಯವನ್ನು ಹೇಳುವೆನು. ಎಲೌ ದೇವಿಯೇ, ಪರಮಾತ್ಮನಲ್ಲಿ ದೃಢವಾದ ಭಕ್ತಿಯುಂಟಾಗುವುದೇ ಈ ವ್ರತದ ಫಲವು.

೮೦. ಈ ವ್ರತವನ್ನಾಚರಿಸಿದವರಿಗೆ ಶ್ರೀಹರಿಗೆ ಸಮಾನನಾದ ಪುತ್ರನು ಜನಿಸಿ, ಮೂರು ಲೋಕದಲ್ಲೂ ವಿಖ್ಯಾತನಾಗುವನು. ಅಲ್ಲದೆ ತಮಗೆ ಶರೀರ ಸೌಂದರ್ಯವೂ, ಸ್ವಾಮಿಸೌಭಾಗ್ಯವೂ, ವಿಪುಲೈಶ್ವರ್ಯವೂ ಲಭಿಸುವುದು.

೮೧. ಜನ್ಮಜನ್ಮದಲ್ಲೂ ಇಷ್ಟಾರ್ಥವು ಸಿದ್ಧಿಸಬೇಕಾದರೆ ಈ ವ್ರತವು ಅದಕ್ಕೆ ಬೀಜರೂಪವಾಗಿರುವುದು. ಎಲೌ ಮಹೇಶ್ವರಿಯೇ ಆದುದರಿಂದ ನಾನು ಹೇಳಿದ ಈ ವ್ರತವನ್ನು ನೀನು ಆಚರಿಸು.

೮೨. ಸಾಧ್ವೀಮಣಿಯಾದ ನಿನಗೆ ಸತ್ಪುತ್ರನು ಜನಿಸುವನು ಎಂದು ಪರಮೇಶ್ವರನು ಹೇಳಿದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ಪುಣ್ಯಕವ್ರತವಿಧಾನವೆಂಬ ನಾಲ್ಕನೆಯ ಅಧ್ಯಾಯವು
ಮುಗಿದುದು.



॥ ಓಂ ॥

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ಪಂಚಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಶ್ರುತ್ವಾ ವ್ರತವಿಧಾನಂ ಚ ದುರ್ಗಾ ಸಂಹೃಷ್ಟಮಾನಸಾ ।
ಪುನಃ ಪಪ್ರಚ್ಛ ಕಾನ್ತಂ ಸಾ ದಿವ್ಯಾಂ ವ್ರತಕಥಾಂ ಶುಭಾಂ ॥ ೧ ॥

॥ ಶ್ರೀ ಪಾರ್ವತ್ಯುವಾಚ ॥

ಕಿಮದ್ಭುತಂ ವ್ರತಂ ನಾಥ ವಿಧಾನಂ ಫಲಮಸ್ಯ ಚ ।
ಅಧಿಕಾಂ ತತ್ಕಥಾಂ ಬ್ರೂಹಿ ವ್ರತಂ ಕೇನ ಪ್ರಕಾಶಿತಂ ॥ ೨ ॥

---

### ಐದನೆಯ ಅಧ್ಯಾಯವು

೧. ನಾರಾಯಣ :— ದುರ್ಗಾದೇವಿಯು ಪುಣ್ಯಕವ್ರತವಿಧಾನವನ್ನು ಕೇಳಿ ಸಂತಸಗೊಂಡು, ಪುನಃ ತನ್ನ ಪ್ರಾಣಕಾಂತನನ್ನು ಕುರಿತು ದಿವ್ಯವಾದ ಆ ವ್ರತದ ಕಥೆಯನ್ನು ಹೇಳಬೇಕೆಂದು ಬೇಡಿದಳು.

೨. ಪಾರ್ವತಿ :—ಎಲೈ ಪ್ರಾಣವಲ್ಲಭನೇ, ಈ ವ್ರತವಿಧಾನವೂ, ಅದರ ಫಲವೂ ಸಕಲರಿಗೂ ಅತ್ಯಾಶ್ಚರ್ಯಕರವಾಗಿದೆ. ಈ ವ್ರತದ ಮಹಿಮೆಯನ್ನು ತೋರ್ಪಡಿಸುವ ಕಥೆಯನ್ನೂ, ಇದನ್ನಾಚರಿಸಿದವರಾರೆಂಬುದನ್ನೂ ನನಗೆ ಹೇಳು.

॥ ಪುಣ್ಯಕವ್ರತಕಥಾ ॥

॥ ಶ್ರೀ ಮಹಾದೇವ ಉವಾಚ ॥

ಶತರೂಪಾ ಮನೋಃ ಪತ್ನೀ ಪುತ್ರದುಃಖೇನ ದುಃಖಿತಾ ।
ಬ್ರಹ್ಮಣಃ ಸ್ಥಾನಮಾಗತ್ಯ ಸಾ ಬ್ರಹ್ಮಾಣಮುವಾಚ ಹ ॥ ೩ ॥

॥ ಶತರೂಪೋವಾಚ ॥

ಬ್ರಹ್ಮನ್ ಕೇನ ಪ್ರಕಾರೇಣ ವಂಧ್ಯಾಯಾಶ್ಚ ಸುತೋ ಭವೇತ್
ತನ್ಮೇ ಬ್ರೂಹಿ ಜಗದ್ಧಾತಃ ಸೃಷ್ಟಿಕಾರಣಕಾರಣ ॥ ೪ ॥

ತಜ್ಜನ್ಮ ನಿಷ್ಫಲಂ ಬ್ರಹ್ಮನ್ನೈಶ್ವರ್ಯಂ ಧನಮೇವ ಚ ।
ಕಿಂಚಿನ್ನ ಶೋಭತೇ ಗೇಹೇ ವಿನಾ ಪುತ್ರೇಣ ಪುತ್ರಿಣಾಂ ॥ ೫ ॥

ತಪೋದಾನೋದ್ಭವಂ ಪುಣ್ಯಂ ಜನ್ಮಾಂತರಸುಖಾವಹಂ ।
ಸುಖದೋ ಮೋಕ್ಷದಃ ಪ್ರೀತಿದಾತಾ ಪುತ್ರಶ್ಚ ಪುತ್ರಿಣಾಂ ॥ ೬ ॥

೩. (ಪುಣ್ಯಕವ್ರತದ ಕಥೆ) ಶ್ರೀಮಹಾದೇವ :— ಪೂರ್ವದಲ್ಲಿ ಸ್ವಾಯಂಭುವ ಮನುವಿನ ಪತ್ನಿಯಾದ ಶತರೂಪೆಯು ಅಪುತ್ರವತಿಯಾದುದರಿಂದ ದುಃಖಿತೆಯಾಗಿ ಬ್ರಹ್ಮನ ಸಮೀಪಕ್ಕೆ ಬಂದು ಅವನನ್ನು ಕುರಿತಿಂತೆಂದಳು.

೪. ಶತರೂಪೆ :— ಎಲೈ ಜಗತ್ಸೃಷ್ಟಿಕರ್ತನಾದ ಬ್ರಹ್ಮದೇವನೇ, ಬಂಜೆಯು ಪುತ್ರವತಿಯಾಗಬೇಕಾದರೆ ಯಾವ ವ್ರತವನ್ನಾಚರಿಸಬೇಕೆಂಬುದನ್ನು ನನಗೆ ಹೇಳು.

೫. ಮಕ್ಕಳಿಲ್ಲದವರ ಜನ್ಮವೂ, ಧನಕನಕಾದಿ ಸಂಪತ್ತುಗಳೂ ನಿಷ್ಫಲವಾದುವು. ಗೃಹಸ್ಥನ ಮನೆಯಲ್ಲಿ ಮಕ್ಕಳಿಲ್ಲದಿದ್ದರೆ ಸ್ವಲ್ಪವೂ ಶೋಭಿಸುವುದಿಲ್ಲ.

೬. ತಪಸ್ಸು ಮತ್ತು ದಾನವನ್ನು ಆಚರಿಸಿ ಪಡೆಯುವ ಪುಣ್ಯವು ಜನ್ಮಾಂತರದಲ್ಲಿ ಸುಖವನ್ನು ಕೊಡುವುದು. ಆದರೆ ಸತ್ಪುತ್ರನು ಪುತ್ರವಂತರಿಗೆ ಪ್ರೀತಿ ಮತ್ತು ಸುಖಗಳನ್ನು ಕೊಟ್ಟು ಅಂತ್ಯದಲ್ಲಿ ಮೋಕ್ಷವನ್ನೂ ಕೊಡುವನು.



ಪುತ್ರೀ ಪುತ್ರಮುಖಂ ದೃಷ್ಟ್ವಾ ಚಾಶ್ವಮೇಧಶತೋದ್ಭವಂ ।
ಫಲಂ ಪ್ರಸ್ನಾಮ ನರಕತ್ರಾಣಹೇತುಂ ಲಭೇದ್ಧ್ರುವಂ ॥ ೭ ॥

ಪುತ್ರೋತ್ಪತ್ತೇರುಪಾಯಂ ವೈ ವದ ಮಾಂ ತಾಪಸಂಯುತಾಂ ।
ತದಾ ಭದ್ರಂ ನ ಚೇದ್ಭರ್ತ್ರಾ ಸಹ ಯಾಸ್ಯಾಮಿ ಕಾನನಂ ॥ ೮ ॥

ಗೃಹಾಣ ರಾಜ್ಯಮೈಶ್ವರ್ಯಂ ಧನಂ ಪೃಥ್ವೀಂ ಪ್ರಜಾವಹಾಂ ।
ಕಿಮೇತೇನಾವಯೋಸ್ತಾತ ವಿನಾ ಪುತ್ರೈರಪುತ್ರಿಣೋಃ ॥ ೯ ॥

ಅಪುತ್ರಿಣೋ ಮುಖಂ ದ್ರಷ್ಟುಂ ವಿದ್ವಾನ್ನೇಚ್ಛತೇಽಶಿವಂ ।
ಮುಖಂ ದರ್ಶಯಿತುಂ ಲಜ್ಜಾಂ ಸಮವಾಪ್ನೋತ್ಯಪುತ್ರಕಃ ॥ ೧೦ ॥

---

೭. ಪುತ್ರನ ಮುಖವನ್ನು ಅವಲೋಕನಮಾಡಿದ ಪಿತನು ನೂರು ಅಶ್ವಮೇಧ ಯಾಗ ಮಾಡಿದ ಫಲವನ್ನು ಪಡೆಯುವುದಲ್ಲದೆ 'ಪುಂ' ಎಂಬ ನರಕದಿಂದ ಪಾರಾಗುವನು (ಪುಂ ನಾಮ್ನಃ ನರಕಾತ್ ತ್ರಾಯತೇ ಇತಿ–ಪುತ್ರಃ) ಎಂದು ಭಾರತದಲ್ಲಿ ಹೇಳಿದೆ.

೮. ಆದುದರಿಂದ ಮಕ್ಕಳಿಲ್ಲದೆ ತಪಿಸುತ್ತಿರುವ ನನಗೆ ಮಕ್ಕಳಾಗಲು ಮಾಡಬೇಕಾದ ವ್ರತಾದ್ಯುಪಾಯಗಳನ್ನು ಹೇಳು, ಆಗಲೂ ನನಗೆ ಮಕ್ಕಳಾಗದಿದ್ದರೆ ನನ್ನ ಪತಿಯೊಡನೆ ಅರಣ್ಯಕ್ಕೆ ತೆರಳುವೆನು.

೯. ಎಲೈ ಪಿತನೇ, ಮಕ್ಕಳಿಲ್ಲದ ನಮಗೆ, ರಾಜ್ಯದಿಂದಾಗಲೀ, ಅತುಲೈಶ್ವರ್ಯದಿಂದಾಗಲೀ, ಪ್ರಜಾಪೂರಿತವಾದ ಪೃಥಿವಿಯಿಂದಾಗಲೀ, ಯಾವ ಪ್ರಯೋಜನವೂ ಇಲ್ಲದುದರಿಂದ, ಇವುಗಳನ್ನು ನೀನೇ ತೆಗೆದುಕೋ.

೧೦. ಮಕ್ಕಳಿಲ್ಲದವರ ಮುಖದರ್ಶನವು ಅಮಂಗಳಕರವಾದುದೆಂದು ಬಗೆದು ವಿದ್ವಾಂಸರು ಅವರ ಮುಖದರ್ಶನ ಮಾಡುವುದಿಲ್ಲ. ಮಕ್ಕಳಿಲ್ಲದವನೂ ಕೂಡ ಇತರರಿಗೆ ತನ್ನ ಮುಖವನ್ನು ತೋರಿಸಲು ನಾಚಿಕೊಳ್ಳುತ್ತಾನೆ.

ಅಥವಾ ಗರಲಂ ಭುಕ್ತ್ವಾ ಪ್ರವೇಕ್ಷ್ಯಾಮಿ ಹುತಾಶನಂ ।
ಅಪುತ್ರಪೌತ್ರಮಶಿವಂ ಗೃಹಂ ಸ್ಯಾತ್ಸ್ತ್ರೀವಿಹೀನಕಂ　　॥ ೧೧ ॥

ಇತ್ಯೇವಮುಕ್ತ್ವಾ ಸಾ ಸಾಕ್ಷಾದ್ಬ್ರಹ್ಮಣೋಗ್ರೇ ರುರೋದ ಹ ।
ಕೃಪಾನಿಧಿಶ್ಚ ತಾಂ ದೃಷ್ಟ್ವಾ ಪ್ರವಕ್ತುಮುಪಚಕ್ರಮೇ　　॥ ೧೨ ॥

॥ ಬ್ರಹ್ಮೋವಾಚ ॥

ಶ್ರುಣು ವತ್ಸೇ ಪ್ರವಕ್ಷ್ಯಾಮಿ ಪುತ್ರೋಪಾಯಂ ಸುಖಾವಹಂ ।
ಸರ್ವೈಶ್ವರ್ಯಾದಿಬೀಜಂ ಚ ಸರ್ವವಾಂಛಾಪ್ರದಂ ಶುಭಂ　　॥ ೧೩ ॥

ಮಾಘಶುಕ್ಲತ್ರಯೋದಶ್ಯಾಂ ವ್ರತಮೇತತ್ಸುಪುಣ್ಯಕಂ ।
ಕರ್ತವ್ಯಂ ಶುಕ್ಲಕಾಲೇ ಚ ಕೃಷ್ಣಮಾರಾಧ್ಯ ಸರ್ವದಂ　　॥ ೧೪ ॥

---

೧೧. ನೀನು ನನಗೆ ಮಕ್ಕಳಾಗುವಂತೆ ಅನುಗ್ರಹಿಸದಿದ್ದರೆ, ವಿಷಪಾನಮಾಡಿ, ಅಗ್ನಿಪ್ರವೇಶಮಾಡುವೆನು, ಪುತ್ರಪೌತ್ರರಿಲ್ಲದೆ ಅಮಂಗಳಕರವಾಗಿರುವ ನಮ್ಮ ಮನೆಯು ಸ್ತ್ರೀರಹಿತವೂ ಆಗಲಿ.

೧೨. ಈ ರೀತಿಯಾಗಿ ನುಡಿದು ಆ ಶತರೂಪೆಯು ಬ್ರಹ್ಮನ ಮುಂದೆ ಗೋಳಾಡಲಾರಂಭಿಸಿದಳು. ಆಗ ದಯಾಮಯನಾದ ಬ್ರಹ್ಮನು ಅವಳನ್ನು ಕುರಿತು ಹೀಗೆ ಹೇಳಲುಪಕ್ರಮಿಸಿದನು.

೧೩. ಬ್ರಹ್ಮ:—ಎಲೈ ಪುತ್ರಿಯೇ, ಸಕಲೈಶ್ವರ್ಯಕ್ಕೂ ಮೂಲಕಾರಣವೂ, ಸಕಲೇಷ್ಟಾರ್ಥಪ್ರದಾಯಕವೂ, ಶುಭಕರವೂ ಆದ ಪುತ್ರಪ್ರಾಪ್ತ್ಯುಪಾಯವನ್ನು ಹೇಳುವೆನು, ಕೇಳು.

೧೪. ಮಾಘಶುದ್ಧತ್ರಯೋದಶಿಯ ದಿವಸ, ಶುಭಕಾಲದಲ್ಲಿ ಪುಣ್ಯಕವೆಂಬ ವ್ರತವನ್ನಾಚರಿಸಿ, ಸಕಲರ ಇಷ್ಟಾರ್ಥದಾಯಕನಾದ ಶ್ರೀಕೃಷ್ಣನನ್ನು ಪೂಜಿಸಬೇಕು.

ಸಂವತ್ಸರಂ ಚ ಕರ್ತವ್ಯಂ ಸರ್ವವಿಘ್ನವಿನಾಶನಂ ।
ದ್ರವ್ಯಾಣಿ ವೇದೈರುಕ್ತಾನಿ ವ್ರತೇ ಧೇಯಾನಿ ಸುವ್ರತೇ ॥ ೧೫ ॥

ವ್ರತಂ ಚ ಕಾಣ್ವಶಾಖೋಕ್ತಂ ಸರ್ವವಾಂಛಿತಸಿದ್ಧಿದಂ ।
ಕೃತ್ವಾ ಪುತ್ರಂ ಲಭ ಶುಭೇ ವಿಷ್ಣುತುಲ್ಯಪರಾಕ್ರಮಂ ॥ ೧೬ ॥

ಬ್ರಹ್ಮಣಶ್ಚ ವಚಃ ಶ್ರುತ್ವಾ ಸಾ ಕೃತ್ವಾ ವ್ರತಮುತ್ತಮಂ ।
ಪ್ರಿಯವ್ರತೋತ್ತಾನಪಾದೌ ಲೇಭೇ ಪುತ್ರೌ ಮನೋಹರೌ ॥ ೧೭ ॥

ವ್ರತಂ ಕೃತ್ವಾ ದೇವಹೂತಿರ್ಲೇಭೇ ಸಿದ್ಧೇಶ್ವರಂ ಸುತಂ ।
ನಾರಾಯಣಾಂಶಂ ಕಪಿಲಂ ಪುಣ್ಯಕಂ ಪುಣ್ಯದಂ ಶುಭಂ ॥ ೧೮ ॥

ಅರುಂಧತೀದಂ ಕೃತ್ವಾ ತು ಲೇಭೇ ಶಕ್ತಿಸುತಂ ಶುಭಾ ।
ಶಕ್ತಿಕಾಂತಾವ್ರತಂ ಕೃತ್ವಾ ಸುತಂ ಲೇಭೇ ಪರಾಶರಂ ॥ ೧೯ ॥

೧೫. ಸಕಲವಿಘ್ನವನ್ನೂ ಪರಿಹಾರಮಾಡುವ ಈ ವ್ರತವನ್ನು ಒಂದು ವರ್ಷಕಾಲ ಆಚರಿಸಬೇಕು. ಈ ವ್ರತದಲ್ಲಿ ವೇದೋಕ್ತವಾದ ಸಕಲ ದ್ರವ್ಯಗಳನ್ನೂ ಪರಮಾತ್ಮನಿಗೆ ಸಮರ್ಪಿಸಬೇಕು.

೧೬. ಕಾಣ್ವಶಾಖೋಕ್ತವೂ, ಸಕಲ ಇಷ್ಟಾರ್ಥದಾಯಕವೂ ಆದ ಈ ವ್ರತವನ್ನಾಚರಿಸಿ, ವಿಷ್ಣುವಿಗೆ ಸಮನಾದ ಮಹಿಮೆಯುಳ್ಳ ಸತ್ಪುತ್ರನನ್ನು ಪಡೆಯುವವಳಾಗು.

೧೭. ಬ್ರಹ್ಮನ ಮಾತನ್ನು ಕೇಳಿ ಆ ಶತರೂಪೆಯು ಅತ್ಯುತ್ತಮವಾದ ಈ ಪುಣ್ಯಕವ್ರತವನ್ನಾಚರಿಸಿ ಮನೋಹರವಾದ ಪ್ರಿಯವ್ರತ ಮತ್ತು ಉತ್ತಾನಪಾದನೆಂಬ ಇಬ್ಬರು ಮಕ್ಕಳನ್ನು ಪಡೆದಳು.

೧೮. ಸ್ವಾಯಂಭುವಮನುವಿನ ಎರಡನೆಯ ಹೆಂಡತಿಯಾದ ದೇವಹೂತಿಯೂ ಕೂಡ ಪುಣ್ಯಕರವಾದ ಈ ವ್ರತವನ್ನಾಚರಿಸಿ ನಾರಾಯಣಾಂಶದಿಂದ, ಸಿದ್ಧೇಶ್ವರನೂ ಸಾಂಖ್ಯಶಾಸ್ತ್ರ ತತ್ವಜ್ಞನೂ ಆದ ಕಪಿಲಮಹರ್ಷಿಯನ್ನು ಪುತ್ರನನ್ನಾಗಿ ಪಡೆದಳು.

೧೯. ವಸಿಷ್ಠಮಹರ್ಷಿಯ ಪತ್ನಿಯಾದ ಅರುಂಧತಿಯು ಈ ಶುಭಕರವಾದ ವ್ರತವನ್ನು ಮಾಡಿ ಶಕ್ತಿಯೆಂಬ ಮಗನನ್ನು ಪಡೆದಳು. ಆ ಶಕ್ತಿಯ ಪತ್ನಿಯೂ ಈ ವ್ರತಾಚರಣೆಯ ಮಹಿಮೆಯಿಂದಲೇ ಪರಾಶರ ಮಹರ್ಷಿಯನ್ನು ಪುತ್ರನನ್ನಾಗಿ ಪಡೆದಳು.

ಅದಿತಿಶ್ಚ ವ್ರತಂ ಕೃತ್ವಾ ಲೇಭೇ ವಾಮನಕಂ ಸುತಂ ।
ಶಚೀ ಜಯಂತಂ ಪುತ್ರಂ ಚ ಲೇಭೇ ಕೃತ್ವೇದಮೀಶ್ವರಿ ॥ ೨೦ ॥

ಉತ್ತಾನಪಾದಪತ್ನೀದಂ ಕೃತ್ವಾ ಲೇಭೇ ಧ್ರುವಂ ಸುತಂ ।
ಕುಬೇರಜಾಯಾ ಕೃತ್ವೇದಂ ಲೇಭೇ ಚ ನಲಕೂಬರಂ ॥ ೨೧ ॥

ಸೂರ್ಯಪತ್ನೀ ಮನುಂ ಲೇಭೇ ಕೃತ್ವೇದಂ ವ್ರತಮುತ್ತಮಂ ।
ಅತ್ರಿಪತ್ನೀ ಸುತಂ ಚಂದ್ರಂ ಲೇಭೇ ಕೃತ್ವೇದಮುತ್ತಮಂ ॥ ೨೨ ॥

ಲೇಭೇ ಚಾಂಗಿರಸಃ ಪತ್ನೀ ಕೃತ್ವೇದಂ ವ್ರತಮುತ್ತಮಂ ।
ಬೃಹಸ್ಪತಿಂ ಸುರಗುರುಂ ಪುತ್ರಮಸ್ಯ ಪ್ರಭಾವತಃ ॥ ೨೩ ॥

ಭೃಗೋರ್ಭಾರ್ಯಾ ವ್ರತಂ ಕೃತ್ವಾ ಲೇಭೇ ದೈತ್ಯಗುರುಂ ಸುತಂ ।
ಶುಕ್ರಂ ನಾರಾಯಣಾಂಶಂ ಚ ಸರ್ವತೇಜಸ್ವಿನಾಂ ವರಂ ॥ ೨೪ ॥

---

೨೦. ಈ ವ್ರತವನ್ನಾಚರಿಸಿ ಅದಿತಿಯು ವಾಮನಕನೆಂಬ ಪುತ್ರನನ್ನೂ, ಇಂದ್ರನ ರಾಣಿಯಾದ ಶಚೀದೇವಿಯು ಜಯಂತನೆಂಬ ಪುತ್ರನನ್ನೂ ಪಡೆದರು.

೨೧. ಉತ್ತಾನಪಾದನ ಪತ್ನಿಯಾದ ಸುನೀತಿಯು ಈ ವ್ರತವನ್ನಾಚರಿಸಿ ಧ್ರುವನನ್ನೂ, ಕುಬೇರನ ಪತ್ನಿಯಾದ ಮನೋರಮೆಯು ನಲಕೂಬರನನ್ನೂ ಪುತ್ರರನ್ನಾಗಿ ಪಡೆದರು.

೨೨. ಸೂರ್ಯನ ಪತ್ನಿಯು ಈ ಉತ್ತಮವಾದ ವ್ರತವನ್ನಾಚರಿಸಿ ವೈವಸ್ವತ ಮನುವನ್ನು ಪಡೆದಳು. ಅತ್ರಿಮಹರ್ಷಿಯ ಪತ್ನಿಯಾದ ಅನುಸೂಯೆಯೂ ಕೂಡ ಈ ವ್ರತದ ಮಹಿಮೆಯಿಂದ ಚಂದ್ರನನ್ನು ಪುತ್ರನನ್ನಾಗಿ ಪಡೆದಳು.

೨೩. ಅಂಗಿರಸ ಪ್ರಜಾಪತಿಯ ಪತ್ನಿಯು ಈ ಉತ್ತಮವ್ರತನ್ನಾಚರಿಸಿ ಇವರ ಮಹಿಮೆಯಿಂದ ದೇವಗುರುವಾದ ಬೃಹಸ್ಪತ್ಯಾಚಾರ್ಯನನ್ನು ಪುತ್ರನನ್ನಾಗಿ ಪಡೆದಳು.

೨೪. ಭೃಗುಮಹರ್ಷಿಯ ಪತ್ನಿಯು ಈ ವ್ರತನ್ನಾಚರಿಸಿ, ನಾರಾಯಣಾಂಶ ಸಂಭೂತನೂ, ತೇಜಸ್ವಿಗಳಲ್ಲಿ ಶ್ರೇಷ್ಠನೂ, ದೈತ್ಯರಿಗೆಲ್ಲ ಗುರುವೂ ಆದ ಶುಕ್ರಾಚಾರ್ಯನನ್ನು ಪುತ್ನನನ್ನಾಗಿ ಪಡೆದಳು.

**ಇತ್ಯೇವಂ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।**
**ಸುಖದಂ ಮೋಕ್ಷದಂ ಸಾರಂ ಗಣೇಶಜನಿಕಾರಣಂ　　　॥ ೨೯ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ ನಾರದನಾರಾಯಣಸಂವಾದೇ ಪುಣ್ಯಕವ್ರತಕಥನಂ ನಾಮ ಪಂಚಮೋಽಧ್ಯಾಯಃ**

---

೨೯. ಸುಖಕರವೂ, ಮೋಕ್ಷದಾಯಕವೂ, ವೇದಸಾರವೂ ಆದ ಗಣೇಶನ ಉತ್ಪತ್ತಿಗೆ ಕಾರಣವನ್ನು ವಿವರಿಸಿಯಾಯಿತು. ಎಲೈ ನಾರದನೇ, ಇನ್ನು ಏನನ್ನು ಕೇಳಲು ನೀನು ಬಯಸುವೆ.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ಪುಣ್ಯಕವ್ರತಕಥನರೂಪವಾದ
ಐದನೆಯ ಅಧ್ಯಾಯವು ಮುಗಿದುದು.



ಇತ್യೇವಂ ಕಥಿತಂ ದೇವಿ ವ್ರತಾನಾಂ ವ್ರತಮುತ್ತಮಂ ।
ತ್ವಮೇವಂ ಕುರು ಕಲ್ಯಾಣಿ ಹಿಮಾಲಯಸುತೇ ಶುಭೇ ॥ ೨೫ ॥

ಸಾಧ್ವ್ಯಂ ರಾಜೇಂದ್ರಪತ್ನೀನಾಂ ದೇವೀನಾಂ ಚ ಸುಖಾವಹಂ ।
ವ್ರತಮೇತನ್ಮಹಾಸಾಧ್ವಿ ಸಾಧ್ವೀನಾಂ ಪ್ರಾಣತಃ ಪ್ರಿಯಂ ॥ ೨೬ ॥

ವ್ರತಸ್ಯಾಸ್ಯ ಪ್ರಭಾವೇಣ ಸ್ವಯಂ ಗೋಪಾಂಗನೇಶ್ವರಃ ।
ಈಶ್ವರಃ ಸರ್ವಭೂತಾನಾಂ ತವ ಪುತ್ರೋ ಭವಿಷ್ಯತಿ ॥ ೨೭ ॥

ಇತ್ಯುಕ್ತ್ವಾ ಶಂಕರಸ್ತತ್ರ ವಿರರಾಮ ಚ ನಾರದ ।
ವ್ರತಂ ಚಕಾರ ಸಾ ದೇವೀ ಪ್ರಹೃಷ್ಟಾ ಶಂಕರಾಜ್ಞಯಾ ॥ ೨೮ ॥

---

೨೫. ಎಲೌ ಪಾರ್ವತಿಯೇ, ವ್ರತಗಳಲ್ಲೆಲ್ಲ ಅತ್ಯುತ್ತಮವಾದ ವ್ರತವನ್ನು ನಿನಗೆ ಉಪದೇಶಿಸಿದೆನು. ಪರ್ವತರಾಜನ ಮಗಳಾದ ನೀನು ಈ ವ್ರತವನ್ನಾಚರಿಸಿ ಕಲ್ಯಾಣವನ್ನು ಹೊಂದು.

೨೬. ಭೂಲೋಕದಲ್ಲಿ ರಾಜಮಹಿಷಿಯರು ಮಾತ್ರ ಆಚರಿಸಬಹುದಾದ ಈ ವ್ರತವನ್ನು ದೇವಲೋಕದ ಸಮಸ್ತ ದೇವಿಯರೂ ಆಚರಿಸಿ ಸುಖವನ್ನು ಪಡೆದಿರುವರು. ಎಲೌ, ಪತಿವ್ರತಾಶಿರೋಮಣಿಯೇ, ಈ ವ್ರತವು ಸಾಧ್ವೀಮಣಿಯರಿಗೆ ಪ್ರಾಣಕ್ಕಿಂತಲೂ ಪ್ರಿಯತರವಾದುದು.

೨೭. ಈ ವ್ರತಾಚರಣೆಯ ಪ್ರಭಾವದಿಂದ ಗೋಪಾಂಗನಾರಮಣನೂ ಸರ್ವಭೂತೇಶ್ವರನೂ ಆದ ಶ್ರೀಕೃಷ್ಣಪರಮಾತ್ಮನು ನಿನಗೆ ಪುತ್ರನಾಗಿ ಜನಿಸುವನು.

೨೮. ಎಲೈ ನಾರದನೇ, ಈ ರೀತಿಯಾಗಿ ನುಡಿದು ಪರಮೇಶ್ವರನು ಮೌನವನ್ನು ವಹಿಸಲು, ಪಾರ್ವತೀದೇವಿಯು ಶಂಕರನ ಅಪ್ಪಣೆಯಂತೆ, ಸಂತೋಷದಿಂದ ಆ ವ್ರತವನ್ನಾಚರಿಸಿದಳು.

## ಐದನೇ ಅಧ್ಯಾಯದ ಸಾರಾಂಶ

---

ಪುಣ್ಯಕವ್ರತವಿಧಾನವನ್ನು ಕೇಳಿ ಸಂತಸಗೊಂಡ ಪಾರ್ವತಿಯು ಆ ವ್ರತದ ಕಥೆಯನ್ನೂ, ಅದನ್ನಾಚರಿಸಿದವರಾರೆಂಬುದನ್ನೂ ಹೇಳಬೇಕೆಂದು ಶಂಕರನನ್ನು ಕೇಳಿದಳು. ಆಗ ಶಂಕರನು ಇಂತೆಂದನು. ಪೂರ್ವದಲ್ಲಿ ಸ್ವಾಯಂಭುವಮನುವಿನ ಪತ್ನಿಯಾದ ಶತರೂಪೆಯು, ಮಕ್ಕಳಿಲ್ಲದೆ ವ್ಯಥೆಯಿಂದ ಬ್ರಹ್ಮನ ಸಮೀಪಕ್ಕೆ ಬಂದು ಮಕ್ಕಳಿಲ್ಲದವರ ದುರವಸ್ಥೆಯನ್ನು ಹೇಳಿ, ತಾನು ಪುತ್ರವತಿಯಾಗಲು ಮಾಡಬೇಕಾದ ಉಪಾಯವೇನೆಂದು ಕೇಳಿದಳು. ಆಗ ಬ್ರಹ್ಮನು 'ಮಾಘ ಶುಕ್ಲ ತ್ರಯೋದಶಿಯ ದಿವಸದಿಂದ ಪ್ರಾರಂಭಮಾಡಿ ಒಂದು ವರ್ಷಕಾಲ ಪುಣ್ಯಕವೆಂಬ ವ್ರತವನ್ನಾಚರಿಸಿ ಶ್ರೀ ಕೃಷ್ಣನನ್ನು ಭಕ್ತಿಯಿಂದ ಪೂಜಿಸಿದರೆ ವಿಷ್ಣು ಸದೃಶನಾದ ವಸು ನಿನಗೆ ಪುತ್ರನಾಗಿ ಜನಿಸುವನು' ಎನಲು ಶತರೂಪೆಯು ಆ ವ್ರತವನ್ನಾಚರಿಸಿ ಪ್ರಿಯವ್ರತ ಮತ್ತು ಉತ್ತಾನಪಾದನೆಂಬ ಇಬ್ಬರು ಮಕ್ಕಳನ್ನು ಪಡೆದಳು. ಅಂತೆಯೇ, ಈ ವ್ರತದ ಮಹಿಮೆಯಿಂದ ದೇವಹೂತಿಯು-ಕಪಿಲನನ್ನೂ, ಅರುಂಧತಿಯು ಶಕ್ತಿಯನ್ನೂ, ಶಕ್ತಿ ಪತ್ನಿಯು ಪರಾಶರನನ್ನೂ, ಅದಿತಿಯು ವಾಮನಕನನ್ನು ಶಚೀದೇವಿಯು ಜಯಂತನನ್ನೂ ಸುನೀತಿಯು ಧ್ರುವನನ್ನೂ, ಮನೋರಮೆಯು ನಲಕೂಬರನನ್ನೂ ಪಡೆದರು. ವೈವಸ್ವತಮನುವು ಸೂರ್ಯಪತ್ನಿಯಿಂದಲೂ, ಚಂದ್ರನು ಅನಸೂಯೆಯಿಂದಲೂ ಬೃಹಸ್ಪತಿಯು ಅಂಗಿರಸನ ಪತ್ನಿಯಿಂದಲೂ, ಶುಕ್ರಾಚಾರ್ಯನು ಭೃಗುಋಷಿಯ ಪತ್ನಿಯಿಂದಲೂ ಜನಿಸಿದುದೂ, ಆ ದೇವಿಯರು ಈ ವ್ರತವನ್ನು ಆಚರಿಸಿದುದರ ಪ್ರಭಾವದಿಂದಲೇ. ಆದುದರಿಂದ ಎಲೌ ಪಾರ್ವತಿಯೇ, ಪುಣ್ಯತಮವಾದ ಈ ಪುಣ್ಯಕವ್ರತವನ್ನು ನೀನೂ ಆಚರಿಸಿ ಶ್ರೀಕೃಷ್ಣನನ್ನೇ ಪುತ್ರನನ್ನಾಗಿ ಪಡೆಯುವವಳಾಗು. ಎಂದು ಹೇಳಿದ ಶಂಕರನ ಮಾತನ್ನು ಕೇಳಿ ಪಾರ್ವತಿಯೂ ಕೂಡ ಆ ವ್ರತವನ್ನಾಚರಿಸಿದಳು.



—|| ಓಂ ||—

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ಷಷ್ಠೋಽಧ್ಯಾಯಃ ||

|| ಶೌನಕ ಉವಾಚ ||

ನಾರಾಯಣವಚಃ ಶ್ರುತ್ವಾ ನಾರದೋ ಹೃಷ್ಟಮಾನಸಃ ।
ಕಿಂ ಪಪ್ರಚ್ಛ ಪುನಃ ಸಾಧೋ ತನ್ಮೇ ಬ್ರೂಹಿ ತಪೋಧನ || ೧ ||

|| ಸೌತಿರುವಾಚ ||

ನಾರಾಯಣವಚಃ ಶ್ರುತ್ವಾ ನಾರದೋ ಹೃಷ್ಟಮಾನಸಃ ।
ವ್ರತಾರಂಭವಿಧಾನಂ ಚ ಸಂಪ್ರಷ್ಟುಮುಪಚಕ್ರಮೇ || ೨ ||

---

### ಆರನೆಯ ಅಧ್ಯಾಯವು

ಶೌನಕ :—ಎಲೈ ತಪೋಧನನಾದ ಸೂತಪುತ್ರನೇ ನಾರಾಯಣ ಮಹರ್ಷಿಯ ಮಾತುಗಳನ್ನು ಕೇಳಿ ಸಂತೋಷಗೊಂಡ ನಾರದನು, ಪುನಃ ಅವನನ್ನು ಕುರಿತು ಏನು ಕೇಳಿದನು.

೨. ಸೂತಪುತ್ರ :—ನಾರಾಯಣನ ಮಾತುಗಳನ್ನು ಕೇಳಿ ನಾರದನು ಸಂತೋಷಗೊಂಡು ಆ ಪುಣ್ಯಕವ್ರತದ ಆರಂಭ ವಿಧಾನವನ್ನರುಹಬೇಕೆಂದು ಕೇಳಿದನು.

॥ ನಾರದ ಉವಾಚ ॥

ಕೃತಂ ಕೇನ ಪ್ರಕಾರೇಣ ವ್ರತಮೇತಚ್ಛುಭಾವಹಂ ।
ತನ್ಮೇ ಬ್ರೂಹಿ ಮುನಿಶ್ರೇಷ್ಠ ಪಾರ್ವತ್ಯಾ ಭರ್ತುರಾಜ್ಞಯಾ ॥ ೩ ॥

ಲಲಾಭ ಜನ್ಮ ಭೂತೇಶಃ ಕೃತೇ ಸುವ್ರತಯೋ ವ್ರತೇ ।
ಬ್ರಹ್ಮನ್ ಕೇನ ಪ್ರಕಾರೇಣ ತನ್ನಃ ಶಂಸಿತುಮರ್ಹಸಿ ॥ ೪ ॥

॥ ನಾರಾಯಣ ಉವಾಚ ॥

ಕಥಯಿತ್ವಾ ಕಥಾಂ ದಿವ್ಯಾಂ ವಿಧಾನಂ ಚ ವ್ರತಸ್ಯ ಚ ।
ಸ್ವಯಂ ವಿಧಾತಾ ತಪಸಾಂ ಜಗಾಮ ತಪಸೇ ಶಿವಃ ॥ ೫ ॥

ಹರೇರಾರಾಧನವ್ಯಗ್ರೋ ಮೂರ್ತಿಭೇದಧರೋ ಹರಿಃ ।
ಹರಿಭಾವನಶೀಲಶ್ಚ ಹರಿಧ್ಯಾನಪರಾಯಣಃ ॥ ೬ ।

---

೩. ನಾರದ :—ಎಲೈ ಮುನಿಶ್ರೇಷ್ಠನಾದ ನಾರಾಯಣನೇ, ಪತಿಯ ಅಪ್ಪಣೆಯನ್ನು ಪಡೆದ ಪಾರ್ವತಿಯು ಆ ಶುಭಕರವಾದ ಪುಣ್ಯಕವ್ರತವನ್ನು ಹೇ ಆಚರಿಸಿದಳೆಂಬುದನ್ನು ನನಗೆ ವಿವರಿಸು.

೪. ವ್ರತನಿಷ್ಠಳಾದ ಆ ಪಾರ್ವತಿಯು ವ್ರತವನ್ನಾಚರಿಸಿದಮೇಲೆ ಸವ ಭೂತಗಳಿಗೂ ನಾಯಕನಾದ ಗಣಪತಿಯು ಆಕೆಯಲ್ಲಿ ಹೇಗೆ ಜನ್ಮವೆತ್ತಿದನೆಂ ದನ್ನು ನನಗೆ ದಯವಿಟ್ಟು ಹೇಳು.

೫. ನಾರಾಯಣ :—ದಿವ್ಯವಾದ ಪುಣ್ಯಕವ್ರತದ ಕಥೆಯನ್ನೂ, ಆ ವ್ರ ಚರಣೆಯ ವಿಧಾನವನ್ನೂ ಪಾರ್ವತಿಗೆ ಹೇಳಿ, ಇತರರ ತಪಸ್ಸಿಗೆ ಫಲವನ್ನು :ಕೊ ಬಲ್ಲವನಾದ ಪರಶಿವನು ತಾನೇ ತಪಸ್ಸಿಗೆ ತೆರಳಿದನು.

೬. ಆಕಾರಮಾತ್ರದಿಂದ ಹರಿಗೆ ಭಿನ್ನನಾಗಿ ತೋರುವ ಆ ಹರನು ಆರಾ ಯಲ್ಲಿ ಆಸಕ್ತನಾಗಿ, ಸರ್ವದಾ ಹರಿಯನ್ನು ಧ್ಯಾನಿಸುತ್ತ ತಪವೆಸಗುತ್ತಿದ್ದನು.

ಪರಮಾನಂದಪೂರ್ಣಶ್ಚ ಜ್ಞಾನಾನಂದಃ ಸನಾತನಃ ।
ದಿವಾನಿಶಂ ನ ಜಾನಾತಿ ಹರಿಮಂತ್ರಂ ಬಹಿಃ ಸ್ಮರನ್ ॥ ೭ ॥

ಪ್ರಹೃಷ್ಟಮನಸಾ ದೇವೀ ಪಾರ್ವತೀ ಭರ್ತುರಾಜ್ಞಯಾ ।
ಕಿಂಕರಾನ್ಪ್ರೇರಯಾಮಾಸ ವಿಪ್ರಾಂಶ್ಚ ವ್ರತಹೇತವೇ ॥ ೮ ॥

ಆನೀಯ ಸರ್ವದ್ರವ್ಯಾಣಿ ವ್ರತೇ ಯೋಗ್ಯಾನಿ ಯಾನಿ ಚ ।
ವ್ರತಂ ಕರ್ತುಂ ಸಮಾರೇಭೇ ಶುಭದಾ ಸಾ ಶುಭೇಕ್ಷಣೇ ॥ ೯ ॥

ಸನತ್ಕುಮಾರೋ ಭಗವಾನಾಜಗಾಮ ವಿಧೇಃ ಸುತಃ ।
ಮೂರ್ತಿಮಾಂಸ್ತೇಜಸಾಂ ರಾಶಿಃ ಪ್ರಜ್ವಲನ್ಬ್ರಹ್ಮತೇಜಸಾ ॥ ೧೦ ॥

---

೭. ಬಾಯಿನಲ್ಲಿ ಹರಿಮಂತ್ರವನ್ನುಚ್ಚರಿಸುತ್ತಾ, ಆನಂದಭರಿತನೂ, ಜ್ಞಾನಾನಂದಮಯನೂ, ಅನಾದಿಯೂ ಆದ ಆ ಪರಶಿವನು ಹಗಲು ರಾತ್ರಿಗಳನ್ನೂ ಗಣನೆಗೆ ತಾರಲಿಲ್ಲ.

೮. ಇತ್ತ ಪಾರ್ವತಿಯು ಪತಿಯ ಅಪ್ಪಣೆಪಡೆದು ಸಂತೋಷದಿಂದ ವ್ರತಾಚರಣೆಯಸಲುವಾಗಿ ಸಾಮಗ್ರಿಗಳನ್ನು ಸಿದ್ಧಗೊಳಿಸಲು ಸೇವಕರನ್ನೂ ಪೂಜೆಮಾಡಲು ಬ್ರಾಹ್ಮಣರನ್ನೂ ಕರೆಯಕಳುಹಿಸಿದಳು.

೯. ಆ ವ್ರತಕ್ಕೆ ಉಪಯುಕ್ತವಾದ ಸಕಲ ಸಾಮಗ್ರಿಗಳನ್ನೂ ತರಿಸಿ, ಮಂಗಳಕರಳಾದ ಆ ಪಾರ್ವತಿಯು ಶುಭಮುಹೂರ್ತದಲ್ಲಿ ವ್ರತವನ್ನು ಮಾಡ ಪ್ರಾರಂಭಿಸಿದಳು.

೧೦. ಮೂರ್ತಿವೆತ್ತ ತೇಜೋರಾಶಿಯಂತಿದ್ದ, ಬ್ರಹ್ಮಪುತ್ರನೂ, ಷಡ್ಗುಣೈಶ್ವರ್ಯಪರಿಪೂರ್ಣನೂ ಆದ ಸನತ್ಕುಮಾರನು, ಬ್ರಹ್ಮತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತ ಆ ವ್ರತವನ್ನು ಮಾಡಿಸಲು ಅಲ್ಲಿಗೆ ಬಂದಿದ್ದನು.

ಬ್ರಹ್ಮಾಜಗಾಮ ಹೃಷ್ಟಶ್ಚ ಬ್ರಹ್ಮಲೋಕಾತ್ಸಭಾರ್ಯಕಃ ।
ಅತಿತ್ರಸ್ತೋ ಹಿ ಭಗವಾನಾಜಗಾಮ ಮಹೇಶ್ವರಃ ॥ ೧೧ ॥

ವಿಷ್ಣುಃ ಕ್ಷೀರೋದಶಾಯೀ ಚ ಸಲಕ್ಷ್ಮೀಕಶ್ಚ ತುರ್ಭುಜಃ ।
ಭಗವಾಞ್ಜಗತಾಂ ಪಾತಾ ಶಾಸ್ತಾ ಭರ್ತಾ ಸಪಾರ್ಷದಃ ॥ ೧೨ ॥

ವನಮಾಲಾಧರಃ ಶ್ಯಾಮೋ ಭೂಷಿತೋ ರತ್ನಭೂಷಣೈಃ ।
ತಥಾ ಸಂಭೃತಸಂಭಾರೋ ರತ್ನಯಾನೇನ ನಾರದ ॥ ೧೩ ॥

ಸನಕಶ್ಚ ಸನಂದಶ್ಚ ಕಪಿಲಶ್ಚ ಸನಾತನಃ ।
ಆಸುರಿಶ್ಚ ಕ್ರತುರ್ಹಂಸೋ ವೋಢುಃ ಪಂಚಶಿಖೋಽರುಣಿಃ ॥ ೧೪ ॥

ಯತಿಶ್ಚ ಸುಮತಿಶ್ಚೈವ ವಸಿಷ್ಠಶ್ಚ ಸಹಾನುಗಃ ।
ಪುಲಹಶ್ಚ ಪುಲಸ್ತ್ಯಶ್ಚಾಪ್ಯತ್ರಿಶ್ಚ ಭೃಗುರಂಗಿರಾಃ ॥ ೧೫ ॥

೧೧. ಅನಂತರ ಪಾರ್ವತಿಯು ವ್ರತಪರಳಾದುದನ್ನು ಕೇಳಿ ತುಷ್ಟನಾದ ಬ್ರಹ್ಮನೂಕೂಡ ಪತ್ನೀಸಮೇತನಾಗಿ ಬ್ರಹ್ಮಲೋಕದಿಂದ ಅಲ್ಲಿಗೆ ಬಂದನು. ಆಗ ಮಹೇಶ್ವರನೂ ಕೂಡ ಅವಮಾನಿತನಾಗುವೆನೆಂಬ ಭಯದಿಂದ ಅಲ್ಲಿಗೆ ಬಂದನು.

೧೨–೧೩. ಎಲೈ ನಾರದನೇ, ಆಗ ಕ್ಷೀರಸಾಗರದಲ್ಲಿ ಪವಡಿಸಿದ ಚತುರ್ಭುಜನೂ, ಜಗತ್ಪಾಲನ, ಶಿಕ್ಷಣ ಮತ್ತು ಭರಣದಲ್ಲಿ ನಿರತನೂ ಆದ ನಾರಾಯಣನೂ ಕೂಡ ನೀಲಮೇಘದಂತೆ ಕಪ್ಪಾದ ತನ್ನ ವಕ್ಷಸ್ಥಲದಲ್ಲಿ ವನಮಾಲೆಯನ್ನು ಧರಿಸಿ, ರತ್ನಾಭರಣಗಳನ್ನು ತೊಟ್ಟು ಸಕಲಸಂಭಾರದಿಂದ ಕೂಡಿದ ರತ್ನಯಾನದಲ್ಲಿ ಕುಳಿತು ಲಕ್ಷ್ಮೀದೇವಿಯೊಡನೆ ಅಲ್ಲಿಗೆ ಬಂದನು.

೧೪–೧೫. ಅನಂತರ ಸನಕಸನಂದನರೂ, ಕಪಿಲಸನಾತನರೂ, ಆಸುರಿಕ್ರತು ಗಳೂ, ಹಂಸವೋಢು, ಪಂಚಶಿಖ, ಆರುಣಿ, ಯತಿ, ಸುಮತಿ ಮತ್ತು ವಸಿಷ್ಠರೂ ತಮ್ಮ ಪರಿವಾರದೊಡನೆ ಬಂದರು. ಅಂತೆಯೇ, ಪುಲಸ್ತ್ಯ, ಅತ್ರಿ, ಭೃಗು, ಅಂಗಿರಸ್ಸು ಮುಂತಾದ ಮಹರ್ಷಿಗಳೂ ಅಲ್ಲಿಗೆ ಬಂದರು.

ಅಗಸ್ತ್ಯಶ್ಚ ಪ್ರಚೇತಾಶ್ಚ ದುರ್ವಾಸಾಶ್ಚ್ಯವನಸ್ತಥಾ ।
ಮರೀಚಿಃ ಕಶ್ಯಪಃ ಕಣ್ವೋ ಜರತ್ಕಾರುಶ್ಚ ಗೌತಮಃ ॥ ೧೬ ॥

ಬೃಹಸ್ಪತಿರುತಥ್ಯಶ್ಚ ಸಂವರ್ತಃ ಸೌಭರಿಸ್ತಥಾ ।
ಜಾಬಾಲಿರ್ಜಮದಗ್ನಿಶ್ಚ ಜೈಗೀಷವ್ಯಶ್ಚ ದೇವಲಃ ॥ ೧೭ ॥

ಗೋಕಾಮುಖಶ್ಚ ಕ್ರಕರಃ ಪಾರಿಭದ್ರಃ ಪರಾಶರಃ ।
ವಿಶ್ವಾಮಿತ್ರೋ ವಾಮದೇವ ಋಷ್ಯಶೃಂಗೋ ವಿಭಾಂಡಕಃ ॥ ೧೮ ॥

ಮಾರ್ಕಂಡೇಯೋ ಮೃಕಂಡುಶ್ಚ ಪ್ರುಷ್ಕಣ್ವೋ ಲೋಮಶಸ್ತಥಾ ।
ಕೌತ್ಸೋ ವತ್ಸಶ್ಚ ದಕ್ಷಶ್ಚ ಬಾಲಾಗ್ನಿರಘಮರ್ಷಣಃ ॥ ೧೯ ॥

ಕಾತ್ಯಾಯನಃ ಕಣಾದಶ್ಚ ಪಾಣಿನಿಃ ಶಾಕಟಾಯನಃ ।
ಶಂಕುರಾಪಿಶಲಿಶ್ಚೈವ ಶಾಕಲ್ಯಃ ಶಂಖ ಏವ ಚ ॥ ೨೦ ॥

---

೧೬-೧೭ ಅಗಸ್ತ್ಯ, ಪ್ರಚೇತಸ್ಸು, ದುರ್ವಾಸ, ಚ್ಯವನ, ಮರೀಚಿ, ಕಶ್ಯಪ, ಕಣ್ವ, ಜರತ್ಕಾರು, ಗೌತಮ, ಬೃಹಸ್ಪತಿ, ಉತಥ್ಯ, ಸಂವರ್ತ, ಸೌಭರಿ ಜಾಬಾಲಿ, ಜಮದಗ್ನಿ, ಜೈಗೀಷವ್ಯ ಮತ್ತು ದೇವಲ ಮುಂತಾದ ಋಷಿಗಳೂ ಅಲ್ಲಿಗೆ ಬಂದರು.

೧೮-೨೦. ಗೋಕಾಮುಖ, ವಕ್ರಕರ, ಪಾರಿಭದ್ರ, ಪರಾಶರ, ವಿಶ್ವಾಮಿತ್ರ, ವಾಮದೇವ, ಋಷ್ಯಶೃಂಗ, ವಿಭಾಂಡಕ, ಮಾರ್ಕಂಡೇಯ, ಮೃಕಂಡು, ಪುಷ್ಕರ ಲೋಮಶ, ಕೌತ್ಸ, ವತ್ಸ, ದಕ್ಷ, ಬಾಲಾಗ್ನಿ, ಅಘಮರ್ಷಣ, ಕಾತ್ಯಾಯನ, ಕಣಾದ, ಪಾಣಿನಿ, ಶಾಕಟಾಯನ, ಶಂಕು, ಆಪಿಶಲಿ, ಶಾಕಲ್ಯ, ಶಂಖ, ಮುಂತಾದ ಋಷಿಗಳೂ ಪಾರ್ವತಿಯ ವ್ರತಕ್ಕೆ ಬಂದರು.

ಏತೇ ಚಾನ್ಯೇ ಚ ಬಹವಃ ಸಶಿಷ್ಯಾ ಮುನಯೋ ಮುನೇ ।
ಆವಾಂ ಚ ಧರ್ಮಪುತ್ರೌ ಚ ನರನಾರಾಯಣೌ ಸವೌ || ೨೧ ||

ದಿಕ್ಪಾಲಾಶ್ಚ ತಥಾ ದೇವಾ ಯಕ್ಷಗಂಧರ್ವಕಿನ್ನರಾಃ ।
ಅಜಗ್ಮುಃ ಪರ್ವತಾಃ ಸರ್ವೇ ಸಗಣಾಃ ಪಾರ್ವತೀವ್ರತೇ || ೨೨ ||

ಹಿಮಾಲಯಃ ಶೈಲರಾಜಃ ಸಾಪತ್ಯಶ್ಚ ಸಭಾರ್ಯಕಃ ।
ಸಗಣಃ ಸಾನುಗಶ್ಚೈವ ರತ್ನಭೂಷಣಭೂಷಿತಃ || ೨೩ ||

ತಥಾ ಸಂಭೃತಸಂಭಾರೋ ನಾನಾದ್ರವ್ಯಸಮನ್ವಿತಃ ।
ಮಣಿಮಾಣಿಕ್ಯರತ್ನಾನಿ ವ್ರತೇ ಯೋಗ್ಯಾನಿ ಯಾನಿ ಚ || ೨೪ ||

ನಾನಾಪ್ರಕಾರವಸ್ತೂನಿ ಜಗತ್ಯಾಂ ದುರ್ಲಭಾನಿ ಚ ।
ಲಕ್ಷಂ ಚ ಗಜರತ್ನಾನಾಮಶ್ವರತ್ನಂ ತ್ರಿಲಕ್ಷಕಂ || ೨೫ ||

---

೨೧. ಎಲೌ ನಾರದನೇ, ಮೇಲೆ ಹೇಳಿದ ಮುನಿಗಳಲ್ಲದೆ ಇನ್ನೂ ಅನೇಕ ಮುನಿಗಳು ತಮ್ಮ ಶಿಷ್ಯರೊಡಗೂಡಿ ಅಲ್ಲಿಗೆ ಬಂದರು. ಧರ್ಮಪುತ್ರರಾಗಿ ನರನಾರಾಯಣರೆನಿಸಿಕೊಂಡ ನಾವೂ ಕೂಡ ಅಲ್ಲಿಗೆ ಹೋದೆವು.

೨೨. ಪಾರ್ವತಿಯ ಆ ವ್ರತಕ್ಕೆ ಅಷ್ಟದಿಕ್ಪಾಲಕರೂ, ಸಕಲ ದೇವತೆಗಳೂ, ಯಕ್ಷಗಂಧರ್ವಕಿನ್ನರರೂ, ಬಂದುದಲ್ಲದೆ ಗಣಸಹಿತವಾದ ಪರ್ವತಾಭಿಮಾನಿ ದೇವತೆಗಳೂ ಅಲ್ಲಿಗೆ ಬಂದರು.

೨೩–೨೪. ಇತ್ತ ಶೈಲರಾಜನಾದ ಹಿಮವಂತನೂ ಕೂಡ ಪತ್ನೀಪುತ್ರರಿಂದಲೂ ಗಣ ಮತ್ತು ಪರಿವಾರದಿಂದಲೂ ಕೂಡಿ ರತ್ನಾಭರಣಗಳನ್ನು ಧರಿಸಿಕೊಂಡು, ವ್ರತಕ್ಕೆ ಅತ್ಯವಶ್ಯಕವಾದ ಮಣಿಮಾಣಿಕ್ಯಾದಿ ರತ್ನಗಳನ್ನೂ, ಇನ್ನೂ ಇತರ ಸಾಮಗ್ರಿಗಳನ್ನೂ ತುಂಬಿಕೊಂಡು ಅಲ್ಲಿಗೆ ಬಂದನು.

೨೫. ಹಿಮವಂತನು ತಂದ ವಸ್ತುಗಳಲ್ಲಿ, ಜಗತ್ತಿನಲ್ಲಿ ದುರ್ಲಭವಾದ ಅನೇಕ ವಸ್ತುಗಳೂ, ಉತ್ತಮವಾದ ಒಂದು ಲಕ್ಷ ಆನೆಗಳೂ, ಮೂರು ಲಕ್ಷ ಕುದುರೆಗಳೂ ಇದ್ದವು.

ದಶಲಕ್ಷಂ ಗವಾಂ ರತ್ನಂ ಶತಲಕ್ಷಂ ಸುವರ್ಣಕಂ।
ರುಚಕಾನಾಂ ಹೀರಕಾಣಾಂ ಸ್ಪರ್ಶಾನಾಂ ಚ ತಥೈವ ಚ॥ ೨೬ ॥

ಮುಕ್ತಾನಾಂ ಚ ಚತುರ್ಲಕ್ಷಂ ಕೌಸ್ತುಭಾನಾಂ ಸಹಸ್ರಕಂ।
ಸುಸ್ವಾದು ನಾನಾದ್ರವ್ಯಾಣಾಂ ಲಕ್ಷಭಾರಾಣಿ ಕೌತುಕೀ।
ಅನಂತರತ್ನಪ್ರಭವ ಆಜಗಾಮ ಸುತಾವ್ರತೇ ॥ ೨೭ ॥

ಬ್ರಾಹ್ಮಣಾ ಮುನವಃ ಸಿದ್ಧಾ ನಾಗಾ ವಿದ್ಯಾಧರಾಸ್ತಥಾ।
ಸಂನ್ಯಾಸಿನೋ ಭಿಕ್ಷುಕಾಶ್ಚ ಬಂದಿನಃ ಪಾರ್ವತೀವ್ರತೇ ॥ ೨೮ ॥

ವಿದ್ಯಾಧರೀ ನರ್ತಕೀ ಚ ನರ್ತಕಾಪ್ಸರಸಾಂಗಣಾಃ।
ನಾನಾವಿಧಾ ವಾದ್ಯಭಾಂಡಾ ಆಜಗ್ಮುಃ ಶಿವಮಂದಿರಂ ॥ ೨೯ ॥

ಕೈಲಾಸರಾಜಮಾರ್ಗಂ ಚ ಚಂದನೇನ ಸುಸಂಸ್ಕೃತಂ।
ಆಮ್ರಪಲ್ಲವಸೂತ್ರಾಢ್ಯಂ ಕದಲೀಸ್ತಂಭಶೋಭಿತಂ ॥ ೩೦ ॥

---

೨೬-೨೭. ಅಲ್ಲದೆ ಶ್ರೇಷ್ಠವಾದ ಹತ್ತು ಲಕ್ಷ ಗೋವುಗಳನ್ನೂ, ನೂರು ಲಕ್ಷಸುವರ್ಣ ನಾಣ್ಯವನ್ನೂ, ಲಕ್ಷಗಟ್ಟಲೆ, ಕಂಠಹಾರ, ವಜ್ರ ಮತ್ತು ಸ್ಪರ್ಶ ಮಣಿಗಳನ್ನೂ, ನಾಲ್ಕು ಲಕ್ಷ ಮುತ್ತಿನಹಾರಗಳನ್ನೂ ಸಾವಿರಾರು ಕೌಸ್ತುಭಮಣಿಗಳನ್ನೂ, ರುಚಿಕರವಾದ ವಿವಿಧದ್ರವ್ಯಗಳ ಲಕ್ಷಾಂತರ ಮೂಟೆಗಳನ್ನೂ ತೆಗೆದುಕೊಂಡು ಅನಂತ ರತ್ನಗಳ ಉತ್ಪತ್ತಿಗೆ ಕಾರಣನಾದ ಹಿಮವಂತನು, ಕುತೂಹಲದಿಂದ ಮಗಳ ವ್ರತಕ್ಕೆ ಬಂದನು.

೨೯. ವಿದ್ಯಾಧರಿಯರೂ, ನರ್ತಕ ನರ್ತಕಿಯರೂ, ಅಪ್ಸರಸ್ತ್ರೀಯರೂ, ನಾನಾವಿಧವಾದ ವಾದ್ಯಭಾಂಡಗಳೊಡನೆ ಶಿವನ ಮಂದಿರಕ್ಕೆ ಆಗಮಿಸಿದರು.

೩೦. ಕೈಲಾಸಪರ್ವತಕ್ಕೆ ಹೋಗುವ ರಾಜಮಾರ್ಗವೆಲ್ಲವೂ ಚಂದನ ಗಂಧೋದಕದಿಂದ ಸುಸಂಸ್ಕೃತವಾಯಿತು. ದ್ವಾರಪ್ರವೇಶವು ಮಾವಿನ ಚಿಗುರು ತೋರಣಗಳಿಂದಲೂ, ಬಾಳೆಯಕಂಭಗಳಿಂದಲೂ ವಿರಾಜಿಸಿತ್ತು.

ದೂರ್ವಾಧಾನ್ಯಫಲೈಃ ಪರ್ಣಲಾಜಪುಷ್ಪೈರ್ವಿಭೂಷಿತಂ ।
ನಿರ್ಮಿತಂ ಪದ್ಮರಾಗೇಣ ದದೃಶುಸ್ತೇ ಗಣಾ ಮುದಾ ॥ ೩೧ ॥

ಉಚ್ಚೈಃ ಸಿಂಹಾಸನೇಷ್ವೇತೇ ಪೂಜಿತಾಃ ಶಂಕರೇಣ ಚ ।
ಕೈಲಾಸವಾಸಿನಃ ಸರ್ವೇ ಪರಮಾನಂದಸಂಯುತಾಃ ॥ ೩೨ ॥

ದಾನಾಧ್ಯಕ್ಷಃ ಶುನಾಸೀರಃ ಕುಬೇರಃ ಕೋಶರಕ್ಷಕಃ ।
ಆದೇಷ್ಟಾ ಸ್ವಯಂ ಸೂರ್ಯಃ ಪರಿವೇಷ್ಟಾ ಜಲಾಧಿಪಃ ॥ ೩೩ ॥

ದಧ್ನಾಂ ನದ್ಯಃ ಸಹಸ್ರಾಣಿ ದುಗ್ಧಾನಾಂ ಚ ತಥೈವ ಚ ।
ಸಹಸ್ರಾಣಿ ಘೃತಾನಾಂ ಚ ಗುಡಾನಾಂ ಚ ಶತಾನಿ ಚ ॥ ೩೪ ॥

ಮಾಧ್ವೀಕಾನಾಂ ಸಹಸ್ರಾಣಿ ತೈಲಾನಾಂ ಚ ಶತಾನಿ ಚ ।
ಲಕ್ಷಾಣಿ ಚೈವ ತಕ್ರಾಣಾಂ ಬಭೂವುಃ ಪಾರ್ವತೀವ್ರತೇ ॥ ೩೫ ॥

---

೩೧. ಗರಿಕೆಹುಲ್ಲು, ಮುತ್ತುಗ, ಮಾವು ಮುಂತಾದ ಎಲೆಗಳೂ, ಅರಳು ಮತ್ತು ಧಾನ್ಯಗಳೂ, ಫಲಪುಷ್ಪಗಳೂ, ಪದ್ಮರಾಗರತ್ನದಿಂದ ನಿರ್ಮಿತವಾದ ಆ ಪೂಜಾಮಂಟಪದಲ್ಲಿ ತುಂಬಿದ್ದುದನ್ನು ಬಂದವರೆಲ್ಲ ನೋಡಿದರು.

೩೨. ಬಂದ ಅತಿಥಿಅಭ್ಯಾಗತರೆಲ್ಲರೂ ಶಂಕರನಿಂದ ಸತ್ಕೃತರಾಗಿ ಉನ್ನತವಾದ ಸಿಂಹಾಸನದಲ್ಲಿ ಕುಳಿತು, ಆ ಕೈಲಾಸವಾಸದ ಪರಮಾನಂದವನ್ನನುಭವಿಸುತ್ತಿದ್ದರು.

೩೩. ಆ ಮಹೋತ್ಸವದಲ್ಲಿ ಇಂದ್ರನು ದಾನಾಧ್ಯಕ್ಷನಾಗಿಯೂ, ಕುಬೇರನು ಕೋಶರಕ್ಷಕನಾಗಿಯೂ, ಸೂರ್ಯದೇವನು ಸರ್ವನಿಯಾಮಕನಾಗಿಯೂ, ವರುಣದೇವನು ಪಾಕಾಧ್ಯಕ್ಷನಾಗಿಯೂ ನಿಯುಕ್ತರಾದರು.

೩೪–೩೫. ಪಾರ್ವತೀದೇವಿಯು ಮಾಡುತ್ತಿದ್ದ ಆ ವ್ರತದಲ್ಲಿ ಸಾವಿರಾರು ಹಾಲು ಮೊಸರಿನ ಹೊಳೆಗಳೂ, ನೂರಾರು ಬೆಲ್ಲ ಮತ್ತು ತುಪ್ಪದ ಹೊಳೆಗಳೂ, ಸಾವಿರ ಜೇನುತುಪ್ಪದ ಹೊಳೆಗಳೂ, ನೂರು ಎಣ್ಣೆಯ ಹೊಳೆಗಳೂ ಲಕ್ಷಾಂತರ ಮಜ್ಜಿಗೆಯ ಹೊಳೆಗಳೂ ಕೋಡಿ ಹರಿದು ಸಮೃದ್ಧಿಯಾದವು,

ಪೀಯೂಷಾಣಾಂ ಚ ಕುಂಭಾನಿ ಶತಲಕ್ಷಾಣಿ ನಾರದ ।
ಮಿಷ್ಟಾನ್ನಾನಾಂ ಶರ್ಕರಾಣಾಂ ಬಭೂವುರ್ಲಕ್ಷರಾಶಯಃ ।
ಯವಗೋಧೂಮಚೂರ್ಣಾನಾಂ ಘೃತಾಕ್ತಾನಾಂ ಚ ನಾರದ ॥ ೩೬ ॥

ಸ್ವಸ್ತಿಕಾನಾಂ ಚ ಪೂರ್ಣಾನಾಂ ಬಭೂವುರ್ಲಕ್ಷರಾಶಯಃ ।
ಗುಡಸಂಸ್ಕೃತಲಾಜಾನಾಂ ಬಭೂವುಃ ಕೋಟಿರಾಶಯಃ ॥ ೩೭ ॥

ಶಾಲೀನಾಂ ಪೃಥುಕಾನಾಂ ಚ ರಾಶೀನಾಂ ದಶಕೋಟಯಃ ।
ವರತಂಡುಲರಾಶೀನಾಂ ಮುನೇ ಸಂಖ್ಯಾ ನ ವಿದ್ಯತೇ ॥ ೩೮ ॥

ಸ್ವರ್ಣರೌಪ್ಯಪ್ರವಾಲಾನಾಂ ಮಣೀನಾಂ ಚ ಮಹಾಮುನೇ ।
ಬಭೂವುಃ ಪರ್ವತಾಸ್ತತ್ರ ಕೈಲಾಸೇ ಪಾರ್ವತೀವ್ರತೇ ॥ ೩೯ ॥

ಪಾಯಸಂ ಪಿಷ್ಟಕಂ ಚೈವ ಶಾಲ್ಯನ್ನಂ ಸುಮನೋಹರಂ ।
ಚಕಾರ ಲಕ್ಷ್ಮೀಃ ಶಾಕಂ ಚ ವ್ಯಂಜನಂ ಘೃತಸಂಸ್ಕೃತಂ ॥ ೪೦ ॥

---

೩೬. ಎಲೈ ನಾರದನೇ ನೂರುಲಕ್ಷ ಅಮೃತಕಲಶಗಳೂ, ಮಿಷ್ಟಾನ್ನ ಮತ್ತು ಸಕ್ಕರೆಯ ಲಕ್ಷ ರಾಶಿಗಳೂ, ತುಪ್ಪದಲ್ಲಿ ಕಲಸಿದ ಅಕ್ಕಿ ಮತ್ತು ಗೋಧಿ ಹಿಟ್ಟಿನ ಲಕ್ಷರಾಶಿಗಳೂ ಅಲ್ಲಿ ತುಂಬಿದ್ದವು.

೩೭–೩೮. ಸ್ವಸ್ತಿಕ ವಾಯನಗಳ ಲಕ್ಷರಾಶಿಗಳೂ, ಬೆಲ್ಲದಿಂದ ಮಿಶ್ರಿತವಾದ ಅರಳಿನ ಕೋಟಿ ರಾಶಿಗಳೂ, ಭತ್ತ ಮತ್ತು ಅವಲಕ್ಕಿಯ ಹತ್ತು ಕೋಟಿ ರಾಶಿಗಳೂ, ಅಲ್ಲಿ ತುಂಬಿದ್ದವು. ಎಲೈ ನಾರದಮುನಿಯೇ ಅಲ್ಲಿತುಂಬಿದ್ದ ಅಕ್ಕಿಯ ರಾಶಿಗಳಂತೂ ಅಗಣಿತವಾಗಿದ್ದವು.

೩೯. ಎಲೈ ಮಹರ್ಷಿಯೇ ಆ ಕೈಲಾಸಪರ್ವತದಲ್ಲಿ ಪಾರ್ವತಿಯ ವ್ರತೋಪಯೋಗಕ್ಕಾಗಿ ಚಿನ್ನ ಬೆಳ್ಳಿಗಳ ಮತ್ತು ಹವಳ ಮುಂತಾದ ಮಣಿಗಳ ರಾಶಿಯು ಪರ್ವತಾಕಾರವಾಗಿದ್ದಿತು

೪೦. ಆ ವ್ರತದಲ್ಲಿ ಲಕ್ಷ್ಮೀದೇವಿಯು ಬಂದು ಪಾಯಸ ತಂಬಿಟ್ಟು ಮತ್ತು ಮನೋಹರವಾದ ಶಾಲ್ಯನ್ನವನ್ನೂ, ತುಪ್ಪದ ಒಗ್ಗರಣೆ ಹಾಕಿರುವ ವಿವಿಧ ಕಾಯಿಪಲ್ಯಗಳನ್ನೂ ಭೋಜನಕ್ಕೆ ಸಿದ್ಧಪಡಿಸಿದಳು.

ಬುಭುಜೇ ದೇವರ್ಷಿಗಣೈಃ ಶಿವೋ ನಾರಾಯಣೇನ ಚ ।
ಬಭೂವುರ್ಲಕ್ಷವಿಪ್ರಾಶ್ಚ ಪರಿವೇಷಣಕಾರಕಾಃ ॥ ೪೧ ॥

ತಾಂಬೂಲಂ ಚ ದದೌ ತೇಭ್ಯಃ ಕರ್ಪೂರಾದಿ ಸುವಾಸಿತಂ ।
ರತ್ನಸಿಂಹಾಸನಸ್ಥೇಭ್ಯೋ ವಿಪ್ರಲಕ್ಷಾಃ ಸುದಕ್ಷಕಾಃ ॥ ೪೨ ॥

ರತ್ನಸಿಂಹಾಸನಸ್ಥಂ ಚ ವಿಷ್ಣುಂ ಕ್ಷೀರೋದಶಾಯಿನಂ ।
ಸೇವ್ಯಮಾನಂ ಪಾರ್ಷದೈಶ್ಚ ಸಸ್ಮಿತೈಃ ಶ್ವೇತಚಾಮರೈಃ ॥ ೪೩ ॥

ಋಷಿಭಿಸ್ತೂಯಮಾನಂ ಚ ಸಿದ್ಧೈರ್ದೇವಗಣೈಸ್ತಥಾ ।
ವಿದ್ಯಾಧರೀಣಾಂ ನೃತ್ಯಾನಿ ಪಶ್ಯಂತಂ ಸಸ್ಮಿತಂ ಮುದಾ ॥ ೪೪ ॥

ಗಂಧರ್ವಾಣಾಂ ಚ ಸಂಗೀತಂ ಶ್ರುತವಂತಂ ಮನೋಹರಂ ।
ಪಪ್ರಚ್ಛ ಶಂಕರೋ ಬ್ರಹ್ಮನ್ ಬ್ರಹ್ಮೇಶಂ ಪ್ರೀತಿಪೂರ್ವಕಂ ॥ ೪೫ ॥

---

೪೧. ಆಗ ಪರಮೇಶ್ವರನು ನಾರಾಯಣನೊಡನೆಯೂ, ದೇವತೆಗಳು ಮತ್ತು ಋಷಿಗಳೊಡನೆಯೂ ಊಟಕ್ಕೆ ಕುಳಿತನು. ಲಕ್ಷ ಬ್ರಾಹ್ಮಣರು ಬಡಿಸುವ ಕಾರ್ಯದಲ್ಲಿ ನಿಯುಕ್ತರಾದರು

೪೨. ಊಟಮಾಡಿ ರತ್ನಸಿಂಹಾಸನದಲ್ಲಿ ಕುಳಿತ ಅವರೆಲ್ಲರಿಗೂ, ದಕ್ಷರಾದ ಆ ಲಕ್ಷ ಬ್ರಾಹ್ಮಣರು ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನು ಕೊಟ್ಟರು.

೪೩. ಅನಂತರ ಕ್ಷೀರಸಾಗರದಲ್ಲಿ ಪವಡಿಸುವ ವಿಷ್ಣುವು ರತ್ನಸಿಂಹಾಸನದಲ್ಲಿ ಪಾರ್ಷದರ ಬಳಿ ಚಾಮರದ ಸೇವೆಯನ್ನು ಕೈಗೊಳ್ಳುತ್ತ ಸ್ಮಿತಮುಖನಾಗಿ ಕುಳಿತಿದ್ದನು.

೪೪ ಋಷಿಗಳೂ, ಸಿದ್ಧರೂ ಮತ್ತು ಎಲ್ಲ ದೇವತೆಗಳೂ ಆತನನ್ನು ಸ್ತುತಿಸುತ್ತಿದ್ದರು. ತನ್ನ ಮುಂದೆ ನಡೆಯುತ್ತಿರುವ ವಿದ್ಯಾಧರಿಯರ ನರ್ತನವನ್ನು ಸಂತೋಷದಿಂದ ವಿಷ್ಣುವು ನೋಡುತ್ತಿದ್ದನು.

೪೫. ಗಂಧರ್ವರ ಕರ್ಣಾನಂದಕರವಾದ ಗಾನವನ್ನು ಕೇಳುತ್ತ ಕುಳಿತಿದ್ದ ವಿಷ್ಣುವನ್ನು ಕುರಿತು ಶಿವನು ಪ್ರೀತಿಪೂರ್ವಕವಾಗಿ ಈರೀತಿ ಕೇಳಲಾರಂಭಿಸಿದನು.

ಬ್ರಹ್ಮಣಾ ಪ್ರೇರಿತೋ ಯುಕ್ತಂ ವ್ರತಂ ಕರ್ತವ್ಯಮೀಪ್ಸಿತಂ ।
ದೇವರ್ಷಿಗಣಪೂರ್ಣಾಯಾಂ ಸಭಾಯಾಂ ಸಂಪುಟಾಂಜಲಿಃ ॥ ೪೬ ॥

॥ ಶ್ರೀ ಮಹಾದೇವ ಉವಾಚ ॥

ಮದೀಯಂ ವಚನಂ ನಾಥ ಶ್ರೀನಿವಾಸ ಶೃಣು ಪ್ರಭೋ ।
ತಪಸ್ಸ್ವರೂಪ ತಪಸಾಂ ಕರ್ಮಣಾಂ ಚ ಫಲಪ್ರದ ॥ ೪೭ ॥

ವ್ರತಾನಾಂ ಜಪಯಜ್ಞಾನಾಂ ಪೂಜಾನಾಂ ಸರ್ವಪೂಜಿತ ।
ಸರ್ವೇಷಾಂ ಬೀಜರೂಪೇಣ ವಾಂಛಾಕಲ್ಪತರೋ ಹರೇ ॥ ೪೮ ॥

ಸುಪುಣ್ಯಂ ಚ ವ್ರತಂ ಕರ್ತುಂ ಬ್ರಹ್ಮನ್ನಿಚ್ಛತಿ ಪಾರ್ವತೀ ।
ಪುತ್ರಾರ್ಥಿನೀ ಸಾ ಶೋಕಾರ್ತಾ ಹೃದಯೇನ ವಿದೂಯತಾ ॥ ೪೯ ॥

---

೪೬. ದೇವರ್ಷಿಸಮೂಹದಿಂದ ಪರಿಪೂರ್ಣವಾದ ಆ ಸಭೆಯಲ್ಲಿ, ಶಿವನು ಬ್ರಹ್ಮನಿಂದ ಪ್ರೇರಿತನಾಗಿ ಕೈಮುಗಿದುಕೊಂಡು, ಸಕಲಾಭೀಷ್ಟಪ್ರದವೂ, ಎಲ್ಲರೂ ಮಾಡಬೇಕಾದುದೂ ಆದ ವ್ರತವಾವುದೆಂದು ವಿಷ್ಣುವನ್ನು ಕೇಳಿದನು.

೪೭. ಮಹಾದೇವ:—ಲಕ್ಷ್ಮಿಗೆ ಆವಾಸಸ್ಥಾನನಾದ ಎಲೈ ವಿಷ್ಣುವೇ, ತಪಃಸ್ವರೂಪನೂ ಸಕಲ ಕರ್ಮಗಳ ಫಲಪ್ರದನೂ ಆದ ನೀನು ನಾನಾಡುವ ಮಾತುಗಳನ್ನು ಕೇಳು.

೪೮. ಸರ್ವಬೀಜಸ್ವರೂಪನೂ, ಸರ್ವಾಭೀಷ್ಟಫಲವನ್ನು ಕೊಡುವುದರಲ್ಲಿ ಕಲ್ಪವೃಕ್ಷಸ್ವರೂಪನೂ ಆದ ಎಲೈ ಶ್ರೀ ಹರಿಯೇ, ವ್ರತ, ಜಪ, ಯಜ್ಞ ಮತ್ತು ಪೂಜೆಗಳಲ್ಲೆಲ್ಲ ನೀನು ಸರ್ವಪೂಜಿತನಾಗಿರುವೆ

೪೯. ಮಕ್ಕಳಿಲ್ಲದೆ ದುಃಖಿತಳಾಗಿರುವ ಪಾರ್ವತಿಯು ಮಕ್ಕಳನ್ನು ಪಡೆಯು ಬೋಸುಗ ಯಾವುದಾದರೊಂದು ಪುಣ್ಯಕರವಾದ ವ್ರತವನ್ನಾಚರಿಸಲು ಅಪೇಕ್ಷಿಸುತ್ತಿದ್ದಾಳೆ.

ರತಿಭಂಗೇ ಕೃತೇ ದೇವೈರ್ವ್ಯರ್ಥವೀರ್ಯಶುಚಾರ್ದಿತಾ ।
ಪ್ರಬೋಧಿತಾ ಮಯಾ ಸಾಧ್ವೀ ವಿವಿಧೈರ್ವಚನಾಮೃತೈಃ ॥ ೫೦ ॥

ಸತ್ಪುತ್ರಂ ಸ್ವಾಮಿ ಸೌಭಾಗ್ಯಂ ಸುವ್ರತಾ ಯಾಚತೇ ವ್ರತೇ ।
ತಾಭ್ಯಾಂ ವಿನಾ ನ ಸಂತುಷ್ಟಾ ಸ್ವಪ್ರಾಣಾಂಸ್ತ್ಯಕ್ತುಮಿಚ್ಛತಿ ॥ ೫೧ ॥

ಪುರಾ ತ್ಯಕ್ತ್ವಾ ಸ್ವದೇಹಂ ಚ ಪಿತೃಯಜ್ಞೇ ಚ ಮಾನಿನೀ ।
ಮನ್ನಿಂದಯಾ ಹಿಮವತೀ ಪುನರ್ಜನ್ಮ ಲಲಾಭ ಸಾ ॥ ೫೨ ॥

ಸರ್ವಂ ಜಾನಾಸಿ ವೃತ್ತಾಂತಂ ಸರ್ವಜ್ಞಂ ತ್ವಾಂ ವದಾಮಿ ಕಿಂ ।
ದೀನಾಂ ತಾಂ ವದ ತತ್ತ್ವಜ್ಞ ಪರಿಣಾಮಶುಭಪ್ರದಾಂ ॥ ೫೩ ॥

---

೫೦. ದೇವತೆಗಳು ನಮ್ಮ ರತಿಸುಖವನ್ನು ಭಂಗಪಡಿಸಿದಾಗ ನನ್ನ ವೀರ್ಯವು ವ್ಯರ್ಥವಾದುದನ್ನು ನೋಡಿ ಪಾರ್ವತಿಯು ದುಃಖಿತಳಾದಳು. ಆಗ ಆ ಸಾಧ್ವೀಮಣಿಯನ್ನು ನಾನು ಅಮೃತದಂತಿರುವ ಮೃದುಮಧುರ ವಚನಗಳಿಂದ ಸಮಾಧಾನಗೊಳಿಸಿದೆನು.

೫೧. ವ್ರತಾಸಕ್ತಳಾದ ಆ ಪಾರ್ವತಿಯು ವ್ರತಾಚರಣೆಯ ಫಲವಾಗಿ ಸತ್ಪುತ್ರನನ್ನೂ ಪತಿಸೌಭಾಗ್ಯವನ್ನೂ ಬೇಡುವಳು. ಅವೆರಡು ಫಲಗಳು ಲಭಿಸದಿದ್ದರೆ ಅಸಂತುಷ್ಟಳಾಗಿ ತನ್ನ ಪ್ರಾಣಗಳನ್ನು ಬಿಡಲು ಸಿದ್ಧಳಾಗುವಳು.

೫೨. ಮಾನವತಿಯಾದ ಆಕೆಯು ಪೂರ್ವದಲ್ಲಿ ದಕ್ಷಬ್ರಹ್ಮನ ಪುತ್ರಿಯಾಗಿದ್ದಾಗ, ತನ್ನ ತಂದೆಯು ನನ್ನ ನಿಂದೆ ಮಾಡಿದುದನ್ನು ಕೇಳಿ ಯಜ್ಞಕುಂಡದಲ್ಲಿ ದೇಹತ್ಯಾಗಮಾಡಿ ಹಿಮವಂತನಲ್ಲಿ ಪುನಃ ಜನ್ಮವೆತ್ತಿದಳು.

೫೩. ಸಕಲ ವೃತ್ತಾಂತವನ್ನೂ ಬಲ್ಲ ಸರ್ವಜ್ಞನಾದ ನಿನಗೆ ನಾನು ಹೇಳಬೇಕಾಗಿರುವುದೇನು ? ಆದುದರಿಂದ ತತ್ತ್ವಜ್ಞಾನಿಯಾದ ನೀನು ದೀನಳಾದ ಪಾರ್ವತಿಯನ್ನು ಕುರಿತು ಪರಿಣಾಮದಲ್ಲಿ ಶುಭದಾಯಕವಾದ ಹಿತನುಡಿಯನ್ನು ಉಪದೇಶ ಮಾಡು.

ಅಪ್ರತ್ಯಯಾನಾಂ ಕ್ಷೇತ್ರಂ ಚ ಸ್ವಯಂ ಕಪಟಮೂರ್ತಿಮತ್ ।
ಅಹಂಕಾರಾಶ್ರಯಂ ಶಶ್ವದ್ವಿಷಕುಂಭಂ ಸುಧಾಮುಖಂ ॥ ೫೯ ॥

ಸರ್ವೈರಸಾಧ್ಯಮಾನಂ ಚ ದುರಾರಾಧ್ಯಂ ಚ ಸರ್ವದಾ ।
ಸ್ವಕಾರ್ಯಸಾಧ್ಯಾಚಾರಾಢ್ಯಂ ಕಲಹಾಂಕುರಕಾರಣಂ ॥ ೬೦ ॥

ಸರ್ವಂ ನಿವೇದಿತಂ ಬ್ರಹ್ಮನ್ಕರ್ತವ್ಯಂ ವಕ್ತುಮರ್ಹಸಿ ।
ಕಾರ್ಯಂ ಸರ್ವಂ ಪರಾಮರ್ಶೇ ಪರಿಣಾಮಸುಖಾವಹಂ ॥ ೬೧ ॥

॥ ಶ್ರೀ ನಾರಾಯಣ ಉವಾಚ ॥

ಇತ್ಯೇವಮುಕ್ತ್ವಾ ಭಗವಾನ್ನಿರೀಕ್ಷ್ಯ ಬ್ರಹ್ಮಣೋ ಮುಖಂ ।
ವಿರರಾಮ ಸಭಾಮಧ್ಯೇ ಸ್ತುತ್ವಾ ಚ ಕಮಲಾಪತಿಂ ॥ ೬೨ ॥

---

೫೯. ಅಪನಂಬಿಕೆಗೆ ಆಶ್ರಯವೂ, ಕಪಟಾಕಾರವೂ, ಅಹಂಕಾರದ ಗಣಿಯೂ ಆದ ಸ್ತ್ರೀರೂಪವು, ಬಾಯಿನಲ್ಲಿ ಅಮೃತವನ್ನು ತೋರಿಸುವ ವಿಷ ತುಂಬಿದ ಗಡಿಗೆಯಂತಿರುವುದು.

೬೦. ಹೆಂಗಸಿನ ಮನೋಗತವನ್ನು ತಿಳಿಯುವುದಕ್ಕಾಗಲೀ, ಆಕೆಯನ್ನು ಒಲಿಸುವುದಕ್ಕಾಗಲೀ ಯಾರಿಂದಲೂ ಸಾಧ್ಯವಿಲ್ಲ. ತಮ್ಮ ಕಾರ್ಯಸಾಧನೆಯಲ್ಲಿ ನಿರತ ರಾಗಿಯೂ, ತಮಗೆ ವಿರೋಧ ಬಂದಾಗ ಜಗಳವಾಡಲು ಕಾರಣರಾಗಿಯೂ ಸ್ತ್ರೀಯರು ನಿಲ್ಲುವರು.

೬೧. ಎಲೌ ವಿಷ್ಣುವೇ, ಎಲ್ಲವನ್ನೂ ನಿನಗೆ ಹೇಳಿದಂತಾಯಿತು. ಆದುದ ರಿಂದ ಪಾರ್ವತಿಯ ಇಷ್ಟಾರ್ಥವು ಸಿದ್ಧಿಸಲು ಏನು ಮಾಡಬೇಕೆಂಬುದನ್ನು ಯೋಚಿಸಿ ಪರಿಣಾಮದಲ್ಲಿ ಹಿತಕಾರಿಯಾಗುವ ಕರ್ತವ್ಯವನ್ನು ಉಪದೇಶಮಾಡು.

೬೨. ನಾರಾಯಣಮಹರ್ಷಿ :—ಭಗವಂತನಾದ ಭವಾನೀರಮಣನು ಇಂತು ನುಡಿದು ಬ್ರಹ್ಮನ ಮುಖವನ್ನು ನೋಡಿ, ಲಕ್ಷ್ಮೀರಮಣನನ್ನು ಸ್ತುತಿಸಿ ಸಭೆಯ ಮಧ್ಯೆ ಸುಮ್ಮನೆ ಕುಳಿತನು.

ದುರ್ನಿವಾರ್ಯಶ್ಚ ಸರ್ವೇಶ ಸ್ತ್ರೀಸ್ವಭಾವಶ್ಚ ಚಾಪಲಃ ।
ದುಸ್ತ್ಯಜ್ಯಂ ಯೋಗಿಭಿಃ ಸಿದ್ಧೈರಸ್ಮಾಭಿಶ್ಚ ತಪಸ್ವಿಭಿಃ　　॥ ೫೪ ॥

ಜಿತೇಂದ್ರಿಯೈರ್ಜಿತಕ್ರೋಧೈಃ ಸ್ತ್ರೀರೂಪಂ ಮೋಹಕಾರಣಂ ।
ಸರ್ವಮಾಯಾಕರಂಡಂ ಚ ಕಾಮವರ್ಧನಕಾರಣಂ　　॥ ೫೫ ॥

ಬ್ರಹ್ಮಾಸ್ತ್ರಂ ಕಾಮದೇವಸ್ಯ ದುರ್ಭೇದ್ಯಂ ಜಯಕಾರಣಂ ।
ಸುನಿರ್ಮಿತಂ ಚ ವಿಧಿನಾ ಸರ್ವಾದ್ಯಂ ವಿಧಿಪೂರ್ವಕಂ　　॥ ೫೬ ॥

ಮೋಕ್ಷದ್ವಾರಕಪಾಟಂ ಚ ಹರಿಭಕ್ತಿನಿರೋಧನಂ ।
ಸಂಸಾರಬಂಧನಸ್ತಂಭರಜ್ಜುರೂಪಮಕೃಂತನಂ　　॥ ೫೭ ॥

ವೈರಾಗ್ಯನಾಶಬೀಜಂ ಚ ಶಶ್ವದ್ರಾಗವಿವರ್ಧನಂ ।
ಪತ್ತನಂ ಸಾಹಸಾನಾಂ ಚ ದೋಷಾಣಾಮಾಲಯಂ ಸದಾ　　॥ ೫೮ ॥

---

೫೪. ಎಲೈ ಸರ್ವೇಶ್ವರನೇ, ಹೆಂಗಸಿನ ಸ್ವಭಾವವು ಅತಿ ಚಂಚಲವೂ, ತಡೆಯಲಸಾಧ್ಯವೂ ಆದುದು. ಯೋಗಿಗಳು ಸಿದ್ಧರು ಮತ್ತು ನಮ್ಮಂಥ ತಪಸ್ವಿಗಳೂ ಕೂಡ ಸ್ತ್ರೀಚಾಪಲ್ಯದಲ್ಲಿ ನಿರತರಾಗುವೆವು.

೫೫. ಸಕಲ ಮಾಯೆಗೆ ಆಶ್ರಯವಾಗಿಯೂ, ಮನ್ಮಥವಿಕಾರಕ್ಕೆ ಕಾರಣವಾಗಿಯೂ ಇರುವ ಹೆಂಗಸಿನ ಸುಂದರರೂಪವು ಜಿತೇಂದ್ರಿಯರೂ ಜಿತಕ್ರೋಧರೂ ಆದ ಯೋಗಿಗಳನ್ನೂ ಮೋಹಗೊಳಿಸುವುದು

೫೬. ಹೆಂಗಸು ಮನ್ಮಥನಿಗೆ, ಜಯದಾಯಕವೂ, ಇತರರಿಂದ ಭೇದಿಸಲಸಾಧ್ಯವೂ ಆದ ಬ್ರಹ್ಮಾಸ್ತ್ರದಂತಿರುವಳು. ಬ್ರಹ್ಮನು ಎಲ್ಲಕ್ಕಿಂತಲೂ ಮೊದಲು ಶ್ರದ್ಧಾಪೂರ್ವಕವಾಗಿ ಆ ಅಸ್ತ್ರವನ್ನು ಸೃಷ್ಟಿ ಮಾಡಿದನು.

೫೭. ಸ್ತ್ರೀರೂಪವಾದ ಆ ಅಸ್ತ್ರವು ಮೋಕ್ಷಮಾರ್ಗಕ್ಕೆ ಅಡ್ಡಲಾಗಿರುವ ಬಾಗಿಲಿನ ಅಗಳಿಯಂತೆಯೂ ಶ್ರೀಹರಿಯಭಕ್ತಿಗೆ ಪ್ರತಿಬಂಧಕರೂಪವಾಗಿಯೂ, ಸಂಸಾರವೆಂಬ ಕಂಭದಲ್ಲಿ ಕಟ್ಟಲು ಕತ್ತರಿಸಲಾಗದ ಹಗ್ಗದಂತೆಯೂ ಇರುವುದು.

೫೮. ಹೆಂಗಸು ವೈರಾಗ್ಯವನ್ನು ನಾಶಗೊಳಿಸಲು ಬೀಜರೂಪಿಣಿಯಾಗಿಯೂ, ಅನುರಾಗವನ್ನು ಹೆಚ್ಚಿಸುವವಳಾಗಿಯೂ, ಸಾಹಸ ಮತ್ತು ದೋಷಗಳಿಗೆ ತೌರುಮನೆಯಾಗಿಯೂ ಇರುವಳು.

ಶಂಕರಸ್ಯ ವಚಃ ಶ್ರುತ್ವಾ ಪ್ರಹಸ್ಯ ಜಗದೀಶ್ವರಃ ।
ಹಿತಂ ಚ ನೀತಿವಚನಂ ಪ್ರವಕ್ತುಮುಪಚಕ್ರಮೇ ॥ ೬೩ ॥

॥ ಶ್ರೀವಿಷ್ಣುರುವಾಚ ॥

ಸುಪುಣ್ಯಕವ್ರತಂ ಸಾರಂ ಸತೀ ಸಂತಾನಹೇತವೇ ।
ಸ್ವಾಮಿಸೌಭಾಗ್ಯಬೀಜಂ ಚ ಪತ್ನೀ ತೇ ಕರ್ತುಮಿಚ್ಛತಿ ॥ ೬೪ ॥

ಸರ್ವಾಸಾಧ್ಯಂ ದುರಾರಾಧ್ಯಂ ಸರ್ವಕಾಮಫಲಪ್ರದಂ ।
ಸುಖದಂ ಸುಖಸಾರಂ ಚ ಮೋಕ್ಷದಂ ಪಾರ್ವತೀಶ್ವರ ॥ ೬೫ ॥

ಆತ್ಮಸಾಕ್ಷಿಸ್ವರೂಪಶ್ಚ ಜ್ಯೋತಿರೂಪಃ ಸನಾತನಃ ।
ನಿರಾಶ್ರಯಶ್ಚ ನಿರ್ಲಿಪ್ತೋ ನಿರೂಪಾಧಿರ್ನಿರಾಮಯಃ ॥ ೬೬ ॥

---

೬೩. ಶಂಕರನ ಮಾತನ್ನು ಕೇಳಿ ಜಗತ್ಪತಿಯಾದ ವಿಷ್ಣುವು ಮುಗುಳುನಗೆ ನಕ್ಕು ಹಿತವೂ ನೀತಿಬೋಧಕವೂ ಆದ ಮಾತನ್ನು ಹೇಳಲುಪಕ್ರಮಿಸಿದನು.

೬೪. ವಿಷ್ಣು :—ಎಲೈ ಮಹಾದೇವನೇ, ನಿನ್ನ ಪತ್ನಿಯೂ, ಸತಿವ್ರತೆಯೂ ಆದ ಪಾರ್ವತಿಯು ಪುತ್ರಪ್ರಾಪ್ತಿ ಮತ್ತು ಪತಿಯ ಸೌಭಾಗ್ಯಕ್ಕಾಗಿ ವ್ರತಗಳಿಗೆಲ್ಲ ಸಾರಭೂತವಾದ ಪುಣ್ಯಕವೆಂಬ ವ್ರತವನ್ನಾಚರಿಸಲು ಇಚ್ಛಿಸುವಳು.

೬೫. ಎಲೌ ಪಾರ್ವತೀಪತಿಯೇ, ಆ ವ್ರತವು ಇತರರಿಗೆ ಸುಲಭವಲ್ಲದೆ ಅತ್ಯಂತ ಕಷ್ಟವಾಗಿದ್ದರೂ ಅದನ್ನಾಚರಿಸಿದವರಿಗೆ ಸುಖ, ಮೋಕ್ಷ ಮುಂತಾದ ಸಕಲಾಭೀಷ್ಟಗಳೂ ಕೈಗೂಡುವುವು.

೬೬. ಆತ್ಮನು ಜೀವರ ಕರ್ಮಗಳಿಗೆ ಸಾಕ್ಷಿಸ್ವರೂಪನೂ, ಜ್ಯೋತಿರ್ಮಯನೂ, ಅನಾದಿಯೂ, ಆಶ್ರಯರಹಿತನೂ, ಕರ್ಮಲೇಪವಿಲ್ಲದವನೂ, ನಿರುಪಾಧಿಯೂ ನಿರಾಮಯನೂ ಆಗಿರುವನು.

ಭಕ್ತಪ್ರಾಣಶ್ಚ ಭಕ್ತೇಶೋ ಭಕ್ತಾನುಗ್ರಹಕಾರಕಃ ।
ದುರಾರಾಧ್ಯೋ ಹಿ ಯೋಽನ್ಯೇಷಾಂ ಭಕ್ತಾನಾಮತಿಸಾಧಕಃ ॥ ೧೭ ॥

ಭಕ್ತ್ಯಧೀನೋ ಹಿ ಭಗವಾನ್ ಸರ್ವಸಿದ್ಧೋ ಹಿ ನಿಷ್ಫಲಃ ।
ತೇ ಯಸ್ಯ ಚ ಕಲಾಃ ಪುಂಸೋ ಬ್ರಹ್ಮವಿಷ್ಣುಮಹೇಶ್ವರಾಃ ॥ ೧೮ ॥

ಮಹಾನ್ವಿರಾಡ್ಯದಂಶಶ್ಚ ನಿರ್ಲಿಪ್ತಃ ಪ್ರಕೃತೇಃ ಪರಃ ।
ಅವ್ಯಯೋ ನಿಗ್ರಹಶ್ಚೋಗ್ರೋ ಭಕ್ತಾನುಗ್ರಹವಿಗ್ರಹಃ ॥ ೧೯ ॥

ಉಗ್ರಗ್ರಹೋ ಗ್ರಹಾಣಾಂ ಚ ಗ್ರಹವಿಗ್ರಹಕಾರಕಃ ।
ತ್ರಿಕೋಟಿಜನ್ಮಮಧ್ಯೇ ಚ ನ ಸಾಧ್ಯೋ ಭವತಾ ವಿನಾ ॥ ೨೦ ॥

ಲಬ್ಧ್ವಾ ಹಿ ಭಾರತೇ ಜನ್ಮ ಹರಿಭಕ್ತಿಂ ಲಭೇನ್ನರಃ ।
ಸೇವನಂ ಕ್ಷುದ್ರದೇವಾನಾಂ ಕೃತ್ವಾ ಸಪ್ತಸು ಜನ್ಮಸು ॥ ೨೧ ॥

---

೧೭. ಭಕ್ತರಿಗೆ ಪ್ರಾಣಸ್ವರೂಪನೂ, ಒಡೆಯನೂ, ಅನುಗ್ರಹಮಾಡು ವವನೂ ಆದ ಆ ಪರಮಾತ್ಮನನ್ನು ಭಕ್ತರು ಪೂಜಿಸಿ ತಮ್ಮಿಷ್ಟಾರ್ಥವನ್ನು ಪಡೆಯ ಬಹುದೇ ಹೊರತು ಇತರರಾರೂ ಅವನನ್ನು ಪೂಜಿಸಿ ಮೆಚ್ಚಿಸಲಾರರು.

೧೮. ಭಗವಂತನು ಭಕ್ತಿಗೆ ಒಲಿಯುವುದರಿಂದ ಭಕ್ತಿರಹಿತನು ಸಕಲ ಸಿದ್ಧಿಯನ್ನೂ ಪಡೆದರೂ ನಿಷ್ಫಲವೆನಿಸುವುದು. ಬ್ರಹ್ಮ, ವಿಷ್ಣು, ಮಹೇಶ್ವರರು ಆ ಪರಮಾತ್ಮನ ಕಲಾಮಾತ್ರರು.

೧೯. ನಿರ್ಲಿಪ್ತನೂ, ಪ್ರಕೃತಿಗಿಂತ ಪರನೂ ಆದ ಮಹಾ ವಿರಾಟ್ಪುರುಷನು ಆ ಪರಮಾತ್ಮನ ಅಂಶರೂಪನು. ವಿಕಾರರಹಿತನೂ, ನಿಗ್ರಹಪರನೂ ಆದ ಆತನು ಭಕ್ತಾನುಗ್ರಹಕ್ಕಾಗಿ ಉಗ್ರರೂಪವನ್ನು ಧರಿಸುವನು.

೨೦. ಗ್ರಹಗಳಿಗೆಲ್ಲ ಉಗ್ರರೂಪನೂ, ಗ್ರಹನಿಗ್ರಹಕಾರಿಯೂ ಆದ ಆ ಪರಮಾತ್ಮನನ್ನುಳಿದು ಮೂರು ಕೋಟಿ ಜನ್ಮವೆತ್ತಿದ್ದರೂ, ಮುಕ್ತಿಗೆ ಬೇರೆ ಮಾರ್ಗವಿಲ್ಲ.

೨೧–೨೨. ಏಳು ಜನ್ಮಗಳಲ್ಲಿ ಕ್ಷುದ್ರದೇವತೆಗಳ ಸೇವೆಯನ್ನು ಮಾಡಿ ಭಾರತದಲ್ಲಿ ಜನ್ಮವೆತ್ತಿದ ಮನುಜನು ಶ್ರೀಹರಿಯಲ್ಲಿ ಭಕ್ತಿಯನ್ನು ಪಡೆಯುವನು.

**ಸೂರ್ಯಮಂತ್ರಮವಾಪ್ನೋತಿ ಕೇವಲಂ ಸ ತದಾಶಿಷಾ ।**
**ಸೂರ್ಯಮಂತ್ರಂ ಸಮಾರಾಧ್ಯ ತ್ರಿಷು ಜನ್ಮಸು ಭಾರತೇ ॥ ೬೨ ॥**

**ಪ್ರಾಪ್ನೋತಿ ಶೈವಂ ಮಂತ್ರಂ ಚ ಸರ್ವದಂ ಮಾನವೋ ಮುದಾ ।**
**ಸಂಸೇವ್ಯ ಪರಯಾ ಭಕ್ತ್ಯಾ ತ್ವಾಮೇವಂ ಸಪ್ತಜನ್ಮಸು ॥ ೬೩ ॥**

**ಪ್ರಾಪ್ನೋತಿ ಮಾಯಾಮಂತ್ರಂ ಚ ತ್ವತ್ಪದಾಬ್ಜಪ್ರಸಾದತಃ ।**
**ಶತಂ ಜನ್ಮಸು ಚಾರಾಧ್ಯ ಮಾಯಾಂ ನಾರಾಯಣೀಂ ಪರಾಂ ॥ ೬೪ ॥**

**ನಾರಾಯಣಕಲಾಂ ಸೇವ್ಯಾಂ ಸಮವಾಪ್ನೋತಿ ಮಾನವಃ ।**
**ಕಲಾಂ ನಿಷೇವ್ಯ ವರ್ಷೇಽತ್ರ ಪುಣ್ಯಕ್ಷೇತ್ರೇ ಸುದುರ್ಲಭೇ ॥ ೬೫ ॥**

**ಕೃಷ್ಣಭಕ್ತಿಮವಾಪ್ನೋತಿ ಭಕ್ತಸಂಸರ್ಗಹೈತುಕೀಂ ।**
**ಸಂಪ್ರಾಪ್ಯ ಭಕ್ತಿಂ ನಿಷ್ಪಕ್ವಾಂ ಭ್ರಾಮಂ ಭ್ರಾಮಂ ಚ ಭಾರತೇ ॥ ೬೬ ॥**

---

ಅನಂತರ ಶ್ರೀ ಹರಿಯು ಆಶೀರ್ವಾದದಿಂದ ಸೂರ್ಯಮಂತ್ರೋಪದೇಶವನ್ನು ಪಡೆಯುವನು.

೬೩. ಅನಂತರ ಮೂರು ಜನ್ಮಗಳಕಾಲ ಭಾರತದಲ್ಲಿ ಸೂರ್ಯಮಂತ್ರೋಪಾಸನೆ ಮಾಡಿದ ಮನುಷ್ಯನು ಸಕಲಾರ್ಥದಾಯಕವಾದ ಶೈವಮಂತ್ರೋಪದೇಶವನ್ನು ಹೊಂದುವನು.

೬೪. ಏಳು ಜನ್ಮಗಳಲ್ಲಿ ಪರಮ ಭಕ್ತಿಯಿಂದ ನಿನ್ನನ್ನು ಸೇವಿಸಿ, ನಿನ್ನ ಪಾದದ ದಿವ್ಯಾನುಗ್ರಹದಿಂದ ಮಾಯಾದೇವಿಯ ಮಂತ್ರೋಪದೇಶವನ್ನು ಪಡೆಯುವನು.

೬೫ ಆ ಮಾಯಾಶಕ್ತಿಯನ್ನು ನೂರು ಜನ್ಮಗಳಲ್ಲಿ ಆರಾಧಿಸಿ, ಸೇವೆಗೆ ಅರ್ಹವಾದ ಶ್ರೀಮನ್ನಾರಾಯಣನ ಕಲೆಯನ್ನು ಸೇವಿಸುವನು.

೬೬. ಈರೀತಿಯಾಗಿ ಪುಣ್ಯಕ್ಷೇತ್ರವಾದ ಭರತಖಂಡದಲ್ಲಿ ದುರ್ಲಭವಾದ ನಾರಾಯಣನ ಕಲೆಯನ್ನು ಒಂದು ವರ್ಷಕಾಲ ಸೇವಿಸಿ ಭಕ್ತರ ಸಂಸರ್ಗವನ್ನೊದಗಿಸುವ ಶ್ರೀಕೃಷ್ಣಭಕ್ತಿಯನ್ನು ಪಡೆಯುವನು.

ಪ್ರಾಪ್ನೋತಿ ಪರಿಪಕ್ವಾಂ ಚ ಭಕ್ತಿಂ ಭಕ್ತನಿಷೇವಯಾ ।
ತದಾ ಭಕ್ತಪ್ರಸಾದೇನ ದೇವಾನಾಮಾಶಿಷಾ ಶಿವ ।
ಶ್ರೀಕೃಷ್ಣಮಂತ್ರಂ ಪ್ರಾಪ್ನೋತಿ ನಿರ್ವಾಣ ಫಲದಂ ಪರಂ || ೭೭ ||

ಕೃಷ್ಣವ್ರತಂ ಕೃಷ್ಣಮಂತ್ರಂ ಸರ್ವಕಾಮ ಫಲಪ್ರದಂ ।
ಕೃಷ್ಣತುಲ್ಯೋ ಭವೇದ್ಭಕ್ತಶ್ಚಿರಂ ಕೃಷ್ಣನಿಷೇವಯಾ || ೭೮ ||

ಮಹತಿಪ್ರಲಯೇ ಪಾತಃ ಸರ್ವೇಷಾಂ ವೈ ಸುನಿಶ್ಚಿತಂ ।
ನ ಪಾತಃ ಕೃಷ್ಣಭಕ್ತಾನಾಂ ಸಾಧೂನಾಮವಿನಾಶಿನಾಂ || ೭೯ ||

ಅವಿನಾಶಿನಿ ಗೋಲೋಕೇ ಮೋದಂತೇ ಕೃಷ್ಣಕಿಂಕರಾಃ ।
ಹಸಂತಿ ತೇ ಸುನಿಶ್ಚಿಂತಾ ದೇವಾನ್ಬ್ರಹ್ಮಾದಿಕಾಂಶ್ಚೈವ || ೮೦ ||

ತ್ವಂ ಸಂಹರ್ತಾ ಚ ಸರ್ವೇಷಾಂ ನ ಭಕ್ತಾನಾಂ ಮಹೇಶ್ವರ ।
ಮಾಯಾ ಮೋಹಯತೇ ಸರ್ವಾನ್ಭಕ್ತಾನ್ನ ಕೃಪಯಾ ಮಮ || ೮೧ ||

---

೭೭. ಮೊದಲು ಅಪಕ್ವವಾದ ಭಕ್ತಿಯನ್ನು ಪಡೆದು ಭಾರತದಲ್ಲಿ ಅಲೆದಾಡಿ ಭಕ್ತರಸೇವೆಯಿಂದ ಪರಿಪಕ್ವವಾದ ಭಕ್ತಿಯನ್ನು ಹೊಂದುವನು.

೭೮. ಎಲೈ ಶಿವನೇ ಆಗ ಭಕ್ತರ ಅನುಗ್ರಹದಿಂದಲೂ ದೇವತೆಗಳ ಆಶೀರ್ವಾದದಿಂದಲೂ ಪರಮ ಮುಕ್ತಿದಾಯಕವಾದ ಶ್ರೀಕೃಷ್ಣಮಂತ್ರದ ಉಪದೇಶವನ್ನು ಪಡೆಯುವನು. ಸಕಲರ ಇಷ್ಟಾರ್ಥವನ್ನೂ ಕೊಡುವ ಶ್ರೀಕೃಷ್ಣಮಂತ್ರವನ್ನು ಉಪಾಸನೆಮಾಡಿ, ಶ್ರೀಕೃಷ್ಣನ ಸೇವೆಯಿಂದ ಭಕ್ತನು ಶ್ರೀಕೃಷ್ಣನಿಗೆ ಸಮಾನನೆನಿಸುವನು.

೭೯. ಮಹಾ ಪ್ರಳಯದಲ್ಲಿ ಚರಾಚರವಾದ ನಿಖಿಲ ಪ್ರಾಣಿಗಳೂ ನಾಶವಾಗುವುವು. ಆದರೆ ಸಾಧುಗಳೆಂದ ಕೃಷ್ಣಭಕ್ತರಿಗೆ ಪ್ರಳಯಕಾಲದಲ್ಲೂ ನಾಶವಿಲ್ಲ. ಅವರು ಅವಿನಾಶಿಗಳು.

೮೦. ಶ್ರೀಕೃಷ್ಣನ ಸೇವಕರೆಲ್ಲ ನಾಶರಹಿತವಾದ ಗೋಲೋಕದಲ್ಲಿ ಆನಂದಮಯರಾಗಿ ನಿಶ್ಚಿಂತೆಯಿಂದಿದ್ದುಕೊಂಡು ಬ್ರಹ್ಮಾದಿ ಸಕಲ ದೇವತೆಗಳನ್ನೂ ಅಲ್ಲಗಳೆಯುವರು.

೮೧. ಎಲೈ ಮಹೇಶ್ವರನೇ, ನಿಖಿಲ ಜಗತ್ತನ್ನೂ ಸಂಹರಿಸಬಲ್ಲ ನೀನೂ ಕೂಡ ಕೃಷ್ಣಭಕ್ತರನ್ನು ಸಂಹರಿಸಲಾರೆ. ಸಕಲರನ್ನೂ ತನ್ನ ಮಾಯಾಜಾಲಕ್ಕೆ ಸಿಲುಕಿಕೊಳ್ಳಬಲ್ಲ ಆದಿಮಾಯೆಯೂ ಕೂಡ ನನ್ನ ಕೃಪೆಗೊಳಗಾದ ಕೃಷ್ಣಭಕ್ತರನ್ನು ಮೋಹಗೊಳಿಸಲಾರಳು.

ಮಾಯಾ ನಾರಾಯಣೀ ಮಾತಾ ಸರ್ವೇಷಾಂ ಕೃಷ್ಣಭಕ್ತಿದಾ ।
ನ ಕೃಷ್ಣಭಕ್ತಿಂ ಪ್ರಾಪ್ನೋತಿ ವಿನಾ ಮಾಯಾನಿಷೇವಣಂ ॥ ೮೨ ॥

ಸಾ ಚ ನಾರಾಯಣೀ ಮಾಯಾ ಮೂಲಪ್ರಕೃತಿರೀಶ್ವರೀ ।
ಕೃಷ್ಣಪ್ರಿಯಾ ಕೃಷ್ಣಭಕ್ತಾ ಕೃಷ್ಣತುಲ್ಯಾ ವಿನಾಶಿನೀ ॥ ೮೩ ॥

ಸಾ ಚ ತೇಜಸ್ಸ್ವರೂಪಾ ಚ ಸ್ವೇಚ್ಛಾವಿಗ್ರಹಧಾರಿಣೀ ।
ಆವಿರ್ಭೂತಾ ಚ ದೇವಾನಾಂ ತೇಜಸಾ ಸುರನಿಗ್ರಹೇ ॥ ೮೪ ॥

ನಿಹತ್ಯ ದೈತ್ಯಸಂಘಾಂಶ್ಚ ದಕ್ಷಪತ್ನ್ಯಾಂ ಚ ಭಾರತೇ ।
ಲಲಾಭ ಜನ್ಮ ತಪಸಾ ದಕ್ಷಸ್ಯಾನೇಕಜನ್ಮನಃ ॥ ೮೫ ॥

ತ್ಯಕ್ತ್ವಾ ದೇಹಂ ಪಿತುರ್ಯಜ್ಞೇ ಸಾ ಸತೀ ತವನಿಂದಯಾ ।
ಜಗಾಮ ದೇವೀ ಗೋಲೋಕಂ ಕೃಷ್ಣಶಕ್ತಿಃ ಸನಾತನೀ ॥ ೮೬ ॥

---

೮೨ ನಿಖಿಲ ಜಗನ್ಮಾತೆಯೂ, ನಾರಾಯಣಶಕ್ತಿಸ್ವರೂಪಿಣಿಯೂ ಆದ ಮಾಯೆಯು ಎಲ್ಲರಿಗೂ ಕೃಷ್ಣಭಕ್ತಿಯನ್ನು ಕೊಡುವಳು. ಮಾಯೆಯ ಸೇವೆಯನ್ನು ಮಾಡದ ಯಾರಿಗೂ ಶ್ರೀಕೃಷ್ಣಭಕ್ತಿಯು ಲಭಿಸಲಾರದು.

೮೩. ನಾರಾಯಣಶಕ್ತಿಸ್ವರೂಪಿಣಿಯೂ, ಮೂಲಪ್ರಕೃತಿಯೂ, ಸರ್ವೇಶ್ವರಿಯೂ ಆದ ಆ ಮಾಯೆಯು ಕೃಷ್ಣಪ್ರಿಯಳೂ, ಕೃಷ್ಣಭಕ್ತಳೂ ಆದುದರಿಂದ ಕೃಷ್ಣನಂತೆಯೇ ನಾಶರಹಿತಳೂ ಆಗಿರುವಳು.

೮೪. ತೇಜೋಮಯಳೂ, ಸ್ವೇಚ್ಛಾರೂಪಿಣಿಯೂ ಆದ ಆ ಮಾಯೆಯು ರಾಕ್ಷಸ ಸಂಹಾರಕಾಲದಲ್ಲಿ ದೇವತೆಗಳ ತೇಜಸ್ಸಿನಿಂದ ಆವಿರ್ಭವಿಸಿದಳು.

೮೫. ರಾಕ್ಷಸಸಂಹಾರವಾದನಂತರ ಆ ಶಕ್ತಿಯು ಭರತಖಂಡದಲ್ಲಿ ದಕ್ಷಬ್ರಹ್ಮನ ಅನೇಕ ಜನ್ಮದ ತಪಸ್ಸಿನ ಫಲವಾಗಿ ಅವನ ಪತ್ನಿಯಲ್ಲಿ ಅವತರಿಸಿ ದಾಕ್ಷಾಯಣಿಯೆನಿಸಿದಳು.

೮೬. ಕೃಷ್ಣಶಕ್ತಿಸ್ವರೂಪಿಣಿಯೂ ಸನಾತನಿಯೂ ಆದ ಆ ದಾಕ್ಷಾಯಣಿಯು ಪತಿಯಾದ ನಿನ್ನ ನಿಂದೆಯನ್ನು ಸಹಿಸಲಾರದೆ, ತಂದೆಯ ಯಜ್ಞಕುಂಡದಲ್ಲಿ ದೇಹತ್ಯಾಗಮಾಡಿ ಗೋಲೋಕಕ್ಕೆ ಹೋಗಿ ಸೇರಿದಳು.

ಗೃಹೀತ್ವಾ ವಿಗ್ರಹಂ ತಸ್ಯಾ ಗುಣರೂಪಾಶ್ರಯಂ ಪರಂ ।
ಭ್ರಾಮಂ ಭ್ರಾಮಂ ಭಾರತೇ ತ್ವಂ ವಿಷಣ್ಣೋಽಭೂಃ ಪುರಾ ಪರ ॥ ೮೭ ॥

ಪ್ರಬೋಧಿತೋ ಮಯಾ ತ್ವಂ ಚ ಶ್ರೀಶೈಲೇಷು ಸರಿತ್ತಟೇ ।
ಲಲಾಭ ಜನ್ಮ ಸಾ ಶೈಲಕಾಂತಾಯಾಮಚಿರೇಣ ಚ ॥ ೮೮ ॥

ಕರೋತು ಪುಣ್ಯಕಂ ಸಾಧ್ವೀ ಸುವ್ರತಾ ಸುವ್ರತಂ ಶಿವಾ ।
ರಾಜಸೂಯಸಹಸ್ರಾಣಾಂ ಪುಣ್ಯಂ ಶಂಕರ ಪುಣ್ಯಕೇ ॥ ೮೯ ॥

ರಾಜಸೂಯಸಹಸ್ರಾಣಾಂ ವ್ರತೇ ಯತ್ರ ಧನವ್ಯಯಃ ।
ನ ಸಾಧ್ಯಂ ಸರ್ವಸಾಧ್ವೀನಾಂ ವ್ರತಮೇತತ್ತ್ರಿಲೋಚನ ॥ ೯೦ ॥

ಸ್ವಯಂ ಭೂತೇಶ ನಾಥಸ್ತ್ವಂ ಪುಣ್ಯಕಸ್ಯ ಪ್ರಭಾವತಃ ।
ಪಾರ್ವತೀಗರ್ಭಜಾತಶ್ಚ ವರಃ ಪುತ್ರೋ ಭವಿಷ್ಯತಿ ॥ ೯೧ ॥

---

೮೭. ಎಲೈ ಹರನೇ ಆಗ ನೀನು, ಅವಳ ಗುಣ ಮತ್ತು ರೂಪಗಳಿಗೆ ಆಶ್ರಯವಾದ ಶರೀರವನ್ನು ಹಿಡಿದುಕೊಂಡು ಅತಿದುಃಖಿತನಾಗಿ ಭಾರತದಲ್ಲಿ ಅಲೆದಾಡುತ್ತಿದ್ದೆ.

೮೮. ಆಗ ಶ್ರೀಶೈಲದ ತಪ್ಪಲಿನಲ್ಲಿ ಹರಿಯುತ್ತಿದ್ದ ಹೊಳೆಯ ದಡದಲ್ಲಿ ನಾನು ನಿನಗೆ ಈ ವಿಷಯವನ್ನು ಹೇಳಿದೆನು. ಅನಂತರ ಆ ಆದಿಶಕ್ತಿಯೂ ಕೂಡ ಪುನಃ ಹಿಮವಂತನ ಪತ್ನಿಯಾದ ಮೇನೆಯಲ್ಲಿ ಜನ್ಮವೆತ್ತಿದಳು.

೮೯. ಅಂಥ ಸಾಧ್ವೀಶಿರೋಮಣಿಯಾದ ಈ ಪಾರ್ವತಿಯು ವ್ರತನಿಷ್ಠಳಾದುದರಿಂದ ಪುಣ್ಯಕವೆಂಬ ವ್ರತವನ್ನಾಚರಿಸಲಿ. ಎಲೈ ಶಂಕರನೇ, ಆ ಪುಣ್ಯಕವ್ರತಾಚರಣೆಯಿಂದ ಸಾವಿರ ರಾಜಸೂಯಯಾಗ ಫಲವು ಲಭಿಸುವುದು.

೯೦. ಈ ವ್ರತದಲ್ಲಿ ಸಾವಿರ ರಾಜಸೂಯ ಯಾಗಕ್ಕೆ ಆಗುವ ಧನವು ವ್ಯಯವಾಗಬೇಕು. ಆದುದರಿಂದ ಎಲೈ ತ್ರಿನೇತ್ರನೇ ಈ ವ್ರತವು ಸಕಲ ಸಾಧ್ವೀಮಣಿಯರಿಗೂ ಸುಲಭಸಾಧ್ಯವಲ್ಲ. ಪಾರ್ವತಿಗೆ ಮಾತ್ರ ಸಾಧ್ಯವಾದ ವ್ರತವಿದು.

೯೧. ಈ ಪುಣ್ಯಕವ್ರತಾಚರಣೆಯ ಫಲವಾಗಿ ಭೂತಾಧಿನಾಥನಾದ ನೀನೇ ಪಾರ್ವತಿಯ ಗರ್ಭದಲ್ಲಿ ವರಪುತ್ರನಾಗಿ ಜನಿಸುವೆ.

ಸ್ವಯಂ ದೇವಗಣಾನಾಂ ಸ ಯಸ್ಮಾದೀಶಃ ಕೃಪಾನಿಧಿಃ ।
ಗಣೇಶ ಇತಿ ವಿಖ್ಯಾತೋ ಭವಿಷ್ಯತಿ ಜಗತ್ತ್ರಯೇ ॥ ೯೨ ॥

ಯಸ್ಯ ಸ್ಮರಣಮಾತ್ರೇಣ ವಿಘ್ನನಾಶೋ ಭವೇದ್ಧ್ರುವಂ ।
ಜಗತಾಂ ಹೇತುನಾನೇನ ವಿಘ್ನನಿಘ್ನಾಭಿದೋ ವಿಭುಃ ॥ ೯೩ ॥

ನಾನಾವಿಧಾನಿ ದ್ರವ್ಯಾಣಿ ಯಸ್ಮಾದ್ದೇಯಾನಿ ಪುಣ್ಯಕೇ ।
ಭುಕ್ತ್ವಾ ಲಂಬೋದರತ್ವಂ ಚ ತೇನ ಲಂಬೋದರಃ ಸ್ಮೃತಃ ॥ ೯೪ ॥

ಶನಿದೃಷ್ಟ್ಯಾ ಶಿರಚ್ಛೇದಾದ್ಗಜವಕ್ತ್ರೇಣ ಯೋಜಿತಃ ।
ಗಜಾನನಃ ಶಿಶುಸ್ತೇನ ಸರ್ವೇಷಾಂ ಸರ್ವಸಿದ್ಧಿದಃ ॥ ೯೫ ॥

ದಂತಭಂಗಃ ಪರಶುನಾ ಪರ್ಶುರಾಮಸ್ಯ ವೈ ಯತಃ ।
ಹೇತುನಾ ತೇನ ವಿಖ್ಯಾತಶ್ಚೈಕದಂತಾಭಿಧಃ ಶಿಶುಃ ॥ ೯೬ ॥

---

೯೨. ದಯಾಮಯನಾದ ಆ ಬಾಲಕನು ದೇವತೆಗಳ ಸಮೂಹಕ್ಕೆಲ್ಲ (ಗಣ) ಒಡೆಯನಾಗುವುದರಿಂದ ತ್ರಿಲೋಕದಲ್ಲೂ ಗಣೇಶನೆಂದು ವಿಖ್ಯಾತನಾಗುವನು.

೯೩. ಯಾವ ಗಣೇಶನನ್ನು ಸ್ಮರಿಸಿದಮಾತ್ರದಿಂದಲೇ ಜಗತ್ತಿನಲ್ಲಿರುವ ಸಕಲ ವಿಘ್ನಗಳೂ ನಾಶವಾಗುವುದರಿಂದ ಅವನಿಗೆ ವಿಘ್ನಸಂಹಾರಕ ಅಥವಾ ವಿಘ್ನೇಶನೆಂದೂ ಹೆಸರಾಗುವುದು.

೯೪. ಪುಣ್ಯಕವ್ರತದಲ್ಲಿ ಸಮರ್ಪಿಸಿದ ನಾನಾ ವಿಧ ವಸ್ತುಗಳನ್ನು ಸೇವಿಸಿ ದುದರ ಫಲವಾಗಿ ನೇತಾಡುವ ಹೊಟ್ಟೆಯುಳ್ಳವನಾಗುವುದರಿಂದಲೇ ಲಂಬೋದರ ನೆಂದೂ ಅವನನ್ನು ಕರೆಯುವರು.

೯೫. ಶನಿದೃಷ್ಟಿ ಬಿದ್ದು ತಲೆಯು ಕತ್ತರಿಸಿಹೋದಾಗ ಆನೆಯ ಮುಖವನ್ನು ತಂದು ಜೋಡಿಸುವುದರಿಂದ, ಸಕಲರ ಇಷ್ಟಾರ್ಥಸಿದ್ಧಿಯನ್ನು ಕೊಡುವ ಗಣೇಶ ನನ್ನು ಗಜಾನನನೆಂದೂ ಕರೆಯುವರು.

೯೬. ಪರಶುರಾಮನ ಕೊಡಲಿಯಿಂದ ಆ ಶಿಶುವಿನ ಒಂದು ದಂತವು ಭಂಗ ವಾಗುವುದರಿಂದ ಏಕದಂತನೆಂದೂ ಅವನು ವಿಖ್ಯಾತನಾಗುವನು.

ಪೂಜ್ಯಶ್ಚ ಸರ್ವದೇವಾನಾಮಸ್ಮಾಕಂ ಜಗತಾಂ ವಿಭುಃ ।
ಸರ್ವಾಗ್ರೇ ಪೂಜನಂ ತಸ್ಯ ಭವಿತಾ ಮದ್ವರೇಣ ವೈ ॥ ೯೭ ॥

ಪೂಜಾಸು ಸರ್ವದೇವಾನಾಮಗ್ರೇ ಸಂಪೂಜ್ಯ ತಂ ಜನಃ ।
ಪೂಜಾಫಲಮವಾಪ್ನೋತಿ ನಿರ್ವಿಘ್ನೇನ ವೃಥಾನ್ಯಥಾ ॥ ೯೮ ॥

ಗಣೇಶಂ ಚ ದಿನೇಶಂ ಚ ವಿಷ್ಣುಂ ಶಂಭುಂ ಹುತಾಶನಂ ।
ದುರ್ಗಾಮೇತಾನ್ಸನ್ನಿಷೇವ್ಯ ಪೂಜಯೇದ್ದೇವತಾಂತರಂ ॥ ೯೯ ॥

ಗಣೇಶಪೂಜನೇ ವಿಘ್ನಂ ನಿರ್ಮೂಲಂ ಜಗತಾಂ ಭವೇತ್ ।
ನಿವ್ಯಾಧಿಃ ಸೂರ್ಯಪೂಜಾಯಾಂ ಶುಚಿಃ ಶ್ರೀವಿಷ್ಣುಪೂಜನೇ ॥ ೧೦೦ ॥

---

೯೭. ನನ್ನ ವರದಿಂದ ಆ ಗಣಪತಿಯು ಸಕಲ ದೇವತೆಗಳಿಗೂ ಪೂಜ್ಯನಾಗಿ ಜಗತ್ತಿಗೆ ವಿಭುವೆನಿಸುವುದಲ್ಲದೆ ಎಲ್ಲ ಪೂಜೆಗಳಲ್ಲೂ ಆತನಿಗೆ ಅಗ್ರಪೂಜೆಯಾಗುವುದು.

೯೮. ಮನುಜನು ಯಾವ ದೇವತೆಗಳನ್ನು ಪೂಜಿಸಬೇಕಾದರೂ ಮೊದಲು ಗಣಪತಿಯನ್ನು ಪೂಜಿಸುವುದರಿಂದ ನಿರ್ವಿಘ್ನವಾಗಿ ಪೂಜೆಯ ಫಲವನ್ನು ಪಡೆಯುವನು. ಗಣಪತಿಯ ಪೂಜೆಯಿಲ್ಲದ ಇತರ ದೇವತಾಪೂಜೆಯು ನಿಷ್ಫಲವಾಗುವುದು.

೯೯. ಗಣೇಶ, ದಿನೇಶ (ಸೂರ್ಯ) ವಿಷ್ಣು, ಶಂಭು, ಅಗ್ನಿ ಮತ್ತು ದುರ್ಗಿ ಈ ದೇವತೆಗಳನ್ನು ಕ್ರಮವಾಗಿ ಪೂಜಿಸಿ ಅನಂತರ ಇತರ ದೇವತೆಗಳನ್ನು ಪೂಜಿಸಬೇಕು.

೧೦೦. ಗಣೇಶನನ್ನು ಪೂಜಿಸುವುದರಿಂದ ಮೂಲೋಕದ ವಿಘ್ನವೂ ನಿರ್ಮೂಲವಾಗುವುದು. ಸೂರ್ಯನಪೂಜೆಯಿಂದ ರೋಗನಾಶವೂ, ವಿಷ್ಣುಪೂಜೆಯಿಂದ ಆತ್ಮಶುದ್ಧಿಯೂ ಉಂಟಾಗುವುದು.

ಮೋಕ್ಷಶ್ಚ ಪಾಪನಾಶಶ್ಚ ಯಶಶ್ಚೈಶ್ವರ್ಯಮುತ್ತಮಂ ।
ತತ್ವಜ್ಞಾನಂ ಸುತೃಪ್ತೀನಾಂ ಬೀಜಂ ಶಂಕರಪೂಜನಾತ್ ॥ ೧೦೧ ॥

ಸ್ವಬುದ್ಧಿ ಶುದ್ಧಿ ಜನನಂ ಕೀರ್ತಿತಂ ವಹ್ನಿಪೂಜನಂ ।
ವಿಧಿಸಂಸ್ಕೃತವಹ್ನೇಸ್ತು ಪೂಜಾತೋ ಜ್ಞಾನತೋ ಮೃತಿಃ ॥ ೧೦೨ ॥

ದಾತಾ ಭೋಕ್ತಾ ಚ ಭವತಿ ಶಂಕರಾಗ್ನಿ ನಿಷೇವಣಾತ್ ।
ಹರಿಭಕ್ತಿಪ್ರದಂ ಚೈವ ಪರಂ ದುರ್ಗಾರ್ಚನಂ ಶಿವಂ ॥ ೧೦೩ ॥

ವಿಪರೀತಂ ತ್ರಿಜಗತಾಮೇತೇಷಾಂ ಪೂಜನಂ ವಿನಾ ।
ಏವಂ ಕ್ರಮೋ ಮಹಾದೇವ ಕಲ್ಪೇ ಕಲ್ಪೇsಸ್ತಿ ನಿಶ್ಚಿತಂ ॥ ೧೦೪ ॥

---

೧೦೧. ಮೋಕ್ಷವೂ, ಪಾಪನಾಶವೂ, ಕೀರ್ತಿಯೂ, ಅತುಲೈಶ್ವರ್ಯವೂ, ತತ್ವಜ್ಞಾನವೂ ಶಂಕರನ ಪೂಜೆಯಿಂದ ಲಭಿಸುವುದು. ಶಂಕರನ ಪೂಜೆಯು ತೃಪ್ತಿಗೆ ಮೂಲಕಾರಣವು.

೧೦೨. ಅಗ್ನಿಪೂಜೆಯಿಂದ ಮಲಿನವಾದ ಬುದ್ಧಿಯು ಶುದ್ಧಿಯಾಗುವುದು. ವಿಧ್ಯುಕ್ತವಾಗಿ ಸಂಸ್ಕಾರಮಾಡಿದ ಅಗ್ನಿಯನ್ನು ಪೂಜಿಸುವುದರಿಂದ ದಿವ್ಯಜ್ಞಾನವನ್ನು ಪಡೆದು ಮುಕ್ತಿ ಹೊಂದಬಹುದು.

೧೦೩. ಶಂಕರ ಮತ್ತು ಅಗ್ನಿದೇವರನ್ನು ಸೇವೆಮಾಡುವ ಮನುಜನು ದಾನಿಯೂ ಭೋಗಿಯೂ ಆಗುವನು. ಮಂಗಳಕರಳಾದ ದುರ್ಗಾದೇವಿಯನ್ನು ಅರ್ಚನೆಮಾಡಿ ಶ್ರೀಹರಿಯಲ್ಲಿ ಭಕ್ತಿಯನ್ನು ಹೊಂದಬಹುದು.

೧೦೪. ಮೇಲೆ ಹೇಳಿದ ದೇವತೆಗಳನ್ನು ಪೂಜಿಸದೆ, ಇತರ ದೇವತೆಗಳನ್ನು ಪೂಜಿಸುವುದು ಮೂರುಲೋಕಕ್ಕೂ ವಿರುದ್ಧವಾದುದು. ಎಲೈ ಮಹಾದೇವನೇ, ಈ ಪೂಜಾಕ್ರಮವು ಪ್ರತಿಕಲ್ಪದಲ್ಲಿಯೂ ಒಂದೇರೀತಿಯಾಗಿರುವುದು.

ಏತೇ ಶಶ್ವದ್ವಿದ್ಯಮಾನಾ ನಿತ್ಯಾಃ ಸೃಷ್ಟಿಪರಾಯಣಾಃ ।
ಆವಿರ್ಭಾವತಿರೋಭಾವೌ ಚೈತೇಷಾಮೀಶ್ವರೇಚ್ಛಯಾ ॥ ೧೦೫ ॥

ಇತ್ಯುಕ್ತ್ವಾ ಶ್ರೀಹರಿಸ್ತತ್ರ ವಿರರಾಮ ಸಭಾತಲೇ ।
ಪ್ರಹೃಷ್ಟಾ ದೇವತಾ ವಿಪ್ರಾಃ ಪಾರ್ವತ್ಯಾ ಸಹ ಶಂಕರಃ ॥ ೧೦೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ವ್ರತಾಜ್ಞಾಗ್ರಹಣಂ ನಾಮ
ಷಷ್ಠೋಽಧ್ಯಾಯಃ

೧೦೫. ಈ ದೇವತೆಗಳೆಲ್ಲರೂ ನಿತ್ಯರಾಗಿದ್ದುಕೊಂಡು ಸೃಷ್ಟ್ಯಾದಿ ಕಾರ್ಯದಲ್ಲಿ ಆಸಕ್ತರಾಗಿರುವರು. ಶ್ರೀಕೃಷ್ಣಪರಮಾತ್ಮನ ಇಚ್ಛೆಯಿಂದ ಅವರೆಲ್ಲರ ಆವಿರ್ಭಾವ ಮತ್ತು ತಿರೋಭಾವಗಳುಂಟಾಗುವುವು.

೧೦೬. ಈ ರೀತಿಯಾಗಿ ನುಡಿದು ಆ ಸಭೆಯಲ್ಲಿ ವಿಷ್ಣುವು ಮೌನದಿಂದಿರಲು. ಅಲ್ಲಿದ್ದ ದೇವತೆಗಳು, ಬ್ರಾಹ್ಮಣರು ಮತ್ತು ಶಿವಪಾರ್ವತಿಯರೂ ಸಂತುಷ್ಟರಾದರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ವ್ರತಾಜ್ಞಾಸ್ವೀಕರಣರೂಪವಾದ
ಆರನೆಯ ಅಧ್ಯಾಯವು ಮುಗಿದುದು



## ಆರನೆಯ ಅಧ್ಯಾಯದ ಸಾರಾಂಶ

---

ಪುಣ್ಯಕವ್ರತವನ್ನಾಚರಿಸಬೇಕೆಂದು ಪಾರ್ವತಿಗೆ ತಿಳಿಸಿ ಪರಮೇಶ್ವರನು ತಪ್ತೋನಿರತನಾದನು. ಇತ್ತ ಪಾರ್ವತಿಯು ಸೇವಕರಿಂದ ವ್ರತೋಪಯುಕ್ತವಾದ ಸಕಲ ಸಂಭಾರಗಳನ್ನೂ ಸಿದ್ಧಪಡಿಸಿಕೊಂಡು, ವ್ರತಕ್ಕೆ ಬರಬೇಕೆಂದು ಎಲ್ಲ ದೇವತೆಗಳಿಗೂ ಆಹ್ವಾನವಿತ್ತು, ಬ್ರಹ್ಮಪುತ್ರನಾದ ಸನತ್ಕುಮಾರನನ್ನು ಪುರೋಹಿತನಾಗಬೇಕೆಂದು ಪ್ರಾರ್ಥಿಸಿ, ವ್ರತಾಚರಣೆಗೆ ಸಿದ್ಧಳಾದಳು ಇತ್ತ ತನ್ನ ಪ್ರೇಯಸಿಯು ಮಾಡುವ ವ್ರತಕ್ಕೆ ಸಕಲ ದೇವತೆಗಳೂ ಬಂದಿರುವುದನ್ನು ತಿಳಿದು ಪರಮೇಶ್ವರನು ಅಲ್ಲಿಗೆ ಬಂದು ಎಲ್ಲರನ್ನೂ ಯೋಗ್ಯತಾನುಸಾರವಾಗಿ ಸತ್ಕರಿಸಿ, ಕ್ಷೀರೋದಶಾಯಿಯಾದ ಮಹಾವಿಷ್ಣುವನ್ನು ಕುರಿತು ತನ್ನ ಪ್ರೇಯಸಿಯ ಅಭೀಷ್ಟವನ್ನು ವಿಜ್ಞಾಪಿಸಿಕೊಂಡನು. ಆಗ ಮಹಾವಿಷ್ಣುವು ಪುಣ್ಯಕವ್ರತದ ಮಾಹಾತ್ಮ್ಯವನ್ನು ವರ್ಣಿಸಿ, ಮನುಜಸಾಮಾನ್ಯರಿಗೆ ದುರ್ಲಭವಾದ ವಿಷ್ಣುಭಕ್ತಿಯು ಪಾರ್ವತಿಗೆ ಉದಯಿಸಿರುವುದರಿಂದ ಪಾರ್ವತಿಯು ವ್ರತವನ್ನಾಚರಿಸಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರಳಾಗಿ ಸತ್ಪುತ್ರನನ್ನು ಪಡೆಯಲೆಂದೂ, ಆ ಸುಪುತ್ರನೇ ಮುಂದೆ ಗಣಪತಿ, ವಿಘ್ನೇಶ ಮುಂತಾದ ದಿವ್ಯನಾಮಗಳಿಂದ ಪ್ರಖ್ಯಾತನಾಗಲೆಂದೂ ಹರಸಿದನು.



ಆಮ್ರಪಲ್ಲವಸಂಯುಕ್ತಂ ಫಲಾಕ್ಷತಸುಶೋಭಿತಂ ।
ಚಂದನಾಗರುಕಸ್ತೂರೀ ಕುಂಕುಮೇನ ವಿರಾಜಿತಂ ॥ ೪ ॥

ರತ್ನಾಸನಸ್ಥಾ ರತ್ನಾಢ್ಯಾ ರತ್ನೋದ್ಭವಸುತಾ ಸತೀ ।
ರತ್ನಸಿಂಹಾಸನಸ್ಥಾಂಶ್ಚ ಸಂಪೂಜ್ಯ ಮುನಿಪುಂಗವಾನ್ ॥ ೫ ॥

ರತ್ನಸಿಂಹಾಸನಸ್ಥಂ ಚ ಸಂಪೂಜ್ಯ ಸುಪುರೋಹಿತಂ ।
ಚಂದನಾಗರುಕಸ್ತೂರೀರತ್ನಭೂಷಣಭೂಷಿತಂ ॥ ೬ ॥

ಸಂಸ್ಥಾಪ್ಯ ಪುರತೋ ಭಕ್ತ್ಯಾ ದಿಕ್ಪಾಲಾನ್ರತ್ನಭೂಷಿತಾನ್ ।
ದೇವಾನ್ನರಾಂಶ್ಚ ನಾಗಾಂಶ್ಚ ಸಮರ್ಚ್ಯ ವಿಧಿಬೋಧಿತಂ ॥ ೭ ॥

ಸಮರ್ಚ್ಯ ಪರಯಾ ಭಕ್ತ್ಯಾ ಬ್ರಹ್ಮವಿಷ್ಣುಮಹೇಶ್ವರಾನ್ ।
ಚಂದನಾಗರುಕಸ್ತೂರೀಕುಂಕುಮೇನ ವಿರಾಜಿತಾನ್ ॥ ೮ ॥

---

೪. ಅದರ ಮೇಲೆ ಮಾವಿನ ಚಿಗುರುಗಳನ್ನೂ ತೆಂಗಿನಕಾಯನ್ನೂ ಅಕ್ಷತೆಯನ್ನೂ ಇಟ್ಟು ಚಂದನ, ಅಗುರು, ಕಸ್ತೂರಿ ಮತ್ತು ಕುಂಕುಮಕೇಸರಿಗಳಿಂದ ಆ ಕಲಶವನ್ನು ಅಲಂಕರಿಸಿದಳು.

೫. ರತ್ನಭೂಷಣವನ್ನು ತೊಟ್ಟು ರತ್ನಾಸನದಲ್ಲಿ ಕುಳಿತಿರುವ ರತ್ನೋದ್ಭವನ (ಹಿಮವಂತನ) ಸುತೆಯಾದ ಆ ಪಾರ್ವತಿಯು ರತ್ನಪೀಠದಲ್ಲಿ ಮಂಡಿಸಿರುವ ಮುನಿಶ್ರೇಷ್ಠರನ್ನೆಲ್ಲ ಪೂಜಿಸಿದಳು.

೬. ಅನಂತರ ಪುರೋಹಿತನನ್ನು ರತ್ನಪೀಠದಲ್ಲಿ ಕುಳ್ಳಿರಿಸಿ, ಚಂದನ, ಅಗುರು, ಕಸ್ತೂರಿ, ಮುಂತಾದ ಸುಗಂಧ ದ್ರವ್ಯಗಳನ್ನೂ ರತ್ನಭೂಷಣಗಳನ್ನೂ ಅವನಿಗೆ ಸಮರ್ಪಿಸಿದಳು.

೭. ದಿಕ್ಪಾಲಕರಿಗೆಲ್ಲ ರತ್ನಾಭರಣಗಳನ್ನು ಕೊಟ್ಟು ಮುಂದೆ ಕುಳ್ಳಿರಿಸಿ ಅನಂತರ ದೇವತೆಗಳನ್ನೂ ಮನುಜರನ್ನೂ, ನಾಗರನ್ನೂ ವಿಧಿಪೂರ್ವಕವಾಗಿ ಪೂಜಿಸಿದಳು.

೮–೮. ಬ್ರಹ್ಮವಿಷ್ಣುಮಹೇಶ್ವರರನ್ನೂ ಚಂದನ, ಅಗುರು, ಕಸ್ತೂರಿಯೇ ಮುಂತಾದ ಸುಗಂಧ ದ್ರವ್ಯದಿಂದಲೂ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರ

॥ ಓಂ ॥

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ಸಪ್ತಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಹರೇರಾಜ್ಞಾಂ ಸಮಾದಾಯ ಹರಃ ಸಂಹೃಷ್ಟಮಾನಸಃ ।
ಉವಾಚ ಪಾರ್ವತೀಂ ಪ್ರೀತ್ಯಾ ಹರಿಸಂಲಾಪಮಂಗಲಂ ॥ ೧ ॥

ಶಿವಾಜ್ಞಾಂ ಚ ಸಮಾದಾಯ ಶಿವಾ ಸಂಹೃಷ್ಟಮಾನಸಾ ।
ವಾದ್ಯಂ ಚ ವಾದಯಾಮಾಸ ಮಂಗಲಂ ಮಂಗಲವ್ರತೇ ॥ ೨ ॥

ಸುಸ್ನಾತಾ ಸುದತೀ ಶುದ್ಧಾ ಬಿಭ್ರತೀ ಧೌತವಾಸಸೀ ।
ಸಂಸ್ಥಾಪ್ಯ ರತ್ನಕಲಶಂ ಶುಕ್ಲಧಾನ್ಯೋಪರಿ ಸ್ಥಿತಂ ॥ ೩ ॥

### ಏಳನೆಯ ಅಧ್ಯಾಯವು

೧. ನಾರಾಯಣಃ- ಇಂತು ಶ್ರೀಹರಿಯ ಆಜ್ಞೆಯನ್ನು ಸ್ವೀಕರಿಸಿ ಸಂತುಷ್ಟನಾದ ಶಂಕರನು ಪಾರ್ವತಿಯನ್ನು ಕುರಿತು ಮಂಗಳಕರವಾದ ಶ್ರೀಹರಿಯ ಆಜ್ಞಾವಚನವನ್ನು ಹೇಳಿದನು.

೨. ಶಿವನ ಅಪ್ಪಣೆಯನ್ನು ಪಡೆದ ಪಾರ್ವತಿಯೂ ಕೂಡ ಸಂತೋಷಗೊಂಡು ಆ ಮಂಗಳಕರವಾದ ಪುಣ್ಯಕವ್ರತಾರಂಭದಲ್ಲಿ ಮಂಗಳವಾದ್ಯಗಳನ್ನು ಮಾಡಿಸಿದಳು.

೩. ಅನಂತರ ಆ ಸುಂದರಿಯು ಶುದ್ಧಸ್ನಾನಮಾಡಿ ಶುಭ್ರವಾದ ಎರಡು ಬಟ್ಟೆಗಳನ್ನು ಧರಿಸಿ ಬಿಳಿಧಾನ್ಯದ ಮೇಲೆ ರತ್ನಕಲಶವನ್ನು ಸ್ಥಾಪನೆಮಾಡಿದಳು.

ದತ್ವಾ ದ್ರವ್ಯಾಣಿ ಸರ್ವಾಣಿ ವೇದಮಂತ್ರೇಣ ಸಾ ಸತೀ ।
ಹೋಮಂ ಚ ಕಾರಯಾಮಾಸ ತ್ರಿಲಕ್ಷಂ ತಿಲಸರ್ಪಿಷಾ ।
ಬ್ರಾಹ್ಮಣಾನ್ಭೋಜಯಾಮಾಸ ಪೂಜಯಿತ್ವಾತಿಥೀಂಸ್ತಥಾ ॥ ೧೩ ॥

ಭೋಜಯಾಮಾಸ ಸಾ ದೇವೀ ಸುವ್ರತೇ ಸುವ್ರತಾ ಸತೀ ।
ಪ್ರತ್ಯಹಂ ಸವಿಧಾನಂ ಚ ಚಕ್ರೇ ಸಾ ಪೂರ್ಣವತ್ಸರಂ ॥ ೧೪ ॥

ಸಮಾಪ್ತಿದಿವಸೇ ವಿಪ್ರಸ್ತಾಮುವಾಚ ಪುರೋಹಿತಃ ।
ಸುವ್ರತೇ ಸುವ್ರತೇ ಮಹ್ಯಂ ದೇಹಿ ತ್ವಂ ಪತಿದಕ್ಷಿಣಾಂ ॥ ೧೫ ॥

ಇತಿ ತದ್ವಚನಂ ಶ್ರುತ್ವಾ ವಿಲಪ್ಯ ಸುರಸಂಸದಿ ।
ಮೂರ್ಛಾಂ ಪ್ರಾಪ ಮಹಾಮಾಯಾ ಮಾಯಾಮೋಹಿತಚೇತಸಾ ॥ ೧೬ ॥

ತಾಂ ಚ ತೇ ಮೂರ್ಛಿತಾಂ ದೃಷ್ಟ್ವಾ ಪ್ರಹಸ್ಯ ಮುನಿಪುಂಗವಾಃ ।
ಶಂಕರಂ ಪ್ರೇಷಯಾಮಾಸ ಬ್ರಹ್ಮಾವಿಷ್ಣುಶ್ಚ ನಾರದ ॥ ೧೭ ॥

---

೧೩. ವೇದಮಂತ್ರಪೂರ್ವಕವಾಗಿ ಸಕಲ ದ್ರವ್ಯಗಳನ್ನೂ ದಾನಮಾಡಿ, ಎಳ್ಳು ಮತ್ತು ಹಿಟ್ಟಿನಿಂದ ಮೂರು ಲಕ್ಷ ಹೋಮಮಾಡಿಸಿ, ಬಂದ ಅತಿಥಿಗಳನ್ನೂ ಬ್ರಾಹ್ಮಣರನ್ನೂ ಪೂಜಿಸಿ, ಊಟಮಾಡಿಸಿದಳು.

೧೪. ಇಂತು ಆ ಪಾರ್ವತಿಯು ಒಂದು ವರ್ಷಪರ್ಯಂತವಾಗಿ ಪ್ರತಿದಿನವೂ ವಿಧಿಪೂರ್ವಕವಾಗಿ ವ್ರತಮಾಡಿ ಬ್ರಾಹ್ಮಣಸಂತರ್ಪಣೆ ಮಾಡಿದಳು.

೧೫. ವ್ರತಸಮಾಪ್ತಿಯ ದಿವಸ ಪುರೋಹಿತನಾದ ಸನತ್ಕುಮಾರನು, ಪಾರ್ವತಿಯನ್ನು ಕುರಿತು "ಎಲೌ ಸುವ್ರತೆಯೇ, ಈ ಪುಣ್ಯಕವ್ರತವನ್ನು ಮಾಡಿಸಿದ ನನಗೆ ನಿನ್ನ ಪತಿಯನ್ನೇ ದಕ್ಷಿಣೆಯನ್ನಾಗಿ ಕೊಡು ಎಂದು ಕೇಳಿದನು.

೧೬. ಸನತ್ಕುಮಾರನ ಈ ನುಡಿಯನ್ನು ಕೇಳಿದಕೂಡಲೇ ಮಹಾಮಾಯಾ ರೂಪಿಣಿಯಾದ ಆ ಪಾರ್ವತಿಯು ದೇವತೆಗಳ ಮುಂದೆ ಗೋಳಾಡಿ ಭ್ರಾಂತಚಿತ್ತಳಾಗಿ ಮೂರ್ಛೆಗೊಂಡಳು.

೧೭. ಎಲೈ ನಾರದನೇ, ಪಾರ್ವತಿಯು ಇಂತು ಮೂರ್ಛೆಗೊಂಡುದನ್ನು ಕಂಡು, ಅಲ್ಲಿದ್ದ ಮುನಿಶ್ರೇಷ್ಠರೂ, ಬ್ರಹ್ಮವಿಷ್ಣುಗಳೂ ಅವಳನ್ನು ಸಂತೈಸಲು ಶಂಕರನನ್ನು ಕಳುಹಿಸಿದರು.

ವಹ್ನಿಶುದ್ಧೈಸ್ಸುವಸ್ತ್ರೈಶ್ಚ ಸದ್ರತ್ನೈರ್ಭೂಷಣೈಸ್ತಥಾ ।
ಪೂಜಾದ್ರವ್ಯೈಶ್ಚ ವಿವಿಧೈಃ ಪೂಜಿತಾನ್ ಪುಣ್ಯಕೇ ಮುನೇ ।
ಸಮಾರೇಭೇ ವ್ರತಂ ದೇವೀ ಸ್ವಸ್ತಿವಾಚನಪೂರ್ವಕಂ ॥ ೯ ॥

ಆವಾಹ್ಯಾಭೀಷ್ಟದೇವಂ ತಂ ಶ್ರೀಕೃಷ್ಣಂ ಮಂಗಲೇ ಘಟೇ ।
ಭಕ್ತ್ಯಾ ದದೌ ಕ್ರಮೇಣೈವ ಚೋಪಚಾರಾಂಸ್ತು ಷೋಡಶ ॥ ೧೦ ॥

ಯಾನಿ ವ್ರತೇ ವಿಧೇಯಾನಿ ದೇಯಾನಿ ವಿವಿಧಾನಿ ಚ ।
ಪ್ರದದೌ ತಾನಿ ಸರ್ವಾಣಿ ಪ್ರತ್ಯೇಕಂ ಫಲದಾನಿ ಚ ॥ ೧೧ ॥

ವ್ರತೋಕ್ತಮುಪಹಾರಂ ಚ ದುರ್ಲಭಂ ಭುವನತ್ರಯೇ ।
ತಚ್ಚ ಸರ್ವಂ ದದೌ ಭಕ್ತ್ಯಾ ಸುವ್ರತೇ ಸುವ್ರತಾ ಸತೀ ॥ ೧೨ ॥

---

ಗಳಿಂದಲೂ, ರತ್ನಭೂಷಣಗಳಿಂದಲೂ, ವಿವಿಧ ಪೂಜಾದ್ರವ್ಯಗಳಿಂದಲೂ ಪರಮ ಭಕ್ತಿಯಿಂದ ಪೂಜಿಸಿ ಪಾರ್ವತಿಯು ಮಂಗಳಾಚರಣೆ ಪೂರ್ವಕವಾಗಿ ಪುಣ್ಯಕವ್ರತವನ್ನಾರಂಭಿಸಿದಳು.

೧೦. ಮಂಗಳಕಲಶದಲ್ಲಿ ತನ್ನ ಅಭೀಷ್ಟದೇವತೆಯಾದ ಶ್ರೀಕೃಷ್ಣಪರಮಾತ್ಮನನ್ನು ಆವಾಹನೆಮಾಡಿ ಭಕ್ತಿಯಿಂದ ಕ್ರಮವಾಗಿ ಷೋಡಶೋಪಚಾರಗಳನ್ನು ಸಮರ್ಪಿಸಿದಳು

೧೧. ವ್ರತವಿಧಿಯನ್ನು ಸ್ವಲ್ಪವೂ ಬಿಡದಂತೆ ಆಚರಿಸಿ, ಪ್ರತ್ಯೇಕವಾಗಿ ಫಲವನ್ನು ಕೊಡುವ ವಿವಿಧ ವಸ್ತುಗಳನ್ನು ದಾನಮಾಡಿದಳು.

೧೨. ವ್ರತನಿಷ್ಠಳಾದ ಪಾರ್ವತಿಯು ಭುವನತ್ರಯದಲ್ಲಿ ದುರ್ಲಭವಾದ ವ್ರತೋಕ್ತವಾದ ಉಪಹಾರಗಳನ್ನು ಪ್ರಯತ್ನಪೂರ್ವಕವಾಗಿ ತರಿಸಿ ಭಕ್ತಿಪೂರ್ವಕವಾಗಿ ದಾನಮಾಡಿದಳು.

ಸಂಪ್ರಾರ್ಥಿತಃ ಸಭಾಸದ್ಭಿಃ ಶಿವಾಂ ಬೋಧಯಿತುಂ ತದಾ ।
ಶಿವಃ ಸಮುದ್ಯಮಂ ಚಕ್ರೇ ಪ್ರವಕ್ತುಂ ವದತಾಂ ವರಃ ॥ ೧೮ ॥

॥ ಶ್ರೀ ಮಹಾದೇವ ಉವಾಚ ॥

ಉತ್ತಿಷ್ಠ ಭದ್ರೇ ಭದ್ರಂ ತೇ ಭವಿಷ್ಯತಿ ನ ಸಂಶಯಃ ।
ಸಾಂಪ್ರತಂ ಚೇತನಂ ಕೃತ್ವಾ ಮದೀಯಂ ವಚನಂ ಶೃಣು ॥ ೧೯ ॥

ಶಿವಃ ಶಿವಾಂ ತಾಮಿತ್ಯುಕ್ತ್ವಾ ಶುಷ್ಕಕಂಠೌಷ್ಠತಾಲುಕಾಂ ।
ವಕ್ಷಸಿ ಸ್ಥಾಪಯಾಮಾಸ ಕಾರಯಾಮಾಸ ಚೇತನಾಂ ॥ ೨೦ ॥

ಹಿತಂ ಸತ್ಯಂ ಮಿತಂ ಸರ್ವಂ ಪರಿಣಾಮಸುಖಾವಹಂ ।
ಯಶಸ್ಕರಂ ಚ ಫಲದಂ ಪ್ರವಕ್ತುಮುಪಚಕ್ರಮೇ ॥ ೨೧ ॥

ಶೃಣು ದೇವಿ ಪ್ರವಕ್ಷ್ಯಾಮಿ ಯದ್ವೇದೇ ನ ನಿರೂಪಿತಂ ।
ಸರ್ವಸಮ್ಮತಮಿಷ್ಟಂ ಚ ಧರ್ಮಾರ್ಥಂ ಧರ್ಮಸಂಸದಿ ॥ ೨೨ ॥

೧೮. ಪಾರ್ವತಿಯನ್ನು ಎಚ್ಚರಿಸಬೇಕೆಂದು ಸಭಾಸದರೆಲ್ಲರೂ ತನ್ನನ್ನು ಪ್ರಾರ್ಥಿಸಲು ಆಗ ಶಂಕರನು ಎದ್ದು ಅವಳ ಸಮೀಪಕ್ಕೆ ಹೋಗಿ ಯುಕ್ತಿಪೂರ್ವಕವಾಗಿ ಸಾಂತ್ವನಗೊಳಿಸಲಾರಂಭಿಸಿದನು.

೧೯. ಶ್ರೀ ಮಹಾದೇವ:—ಎಲೌ ಮಂಗಳಾಂಗಿಯೇ ನಿನಗೆ ಮಂಗಳವುಂಟಾಗುವುದು. ಸಂಶಯವಿಲ್ಲ. ಎಚ್ಚೆತ್ತು ನಾನು ಹೇಳುವ ಮಾತುಗಳನ್ನು ಆಲಿಸು.

೨೦. ಒಣಗಿದ ಗಂಟಲು ಮತ್ತು ತುಟಿಗಳುಳ್ಳ ಆ ಪಾರ್ವತಿಯನ್ನು ಶಿವನು ಇಂತು ಸಮಾಧಾನಗೊಳಿಸಿ ತನ್ನ ವಕ್ಷಃಸ್ಥಲದಲ್ಲಿ ಆಲಿಂಗಿಸಿಕೊಂಡು ಚೇತನಗೊಳಿಸಿದನು.

೨೧. ಹಿತಮಿತವೂ, ಪರಿಣಾಮಸುಖಕರವೂ, ಸತ್ಯವೂ, ಕೀರ್ತಿಕರವೂ, ಸತ್ಫಲದಾಯಕವೂ ಆದ ಮಾತನ್ನು ಶಂಕರನು ಪಾರ್ವತಿಗೆ ಹೇಳಲಾರಂಭಿಸಿದನು.

೨೨. ಎಲೌ ದೇವಿಯೇ, ವೇದನಿರೂಪಿತವೂ, ಸರ್ವಸಮ್ಮತವೂ ನಿನಗೆ ಇಷ್ಟವೂ ಆದ ಧರ್ಮದ ಅರ್ಥವನ್ನು ಈ ಧರ್ಮಿಷ್ಠರ ಸಭೆಯಲ್ಲಿ ಹೇಳುವೆನು. ಕೇಳು.

ಸರ್ವೇಷಾಂ ಕರ್ಮಣಾಂ ದೇವಿ ಸಾರಭೂತಾ ಚ ದಕ್ಷಿಣಾ ।
ಯಶೋದಾ ಫಲದಾ ನಿತ್ಯಂ ಧರ್ಮಿಷ್ಠೇ ಧರ್ಮಕರ್ಮಣಿ ॥ ೨೩ ॥

ದೈವಂ ವಾ ಪೈತೃಕಂ ವಾಪಿ ನಿತ್ಯಂ ನೈಮಿತ್ತಿಕಂ ಪ್ರಿಯೇ ।
ಯತ್ಕರ್ಮ ದಕ್ಷಿಣಾಹೀನಂ ತತ್ಸರ್ವಂ ನಿಷ್ಫಲಂ ಭವೇತ್ ।
ದಾತಾ ಚ ಕರ್ಮಣಾ ತೇನ ಕಾಲಸೂತ್ರಂ ವ್ರಜೇದ್ಧ್ರುವಂ ॥ ೨೪ ॥

ಅಥಾನ್ತೇ ದೈನ್ಯಮಾಪ್ನೋತಿ ಶತ್ರುಣಾ ಪರಿಪೀಡಿತಃ ।
ದಕ್ಷಿಣಾ ವಿಪ್ರಮುದ್ದಿಶ್ಯ ತತ್ಕಾಲಂ ತು ನ ದೀಯತೇ ॥ ೨೫ ॥

ತನ್ಮುಹೂರ್ತೇ ವ್ಯತೀತೇ ತು ದಕ್ಷಿಣಾ ದ್ವಿಗುಣಾ ಭವೇತ್ ।
ಚತುರ್ಗುಣಾ ದಿನಾತೀತೇ ಪಕ್ಷೇ ಶತಗುಣಾ ಭವೇತ್ ॥ ೨೬ ॥

ಮಾಸೇ ಪಂಚಶತಘ್ನಾ ಸ್ಯಾಚ್ಷಣ್ಮಾಸೇ ತಚ್ಚತುರ್ಗುಣಾ ।
ಸಂವತ್ಸರೇ ವ್ಯತೀತೇ ತು ಕರ್ಮ ತನ್ನಿಷ್ಫಲಂ ಭವೇತ್ ॥ ೨೭ ॥

೨೩. ಎಲೌ ಧರ್ಮಿಷ್ಠಳೇ, ಧಾರ್ಮಿಕವಾದ ಸಕಲ ಕರ್ಮಗಳಲ್ಲಿಯೂ, ದಕ್ಷಿಣೆಯು ಸಾರಭೂತವೂ, ಕೀರ್ತಿ ಮತ್ತು ಸತ್ಫಲದಾಯಕವೂ ಆಗುವುದು.

೨೪–೨೫. ಪ್ರಿಯಳೇ, ದೇವಪಿತೃಕಾರ್ಯಗಳಾಗಲೀ, ನಿತ್ಯನೈಮಿತ್ತಿಕ ಕರ್ಮಗಳಾಗಲೀ, ದಕ್ಷಿಣಾರಹಿತವಾದರೆ ಮಾಡಿದ್ದೆಲ್ಲವೂ ವ್ಯರ್ಥವಾಗುವುದಲ್ಲದ ಕರ್ಮಮಾಡಿದವನೂ ಕೂಡ ಕಾಲಸೂತ್ರವೆಂಬನರಕಕ್ಕೆ ನಿಶ್ಚಯವಾಗಿಯೂ ಹೋಗುವನು. ಅಲ್ಲಿ ಕಾಲನ ದೂತರಿಂದ ಪೀಡಿತನಾಗಿ ದೈನ್ಯಾವಸ್ಥೆಯನ್ನು ಹೊಂದುವನು

೨೬. ಬ್ರಾಹ್ಮಣನನ್ನು ಉದ್ದೇಶಿಸಿ ಕೊಡಬೇಕೆಂದ ದಕ್ಷಿಣೆಯನ್ನು ಆ ಕೂಡಲೇ ಕೊಡದಿದ್ದರೆ ಒಂದು ಮುಹೂರ್ತ ಕಳೆದನಂತರ ಅದರ ಎರಡರಷ್ಟನ್ನೂ ಒಂದು ದಿನ ಕಳೆದರೆ ನಾಲ್ಕರಷ್ಟನ್ನೂ, ಒಂದು ಪಕ್ಷ ಕಳೆದರೆ ನೂರರಷ್ಟನ್ನೂ ದಕ್ಷಿಣೆಯಾಗಿ ಕೊಡಬೇಕು

೨೭. ಒಂದು ತಿಂಗಳು ಕಳೆದನಂತರ ಐನೂರರಷ್ಟು ದಕ್ಷಿಣೆಯನ್ನೂ, ಆರು ತಿಂಗಳು ಕಳೆದರೆ ಅದರ ನಾಲ್ಕರಷ್ಟು (ಎರಡು ಸಾವಿರದಷ್ಟು) ದಕ್ಷಿಣೆಯನ್ನೂ ಕೊಡ

ದಾತಾ ಚ ನರಕಂ ಯಾತಿ ಯಾವದ್ವರ್ಷಸಹಸ್ರಕಂ ।
ಪುತ್ರಪೌತ್ರಧನೈಶ್ವರ್ಯೈಃ ಕ್ಷಯಮಾಪ್ನೋತಿ ಪಾತಕಾತ್ ।
ಧರ್ಮೋ ನಷ್ಟೋ ಭವೇತ್ತಸ್ಯ ಧರ್ಮಹೀನೇ ಚ ಕರ್ಮಣಿ ॥ ೨೮ ॥

॥ ಶ್ರೀ ವಿಷ್ಣುರುವಾಚ ॥

ರಕ್ಷಸ್ವ ಧರ್ಮಂ ಧರ್ಮಿಷ್ಠೇ ಧರ್ಮಜ್ಞೇ ಧರ್ಮಕರ್ಮಣಿ ।
ಸರ್ವೇಷಾಂ ಚ ಭವೇದ್ರಕ್ಷಾ ಸ್ವಧರ್ಮಪರಿಪಾಲನೇ ॥ ೨೯ ॥

॥ ಬ್ರಹ್ಮೋವಾಚ ॥

ಯಶ್ಚ ಕೇನ ನಿಮಿತ್ತೇನ ನ ಧರ್ಮಂ ಪರಿರಕ್ಷತಿ ।
ಧರ್ಮೋ ನಷ್ಟೋ ಚ ಧರ್ಮಜ್ಞೇ ತಸ್ಯ ಕರ್ತಾ ವಿನಶ್ಯತಿ ॥ ೩೦ ॥

ಬೇಕು. ದಕ್ಷಿಣೆಯನ್ನು ಕೊಡದೆ ಒಂದು ವರ್ಷ ಕಳೆದುಹೋದರೆ ಮಾಡಿದ ಕರ್ಮವೆಲ್ಲವೂ ನಿಷ್ಫಲವಾಗುವುದು.

೨೮. ಆ ರೀತಿ ದಕ್ಷಿಣೆಯನ್ನು ಕೊಡಲು ಪ್ರತಿಜ್ಞೆಮಾಡಿ ಕೊಡದಿರುವ ಮನುಷ್ಯನು ಸಾವಿರ ವರ್ಷಕಾಲ ನರಕದಲ್ಲಿ ನರಳುವನು. ಅವನ ಪಾಪಕರ್ಮದ ಫಲವಾಗಿ ಪುತ್ರಪೌತ್ರರೂ, ಧನಕನಕಾದ್ಯೈಶ್ವರ್ಯವೂ ನಾಶವಾಗುವುದು ಅವನ ಸತ್ಕರ್ಮವು ಧರ್ಮರಹಿತವಾದನಂತರ ಅವನು ಮಾಡಿದ ಧರ್ಮವೆಲ್ಲ ನಷ್ಟವಾಗುವುದು.

೨೯. ಶ್ರೀವಿಷ್ಣು:—ಧರ್ಮಪರಾಯಣಳೂ, ಧರ್ಮಜ್ಞಳೂ ಆದ ಪಾರ್ವತಿಯೇ, ಈ ಧರ್ಮಕಾರ್ಯದಲ್ಲಿ ನೀನು ಸ್ವಧರ್ಮಪರಿಪಾಲನೆ ಮಾಡುವುದರಿಂದ ಎಲ್ಲರನ್ನೂ ರಕ್ಷಿಸಿದಂತಾಗುವುದರಿಂದ ನಿನ್ನ ಧರ್ಮವನ್ನು ಪರಿಪಾಲಿಸು.

೩೦. ಬ್ರಹ್ಮ:—ಧರ್ಮಜ್ಞಾನವುಳ್ಳ ಎಲೌ ಪಾರ್ವತಿಯೇ, ಯಾರಾದರೂ ಯಾವುದಾದರೂ ಕಾರಣದಿಂದ ತಮ್ಮ ಧರ್ಮವನ್ನು ಪರಿಪಾಲಿಸಿಕೊಳ್ಳದಿದ್ದರೆ, ಆ ಧರ್ಮವು ನಾಶವಾಗುವುದಲ್ಲದೆ ಅವರೂ ನಾಶಹೊಂದುವರು.

॥ ಧರ್ಮ ಉವಾಚ ॥

ಮಾಂ ರಕ್ಷ ಯತ್ನತಃ ಸಾಧ್ವಿ ಪ್ರದಾಯ ಪತಿದಕ್ಷಿಣಾಂ ।
ಮಯಿ ಸ್ಥಿತೇ ಮಹಾಸಾಧ್ವಿ ಸರ್ವಂ ಭದ್ರಂ ಭವಿಷ್ಯತಿ ॥ ೩೧ ॥

॥ ದೇವಾ ಊಚುಃ ॥

ಧರ್ಮಂ ರಕ್ಷ ಮಹಾಸಾಧ್ವಿ ಕುರು ಪೂರ್ಣಂ ವ್ರತಂ ಸತಿ ।
ವಯಂ ತವ ವ್ರತೇ ಪೂರ್ಣೇ ಕುರ್ಮಸ್ತ್ವಾಂ ಪೂರ್ಣಮಾನಸಾಂ ॥ ೩೨ ॥

॥ ಮುನಯ ಊಚುಃ ॥

ಕೃತ್ವಾ ಸಾಧ್ವಿ ಪೂರ್ಣಹೋಮಂ ದೇಹಿ ವಿಪ್ರಾಯ ದಕ್ಷಿಣಾಂ ।
ಸ್ಥಿತೇಷ್ವಸ್ಮಾಸು ಧರ್ಮಜ್ಞೇ ಕಿಮಭದ್ರಂ ಭವಿಷ್ಯತಿ ॥ ೩೩ ॥

॥ ಸನತ್ಕುಮಾರ ಉವಾಚ ॥

ಶಿವೇ ಶಿವಂ ದೇಹಿ ಮಹ್ಯಂ ನ ಚೇದ್ವ್ರತಫಲಂ ತ್ಯಜ ।
ಸುಚಿರಂ ಸಂಚಿತಸ್ಯಾಪಿ ಸ್ವಾತ್ಮನಸ್ತಪಸಃ ಫಲಂ ॥ ೩೪ ॥

೩೧. ಧರ್ಮ:—ಸಾಧ್ವೀಶಿರೋಮಣಿಯೇ, ನಿನ್ನ ಪತಿಯನ್ನು ದಕ್ಷಿಣೆಯಾಗಿ ಕೊಟ್ಟು ನನ್ನನ್ನು ಪ್ರಯತ್ನಪೂರ್ವಕವಾಗಿ ರಕ್ಷಣೆಮಾಡು. ನಾನೊಬ್ಬನಿದ್ದರೆ ಎಲ್ಲರಿಗೂ ಎಲ್ಲಕಾಲದಲ್ಲಿಯೂ ಕ್ಷೇಮವುಂಟಾಗುವುದು.

೩೨. ದೇವತೆಗಳು:—ಮಹಾಪತಿವ್ರತೆಯೇ, ನೀನು ಧರ್ಮರಕ್ಷಣೆಯನ್ನು ಮಾಡಿ ವ್ರತವನ್ನು ಪೂರ್ಣಗೊಳಿಸು. ನಿನ್ನ ವ್ರತವು ಪರಿಪೂರ್ಣವಾದನಂತರ ನಾವು ನಿನ್ನ ಇಷ್ಟಾರ್ಥವನ್ನು ಪೂರ್ಣಗೊಳಿಸುವೆವು.

೩೩. ಮುನಿಗಳು:—ಎಲೌ ಸಾಧ್ವಿಯೇ, ನೀನು ಪೂರ್ಣಾಹುತಿಯನ್ನು ಕೊಟ್ಟು ಪುರೋಹಿತನಿಗೆ ದಕ್ಷಿಣೆಯನ್ನು ಸಮರ್ಪಿಸು. ನಾವಿರುವಾಗ ಧರ್ಮಜ್ಞಾನವುಳ್ಳ ನಿನಗೆ ಕೆಡಕುಂಟಾಗುವುದೆಂದರೇನು ?

೩೪. ಸನತ್ಕುಮಾರ:—ಎಲೌ ಶಿವನ ರಾಣಿಯೇ, ನನಗೆ ಶಿವನನ್ನು ದಕ್ಷಿಣೆಯಾಗಿ ಕೊಡು. ಇಲ್ಲವಾದರೆ ನೀನು ಆಚರಿಸಿದ ವ್ರತದ ಫಲವನ್ನೂ, ಬಹಳ ಕಾಲದಿಂದ ಸಂಗ್ರಹಿಸಿಕೊಂಡಿರುವ ನಿನ್ನ ತಪಸ್ಸಿನ ಫಲವನ್ನೂ ಬಿಟ್ಟುಬಿಡು.

ಕರ್ಮಣ್ಯದಕ್ಷಿಣೇ ಸಾಧ್ವಿ ಯಾಗಸ್ಯಾಹಂ ತು ತತ್ಫಲಂ ।
ಪ್ರಾಪ್ಸ್ಯಾಮಿ ಯಜಮಾನಸ್ಯ ಸಂಪೂರ್ಣಂ ಕರ್ಮಣಃ ಫಲಂ ॥ ೩೫ ॥

॥ ಪಾರ್ವತ್ಯುವಾಚ ॥

ಕಿಂ ಕರ್ಮಣಾ ಮೇ ದೇವೇಶಾಃ ಕಿಂ ಮೇ ದಕ್ಷಿಣಯಾ ಮುನೇ ।
ಕಿಂ ಪುತ್ರೇಣ ಚ ಧರ್ಮೇಣ ಯತ್ರ ಭರ್ತಾ ಚ ದಕ್ಷಿಣಾ ॥ ೩೬ ॥

ವೃಕ್ಷಾರ್ಚನೇ ಫಲಂ ಕಿಂ ವೈ ಯದಿ ಭೂಮಿರ್ನ ನಾರ್ಚ್ಯತೇ ।
ಗತೇ ಚ ಕಾರಣೇ ಕಾರ್ಯಂ ಕುತಃ ಸಸ್ಯಂ ಕುತಃ ಫಲಂ ॥ ೩೭ ॥

ಪ್ರಾಣಾಸ್ತ್ಯಕ್ತಾಃ ಸ್ವೇಚ್ಛಯಾ ಚೇದ್ದೇಹೈಸ್ಸ್ಯಾತ್ಕಿಂ ಪ್ರಯೋಜನಂ ।
ದೃಷ್ಟಿಶಕ್ತಿವಿಹೀನೇನ ಚಕ್ಷುಷಾ ಕಿಂ ಪ್ರಯೋಜನಂ । ॥ ೩೮ ॥

೩೫. ಎಲೌ ಸಾಧ್ವೀಮಣಿಯೇ, ನೀನು ಮಾಡಿದ ಕರ್ಮವು ದಕ್ಷಿಣಾರಹಿತವಾದರೆ, ಪುರೋಹಿತನಾದ ನಾನು ಆ ಸತ್ಕರ್ಮದ ಮತ್ತು ಆ ಕರ್ಮವನ್ನಾಚರಿಸಿದವರ ಸಂಪೂರ್ಣವಾದ ಫಲಕ್ಕೂ ಭಾಗಿಯಾಗುವೆನು.

೩೬. ಪಾರ್ವತಿ :—ಎಲೈ ದೇವತೋತ್ತಮರೇ. ನನ್ನ ಪತಿಯನ್ನೇ ದಕ್ಷಿಣೆಯನ್ನಾಗಿ ಕೊಡುವುದಾದರೆ, ಸತ್ಕರ್ಮಾಚರಣೆಯಿಂದಾಗಲೀ, ದಕ್ಷಿಣೆಯ ದಾನದಿಂದಾಗಲೀ, ಧರ್ಮರಕ್ಷಣೆಯಿಂದಾಗಲೀ. ಪುತ್ರಪ್ರಾಪ್ತಿಯಿಂದಾಗಲೀ ನನಗೇನು ಪ್ರಯೋಜನ.

೩೭. ಭೂದೇವಿಯನ್ನು ಪೂಜಿಸದೆ ಕೇವಲ ವೃಕ್ಷವನ್ನು ಪೂಜಿಸುವುದರಿಂದ ಯಾವ ಫಲ ದೊರೆಯುವುದು? ಕಾರಣವೇ ನಾಶವಾದಮೇಲೆ ಕಾರ್ಯವಾಗುವುದೇ? ಬೀಜವಿಲ್ಲದಮೇಲೆ ಸಸ್ಯವೂ ಇಲ್ಲ, ಫಲವೂ ಇಲ್ಲವಲ್ಲವೇ?

೩೮. ಸ್ವೇಚ್ಛೆಯಿಂದ ಪ್ರಾಣಗಳು ಹೊರಟುಹೋದರೆ ಕೇವಲ ದೇಹದಿಂದಾಗುವ ಪ್ರಯೋಜನವೇನು? ನೋಡುವ ಶಕ್ತಿಯನ್ನು ಕಳೆದುಕೊಂಡಿರುವ ಕೇವಲ ಕಣ್ಣುಗುಡ್ಡೆಗಳಿಂದ ಏನಾದರೂ ಪ್ರಯೋಜನವುಂಟೇ?

॥ ಶ್ರೀ ಪಾರ್ವತ್ಯುವಾಚ ॥

ನಿರೂಪಿತಶ್ಚ ವೇದೇಷು ಸ್ವಶಬ್ದೋ ಧನವಾಚಕಃ ।
ತದ್ಯಸ್ಯಾಸ್ತೀತಿ ಸ ಸ್ವಾಮೀ ವೇದಜ್ಞ ಶ್ರುಣು ಮದ್ವಚಃ ॥ ೪೩ ॥

ತಸ್ಯ ದಾತಾ ಸದಾ ಸ್ವಾಮೀ ನ ಚ ಸ್ವಸ್ವಾಮಿತಾಂ ಲಭೇತ್ ।
ಅಹೋಽವ್ಯವಸ್ಥಾ ಭವತಾಂ ವೇದಜ್ಞಾನಾಮಬೋಧತಃ ॥ ೪೪ ॥

॥ ಧರ್ಮ ಉವಾಚ ॥

ಪತ್ನೀಂ ವಿನಾನ್ಯಂ ಸ್ವಂ ಸಾಧ್ವಿ ಸ್ವಾಮಿನಂ ದಾತುಮಕ್ಷಮಾ ।
ದಂಪತೀ ಧ್ರುವಮೇಕಾಂಗೌ ದ್ವಯೋರ್ದಾನೇ ದ್ವಕೌ ಸಮೌ ॥ ೪೫ ॥

॥ ಪಾರ್ವತ್ಯುವಾಚ ॥

ಪಿತಾ ದದಾತಿ ಜಾಮಾತ್ರೇ ಸ ಚ ಗೃಹ್ಣಾತಿ ತತ್ಸುತಾಂ ।
ನ ಶ್ರುತಂ ವಿಪರೀತಂ ಚ ಶ್ರುತೌ ಶ್ರುತಿಪರಾಯಣಾಃ ॥ ೪೬ ॥

೪೩. ಪಾರ್ವತಿ:—ವೇದಜ್ಞನಾದ ಎಲೈ ಬ್ರಹ್ಮನೇ, 'ಸ್ವ' ಶಬ್ದವು 'ಧನ' ವೆಂಬ ಅರ್ಥವನ್ನು ಕೊಡುವುದೆಂದು ವೇದೋಕ್ತವಾಗಿದೆ. ಆದುದರಿಂದ (ಸ್ವ) ಧನವು ಯಾರಿಗೆ ಉಂಟೋ ಅವನೇ 'ಸ್ವಾಮಿ' ಎನಿಸುವನು.

೪೪. ಧನದ ಮೂಲಕ ಧರ್ಮವು ನಡೆಯಬೇಕಾದುದರಿಂದ ಆ ಧರ್ಮವನ್ನು ಪತಿಯು ಕೊಡುವವನೇ ಹೊರತು ಸ್ತ್ರೀಯು ಸ್ವತಂತ್ರಳಾಗಿ ಧರ್ಮಗಳಿಸುವಂತಿಲ್ಲ. ವೇದಜ್ಞಾನಿಗಳಾದ ನೀವೂ ತಿಳಿವಳಿಕೆಯಿಲ್ಲದವರಂತ ಪತಿಗಿಂತಲೂ ಧರ್ಮವೇ ಶ್ರೇಷ್ಠವೆಂದು ಅವ್ಯವಸ್ಥೆಯನ್ನು ಬೋಧಿಸುವಿರಲ್ಲ ?

೪೫. ಧರ್ಮ:—ಎಲೌ ಸಾಧ್ವೀಮಣಿಯೇ, ಹೆಂಡತಿಯಾದವಳು ತನ್ನ ಪತಿಯೊಡಗೂಡಿಯೇ ಇತರ ಯಾವ ವಸ್ತುವನ್ನಾದರೂ ದಾನಮಾಡಲು ಶಕ್ತಳಾಗುವಳು. ಪತಿ ಪತ್ನಿಯರು ಏಕಶರೀರಿಗಳಾದುದರಿಂದ ಪತಿಯು ಪತ್ನಿಯನ್ನೂ, ಪತ್ನಿಯು ಪತಿಯನ್ನೂ ದಾನಮಾಡಲು ಸಮಾನಾಧಿಕಾರಿಗಳು.

೪೬. ಪಾರ್ವತಿ:—ಕನ್ಯೆಯ ತಂದೆಯು ಮಗಳನ್ನು ಅಳಿಯನಿಗೆ ಕೊಡುವನು. ಅಳಿಯನೂ ಮಾವನ ಮಗಳನ್ನು ಸ್ವೀಕರಿಸುವನು. ಆದುದರಿಂದ ಹೆಂಗಸು

ಶತಪುತ್ರಸಮಃ ಸ್ವಾಮೀ ಸಾಧ್ವೀನಾಂ ಚ ಸುರೇಶ್ವರಾಃ ।
ಯದಿ ಭರ್ತಾ ವ್ರತೇ ದೇಯಃ ಕಿಂ ವ್ರತೇನ ಸುತೇನ ವಾ ॥ ೩೯ ॥

ಭರ್ತುರ್ವಂಶಶ್ಚ ತನಯಃ ಕೇವಲಂ ಭರ್ತೃಮೂಲಕಃ ।
ಯತ್ರ ಮೂಲಂ ಭವೇದ್ಭ್ರಷ್ಟಂ ತದ್ವಾಣಿಜ್ಯಂ ಚ ನಿಷ್ಫಲಂ ॥ ೪೦ ॥

॥ ಶ್ರೀ ವಿಷ್ಣುರುವಾಚ ॥

ಪುತ್ರಾದಪಿ ಪರಃ ಸ್ವಾಮೀ ಧರ್ಮಶ್ಚ ಸ್ವಾಮಿನಃ ಪರಃ ।
ನಷ್ಟೇ ಧರ್ಮೇ ಚ ಧರ್ಮಿಷ್ಠೇ ಸ್ವಾಮಿನಾ ಕಿಂ ಸುತೇನ ವಾ ॥ ೪೧ ॥

॥ ಬ್ರಹ್ಮೋವಾಚ ॥

ಸ್ವಾಮಿನಶ್ಚ ಪರೋ ಧರ್ಮೋ ಧರ್ಮಾತ್ಸತ್ಯಂ ಚ ಸುವ್ರತೇ ।
ಸತ್ಯಂ ಸಂಕಲ್ಪಿತಂ ಕರ್ಮ ನ ತು ಭ್ರಷ್ಟಂ ಕುರು ವ್ರತಂ ॥ ೪೨ ॥

---

೩೯. ಎಲೈ ಸುರಶ್ರೇಷ್ಠರೇ, ಪತಿವ್ರತೆಯರಿಗೆ ತಮ್ಮ ಪತಿಯು ನೂರುಮಂದಿ ಮಕ್ಕಳಿಗಿಂತ ಶ್ರೇಷ್ಠನು. ಅಂಥ ಪತಿಯನ್ನೇ ವ್ರತದಲ್ಲಿ ದಕ್ಷಿಣೆಯಾಗಿ ಕೊಡುವುದಾದರೆ ಆ ವ್ರತದಿಂದಾಗಲೀ, ಅದರಿಂದ ಪಡೆದ ಪುತ್ರರಿಂದಾಗಲೀ ಪ್ರಯೋಜನವೇನು?

೪೦. ಮಗನು ಪತಿಯ ವಂಶವನ್ನುದ್ಧರಿಸುವವನಾದುದರಿಂದ ಪತಿಯೇ ಪುತ್ರನಿಗೆ ಮೂಲಭೂತನು. ಮೂಲಧನ ಅಥವಾ ಅಸಲೇ ನಾಶವಾದಮೇಲೆ ಮಾಡುವ ವ್ಯಾಪಾರವೆಲ್ಲವೂ ನಿಷ್ಫಲವಲ್ಲವೇ ?

೪೧. ಶ್ರೀವಿಷ್ಣು:—ಎಲೌ ಧರ್ಮಪರಾಯಣಳಾದ ಪಾರ್ವತಿಯೇ, ನೀನು ಹೇಳಿದಂತೆ ಮಗನಿಗಿಂತಲೂ ಪತಿಯು ಶ್ರೇಷ್ಠನೆಂಬುದು ನಿಶ್ಚಯ. ಆದರೆ ಧರ್ಮರಕ್ಷಣೆಯು ಪತಿಗಿಂತಲೂ ಮೇಲಾದುದು. ಹೀಗಿರುವಾಗ ಧರ್ಮವು ನಾಶವಾದರೆ ಪತಿಯಿಂದಾಗಲೀ, ಪುತ್ರರಿಂದಾಗಲೀ ಪ್ರಯೋಜನವೇನು ?

೪೨. ಬ್ರಹ್ಮ:—ವ್ರತನಿಷ್ಠಳಾದ ಪಾರ್ವತಿಯೇ, ಪತಿಗಿಂತ ಧರ್ಮವೂ, ಧರ್ಮಕ್ಕಿಂತ ಸತ್ಯವೂ ಮೇಲಾದುದು. ಆದುದರಿಂದ ನೀನು ಸಂಕಲ್ಪ ಮಾಡಿದ ವ್ರತವನ್ನು ಸತ್ಯಗೊಳಿಸು. ಭ್ರಷ್ಟಗೊಳಿಸಬೇಡ.

|| ದೇವಾ ಊಚುಃ ||

ಬುದ್ಧಿಸ್ವರೂಪಾ ತ್ವಂ ದುರ್ಗೇ ಬುದ್ಧಿಮಂತೋ ವಯಂ ತ್ವಯಾ |
ವೇದಜ್ಞೇ ವೇದವಾದೇಷು ಕೇ ವಾ ತ್ವಾಂ ಜೇತುಮೀಶ್ವರಾಃ || ೪೭ ||

ನಿರೂಪಿತಾ ಪುಣ್ಯಕೇ ತು ವ್ರತೇ ಸ್ವಾಮೀ ಚ ದಕ್ಷಿಣಾ |
ಶ್ರುತೌ ಶ್ರುತೋ ಯಃ ಸ ಧರ್ಮೋ ವಿಪರೀತೋ ಹ್ಯಧರ್ಮಕಃ || ೪೮ ||

|| ಪಾರ್ವತ್ಯುವಾಚ ||

ಕೇವಲಂ ವೇದಮಾಶ್ರಿತ್ಯ ಕಃ ಕರೋತಿ ವಿನಿರ್ಣಯಂ |
ಬಲವಾಂಲ್ಲೌಕಿಕೋ ವೇದಾಂಲ್ಲೋಕಾಚಾರಂ ಚ ಕಸ್ತ್ಯಜೇತ್ || ೪೯ ||

ವೇದೇ ಪ್ರಕೃತಿಪುಂಸೋಶ್ಚ ಗರೀಯಾನ್ಪುರುಷೋ ಧ್ರುವಂ |
ನಿಬೋಧತ ಸುರಾಃ ಪ್ರಾಜ್ಞಾ ಬಾಲಾಹಂ ಕಥಯಾಮಿ ಕಿಂ || ೫೦ ||

---

ಗಂಡಸಿನ ಅಧೀನಳೇ ಹೊರತು ಸ್ವತಂತ್ರಳಲ್ಲವೆಂದು ವೇದೋಕ್ತವಾಗಿದೆ ವೇದಜ್ಞರಾದನಿಮ್ಮ ಬಾಯಿಂದ ವಿಪರೀತ ನುಡಿಯನ್ನು ಕೇಳುತ್ತಿದ್ದೇನೆ.

೪೭. ದೇವತೆಗಳು:—ಎಲೌ ದುರ್ಗಾಂಬಿಕೆಯೇ, ನೀನು ಬುದ್ಧಿ ಸ್ವರೂಪಿಣಿಯು. ನಿನ್ನಿಂದಲೇ ನಾವೆಲ್ಲರೂ ಬುದ್ಧಿವಂತರೆನಿಸಿಕೊಂಡಿರುವುದು. ಹೀಗಿರುವಾಗ ವೇದಜ್ಞಳಾದ ನಿನ್ನನ್ನು ವೇದವಾದದಲ್ಲಿ ಜಯಿಸಲು ನಾವು ಸಮರ್ಥರಾಗುವೆವೇ ?

೪೮. ಪುಣ್ಯಕವ್ರತದಲ್ಲಿ ಪತಿಯನ್ನು ದಕ್ಷಿಣೆಯಾಗಿ ಕೊಡಬೇಕೆಂದು ವೇದೋಕ್ತವಾಗಿದೆ. ಅದಕ್ಕೆ ವಿರುದ್ಧವಾಗಿ ನಡೆದರೆ ಅಧರ್ಮವೆನಿಸುವುದು.

೪೯. ಪಾರ್ವತಿ:—ಕೇವಲ ವೇದಗಳನ್ನೇ ಅವಲಂಬಿಸಿಕೊಂಡು ಧರ್ಮಾಧರ್ಮಗಳನ್ನು ಯಾರು ನಿರ್ಣಯಿಸುವರು? ವೇದಕ್ಕಿಂತಲೂ ಲೌಕಿಕವು ಬಲಿಷ್ಠವಾಗಿರುವಾಗ ಲೋಕಾಚಾರವನ್ನು ಬಿಡಲು ಸಾಧ್ಯವಿಲ್ಲ.

೫೦. ವೇದದಲ್ಲಿಯೂ ಕೂಡ ಪ್ರಕೃತಿಪುರುಷರಲ್ಲಿ ಪುರುಷನಿಗೇ ಪ್ರಾಧಾನ್ಯವೆಂದು ಸ್ಪಷ್ಟವಾಗಿ ಹೇಳಿದೆ. ಪ್ರಾಜ್ಞರಾದ ನಿಮಗೆ ಬಾಲೆಯಾದ ನಾನು ತಿಳಿಸಲು ಸಾಧ್ಯವೇ ?

|| ಬೃಹಸ್ಪತಿರುವಾಚ ||

ನ ಪುಮಾಂಸಂ ವಿನಾ ಸೃಷ್ಟಿರ್ನ ಸಾಧ್ವಿ ಪ್ರಕೃತಿಂ ವಿನಾ ।
ಶ್ರೀಕೃಷ್ಣಶ್ಚ ದ್ವಯೋಃ ಸ್ರಷ್ಟಾ ಸಮೌ ಪ್ರಕೃತಿಪೂರುಷೌ || ೫೧ ||

|| ಪಾರ್ವತ್ಯುವಾಚ ||

ಸರ್ವಸ್ರಷ್ಟಾ ಚ ಯಃ ಕೃಷ್ಣಃ ಸೋಂಽಶೇನ ಸಗುಣಃ ಪುಮಾನ್ ।
ಪುಮಾನ್ಗರೀಯಾನ್ಪ್ರಕೃತೇಸ್ತಥೈವ ನ ತತಶ್ಚ ಸಾ || ೫೨ ||

ಏತಸ್ಮಿನ್ನಂತರೇ ದೇವಾ ಮುನಯಸ್ತತ್ರ ಸಂಸದಿ ।
ರತ್ನೇಂದ್ರಸಾರರಚಿತಮಾಕಾಶೇ ದದೃಶೂ ರಥಂ || ೫೩ ||

ಪಾರ್ಷದೈಸ್ಸಂಪರಿವೃತಂ ಯುತಂ ಶ್ಯಾಮೈಶ್ಚತುರ್ಭುಜೈಃ ।
ವನಮಾಲಾಪರಿವೃತೈ ರತ್ನಭೂಷಣಭೂಷಿತೈಃ ।
ಅವರುಹ್ಯ ಮುದಾ ಯಾನಾದಾಜಗಾಮ ಸಭಾತಲಂ || ೫೪ ||

೫೧. ಬೃಹಸ್ಪತಿ:—ಎಲೌ ಸಾಧ್ವೀಮಣಿಯೇ, ಪುರುಷನಿಲ್ಲದೆ ಕೇವಲ ಪ್ರಕೃತಿಯಿಂದಾಗಲೀ, ಪ್ರಕೃತಿಯಿಲ್ಲದೆ ಕೇವಲ ಪುರುಷನಿಂದಾಗಲೀ ಸೃಷ್ಟಿಯು ಸಾಧ್ಯವಿಲ್ಲದುದರಿಂದಲೂ, ಪ್ರಕೃತಿಪುರುಷರೆಂಬ ಭೇದವು ಶ್ರೀಕೃಷ್ಣಪರಮಾತ್ಮನಿಂದ ವ್ಯಕ್ತವಾದುದರಿಂದಲೂ, ಇಬ್ಬರೂ ಸರಿಸಮಾನರು.

೫೨. ಪಾರ್ವತಿ—ಸರ್ವಸ್ರಷ್ಟೃವಾದ ಶ್ರೀಕೃಷ್ಣಪರಮಾತ್ಮನೇ, ತನ್ನಂಶದಿಂದ ಸಗುಣಾತ್ಮಕನಾಗಿ ಪುರುಷನೆನಿಸುವನು. ಆದುದರಿಂದ ಪ್ರಕೃತಿಗಿಂತಲೂ ಪುರುಷನು ಶ್ರೇಷ್ಠನೇ ಹೊರತು, ಪ್ರಕೃತಿಯು ಪುರುಷನಿಗಿಂತ ಶ್ರೇಷ್ಠಳಲ್ಲ.

೫೩. ದೇವತೆಗಳಿಗೂ ಪಾರ್ವತಿಗೂ ಈ ರೀತಿ ವಾಗ್ವಾದವಾಗುವಷ್ಟರೊಳಗೆ ಆ ಸಭೆಯಲ್ಲಿದ್ದ ದೇವತೆಗಳೂ ಮತ್ತು ಮುನಿಗಳೂ ಆಕಾಶದಲ್ಲಿ ಶ್ರೇಷ್ಠರತ್ನಗಳಿಂದ ಖಚಿತವಾದ ದಿವ್ಯರಥವೊಂದನ್ನು ನೋಡಿದರು.

೫೪. ಶ್ಯಾಮಲವರ್ಣರೂ, ಚತುರ್ಭುಜರೂ, ವನಮಾಲಾಧಾರಿಗಳೂ, ರತ್ನಭೂಷಣಭೂಷಿತರೂ ಆದ ಪಾರ್ಷದರಿಂದ ಪರಿವೃತನಾದ ಶ್ರೀಮನ್ನಾರಾಯಣನು ಆ ರಥದಿಂದಿಳಿದು ಸಭಾಮಂಟಪಕ್ಕೆ ಮುಗುಳುನಗೆ ನಗುತ್ತಾ ಬಂದನು.

ತುಷ್ಟುವುಸ್ತಂ ಸುರೇಂದ್ರಾಸ್ತೇ ದೇವಂ ವೈಕುಂಠವಾಸಿನಂ ।
ಶಂಖಚಕ್ರಗದಾಪದ್ಮಧರವಿಭಾಶಂ ಚತುರ್ಭುಜಂ ॥ ೫೫ ॥

ಲಕ್ಷ್ಮೀಸರಸ್ವತೀಕಾಂತಂ ಶಾಂತಂ ತಂ ಸುಮನೋಹರಂ ।
ಸುಖದೃಶ್ಯಮಭಕ್ತಾನಾಮದೃಶ್ಯಂ ಕೋಟಿಜನ್ಮಭಿಃ ॥ ೫೬ ॥

ಕೋಟಿಕಂದರ್ಪಲಾವಣ್ಯಂ ಕೋಟಿಚಂದ್ರಸಮಪ್ರಭಂ ।
ಅಮೂಲ್ಯರತ್ನರಚಿತ ಚಾರುಭೂಷಣಭೂಷಿತಂ ॥ ೫೭ ॥

ಸೇವ್ಯಂ ಬ್ರಹ್ಮಾದಿದೇವೈಶ್ಚ ಸೇವಕೈಃ ಸತತಂ ಸ್ತುತಂ ।
ತದ್ಭಾಸಾ ಸಂಪರಿಚ್ಛನ್ನೈರ್ವೇಷ್ಟಿತಂ ಚ ಸುರರ್ಷಿಭಿಃ ॥ ೫೮ ॥

ವಾಸಯಾಮಾಸ ತಂ ತೇ ಚ ರತ್ನಸಿಂಹಾಸನೇ ವರೇ ।
ತಂ ಪ್ರಣೇಮುಶ್ಚ ಶಿರಸಾ ಬ್ರಹ್ಮಶಕ್ತಿಶಿವಾದಯಃ ॥ ೫೯ ॥

೫೫. ಚತುರ್ಭುಜನೂ, ಶಂಖಚಕ್ರಗದಾಪದ್ಮಧಾರಿಯೂ, ವೈಕುಂಠವಾಸಿಯೂ ಆದ ಆ ದೇವನನ್ನು ಕಂಡು ದೇವತೆಗಳೆಲ್ಲರೂ ಸ್ತುತಿಸಲಾರಂಭಿಸಿದರು.

೫೬–೫೯. ಲಕ್ಷ್ಮಿ ಮತ್ತು ಸರಸ್ವತೀದೇವಿಯರ ಕಾಂತನೂ, ಶಾಂತಸ್ವರೂಪನೂ, ಮನೋಹರನೂ, ಭಕ್ತರಿಗೆ ಸುಲಭನೂ, ಭಕ್ತರಲ್ಲದವರಿಗೆ ಕೋಟಿಜನ್ಮಗಳು ಕಳೆದರೂ ದುರ್ಲಭನೂ ಆಗಿ, ಕೋಟಿ ಮನ್ಮಥರ ಲಾವಣ್ಯದಿಂದಲೂ, ಕೋಟಿ ಚಂದ್ರರ ಕಾಂತಿಯಿಂದಲೂ ಕೂಡಿ, ಅಮೂಲ್ಯ ರತ್ನಖಚಿತವಾದ ದಿವ್ಯಭೂಷಣಗಳನ್ನು ಧರಿಸಿ, ಸರ್ವದಾ ಸೇವಕರಿಂದ ಸ್ತುತಿಗೊಳ್ಳುತ್ತಾ, ತನ್ನ ದೇಹಕಾಂತಿಯಿಂದ ಆವೃತರಾದ ಸುರರ್ಷಿಗಳಿಂದ ಪರಿವೃತನಾಗಿರುವ, ಬ್ರಹ್ಮಾದಿ ಸಕಲ ದೇವತೆಗಳಿಗೂ ಸೇವ್ಯನಾದ ಆ ನಾರಾಯಣನನ್ನು ದೇವತೆಗಳೆಲ್ಲರೂ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ, ಬ್ರಹ್ಮ, ಶಿವ, ಶಕ್ತಿ ಮುಂತಾದ ಎಲ್ಲ ದೇವತೆಗಳೂ ಆತನಿಗೆ ತಲೆಬಾಗಿ ನಮಸ್ಕರಿಸಿದರು.

ಸಂಪ್ರಹೃಷ್ಟಾಂಜಲಯಃ ಸರ್ವೇ ಪುಲಕಾಂಗಾಶ್ರುಲೋಚನಾಃ ॥ ೬೦ ॥
ಸಸ್ಮಿತಸ್ತಾಂಶ್ಚ ಪಪ್ರಚ್ಛ ಸರ್ವಂ ಮಧುರಯಾ ಗಿರಾ ।

ಪ್ರಬೋಧಿತಃ ಸುಬೋಧಜ್ಞಃ ಪ್ರವಕ್ತುಮುಪಚಕ್ರಮೇ ॥ ೬೧ ॥

॥ ಶ್ರೀ ನಾರಾಯಣ ಉವಾಚ ॥

ಸಹ ಬುದ್ಧ್ಯಾ ಬುದ್ಧಿಮಂತೋ ನ ವಕ್ತುಮುಚಿತಂ ಸುರಾಃ ।
ಸರ್ವೇ ಶಕ್ತ್ಯಾ ಯಯಾ ವಿಶ್ವೇ ಶಕ್ತಿಮಂತೋ ಹಿ ಜೀವಿನಃ ॥ ೬೨ ॥

ಬ್ರಹ್ಮಾದಿತೃಣಪರ್ಯಂತಂ ಸರ್ವಂ ಪ್ರಾಕೃತಿಕಂ ಜಗತ್ ।
ಸತ್ಯಂ ಸತ್ಯಂ ವಿನಾ ಮಾಂ ಚ ಮಯಾ ಶಕ್ತಿಃ ಪ್ರಕಾಶಿತಾ ೬೩ ॥

ಆವಿರ್ಭೂತಾ ಚ ಸಾ ಮತ್ತಃ ಸೃಷ್ಟೌ ದೇವೀ ಮದಿಚ್ಛಯಾ ।
ತಿರೋಹಿತಾ ಚ ಸಾ ಶೇಷೇ ಸೃಷ್ಟಿಸಂಹರಣೇ ಮಯಿ ॥ ೬೪ ॥

೬೦–೬೧ ರೋಮಾಂಚಿತ ಶರೀರರಾಗಿ, ಆನಂದಾಶ್ರುವನ್ನು ಸುರಿಸುತ್ತ, ಕೈಮುಗಿದು ನಿಂತಿರುವ ಅವರೆಲ್ಲರನ್ನೂ ನೋಡಿ ನಾರಾಯಣನು ಸ್ಮಿತಮುಖನಾಗಿ ಮಧುರವಾಣಿಯಿಂದ ಕುಶಲಪ್ರಶ್ನೆ ಮಾಡಿದನು. ಮತ್ತು ಅವರ ಚರ್ಚೆಗೆ ಮೂಲ ಕಾರಣವನ್ನು ತಿಳಿದು ಈ ರೀತಿ ನುಡಿದನು.

೬೨ ಶ್ರೀ ನಾರಾಯಣ.—ಎಲೈ ದೇವತೆಗಳೇ, ಬುದ್ಧಿಸ್ವರೂಪಿಣಿಯಾದ ಪಾರ್ವತಿಯೊಡನೆ ಬುದ್ಧಿವಂತರಾದ ನೀವು ಚರ್ಚೆಮಾಡುವುದುಚಿತವಲ್ಲ. ಪ್ರಪಂಚದಲ್ಲಿರುವ ಸಕಲ ಜೀವಿಗಳೂ ಶಕ್ತಿಸ್ವರೂಪಿಣಿಯಾದ ಈ ದೇವಿಯಿಂದಲೇ ಶಕ್ತರೆನಿಸಿರುವರು.

೬೩. ಬ್ರಹ್ಮನೇ ಮೊದಲಾಗಿ ಹುಲ್ಲುಗರಿಯವರೆಗಿರುವ ಸಕಲ ಪ್ರಪಂಚವೂ ಪ್ರಾಕೃತಿಕವಾದುದೆಂಬುದು ಸತ್ಯ. ನಾನು ಆ ಶಕ್ತಿಯನ್ನು ಪ್ರಕಟಗೊಳಿಸಿದವನಾದುದರಿಂದ ಪ್ರಾಕೃತನಲ್ಲ.

೬೪. ಸ್ವೇಚ್ಛಾಮಯನಾದ ನಾನು ಸೃಷ್ಟ್ಯುನ್ಮುಖನಾದಾಗ ಆ ದೇವಿಯು ನನ್ನಿಂದ ಆವಿರ್ಭವಿಸಿದಳು. ಪ್ರಳಯಕಾಲದಲ್ಲಿ ಸೃಷ್ಟಿಯನ್ನೆಲ್ಲ ಸಂಹರಿಸುವಾಗ ಆ ದೇವಿಯು ನನ್ನಲ್ಲಿಯೇ ಐಕ್ಯಳಾಗುವಳು.

ಪ್ರಕೃತಿಃ ಸೃಷ್ಟಿಕರ್ತ್ರೀ ಚ ಸರ್ವೇಷಾಂ ಜನನೀ ಪರಾ ।
ಮಮ ತುಲ್ಯಾ ಚ ಮನ್ಮಾಯಾ ತೇನ ನಾರಾಯಣೀ ಸ್ಮೃತಾ ॥ ೬೫ ॥

ಸುಚಿರಂ ತಪಸಾ ತಪ್ತಂ ಶಂಭುನಾ ಧ್ಯಾಯತಾ ಚ ಮಾಂ ।
ತೇನ ತಸ್ಮೈ ಮಯಾ ದತ್ತಾ ತಪಸಾಂ ಫಲರೂಪಿಣೀ ॥ ೬೬ ॥

ವ್ರತಂ ಚ ಲೋಕಶಿಕ್ಷಾರ್ಥಮಸ್ಯಾ ನ ಸ್ವಾರ್ಥಮೇವ ಚ ।
ಸ್ವಯಂ ವ್ರತಾನಾಂ ತಪಸಾಂ ಫಲದಾತ್ರೀ ಜಗತ್ತ್ರಯೇ ॥ ೬೭ ॥

ಮಾಯಯಾ ಮೋಹಿತಾಃ ಸರ್ವೇ ಕಿಮಸ್ಯಾ ವಾಸ್ತವಂ ವ್ರತಂ ।
ಸಾಧ್ಯಮಸ್ಯಾ ವ್ರತಫಲಂ ಕಲ್ಪೇ ಕಲ್ಪೇ ಪುನಃ ಪುನಃ ॥ ೬೮ ॥

ಸುರೇಶ್ವರಾ ಮದಂಶಾಶ್ಚ ಬ್ರಹ್ಮಶಕ್ತಿಮಹೇಶ್ವರಾಃ ।
ಕಲಾಃ ಕಲಾಂಶರೂಪಾಶ್ಚ ಜೀವಿನಶ್ಚ ಸುರಾದಯಃ ॥ ೬೯ ॥

---

೬೫. ಪ್ರಕೃತಿಯು ಸೃಷ್ಟಿಮಾಡುವವಳೂ, ಸರ್ವಜನನಿಯೂ ಆಗಿರುವಳು. ನನ್ನ ಮಾಯಾರೂಪಿಣಿಯಾದ ಅವಳು ನನಗೆ ಸಮಳಾದುದರಿಂದಲೇ ಆಕೆಯನ್ನು ನಾರಾಯಣೀ ಎನ್ನುವರು.

೬೬. ಶಿವನು ಧ್ಯಾನಾಸಕ್ತನಾಗಿ ಬಹಳ ಕಾಲ ನನ್ನನ್ನು ಕುರಿತು ತಪಸ್ಸು ಮಾಡಿದನು. ಆ ತಪಸ್ಸಿನ ಫಲರೂಪವಾಗಿ ಅವನಿಗೆ ಈ ಪ್ರಕೃತಿದೇವಿಯನ್ನು ನಾನು ಅನುಗ್ರಹಿಸಿದೆನು

೬೭. ತ್ರಿಲೋಕದಲ್ಲೂ ಆಚರಿಸಿದ ವ್ರತ ಮತ್ತು ತಪಸ್ಸುಗಳ ಫಲವನ್ನು ಕೊಡಲು ಶಕ್ತಳಾದ ಈ ಪಾರ್ವತಿಯು, ಜನರ ಉಪದೇಶಾರ್ಥವಾಗಿ ವ್ರತವನ್ನಾಚರಿಸಿದಳೇ ಹೊರತು, ಸ್ವಪ್ರಯೋಜನವನ್ನು ಬಯಸಿಯಲ್ಲ.

೬೮. ಎಲ್ಲರೂ ಮಾಯೆಯಿಂದ ಮೋಹಿತರಾಗಿ ಪಾರ್ವತಿಯು ವ್ರತಮಾಡಿದಳೆಂದು ತಿಳಿದರೇ ಹೊರತು ವಾಸ್ತವವಾಗಿ ಪಾರ್ವತಿಯು ಯಾವ ವ್ರತವನ್ನೂ ಆಚರಿಸಬೇಕಾದುದಿಲ್ಲ.

೬೯. ಬ್ರಹ್ಮ ಮಹೇಶರೂ, ಆದಿಶಕ್ತಿಸ್ವರೂಪಿಣಿಯಾದ ಪಾರ್ವತಿಯೂ, ಸುರಶ್ರೇಷ್ಠರೂ ಮತ್ತು ಸಕಲ ಜೀವಿಗಳೂ ನನ್ನ ಕಳೆ ಮತ್ತು ಕಳೆಯ ಅಂಶದಿಂದ ಸಂಭವಿಸಿದವರು.

ಮೃದಾ ವಿನಾ ಘಟಂ ಕರ್ತುಂ ಕುಲಾಲಶ್ಚ ಯಥಾಽಕ್ಷಮಃ ।
ವಿನಾ ಸ್ವರ್ಣಂ ಸ್ವರ್ಣಕಾರಃ ಕುಂಡಲಂ ಕರ್ತುಮಕ್ಷಮಃ ॥ ೨೦ ॥

ವಿನಾ ಶಕ್ತ್ಯಾ ತಥಾಽಹಂ ಚ ಸ್ವಸೃಷ್ಟಿಂ ಕರ್ತುಮಕ್ಷಮಃ ।
ಶಕ್ತಿಪ್ರಧಾನಾ ಸೃಷ್ಟಿಶ್ಚ ಸರ್ವದರ್ಶನಸಮ್ಮತಾ ॥ ೨೧ ॥

ಅಹಮಾತ್ಮಾ ಹಿ ನಿರ್ಲಿಪ್ತೋಽದೃಶ್ಯಃ ಸಾಕ್ಷೀ ಚ ದೇಹಿನಾಂ ।
ದೇಹಾಃ ಪ್ರಾಕೃತಿಕಾಃ ಸರ್ವೇ ನಶ್ವರಾಃ ಪಾಂಚಭೌತಿಕಾಃ ॥ ೨೨ ॥

ಅಹಂ ನಿತ್ಯಃ ಶರೀರೀ ಚ ಭಾನುಮಾನ್ ಭಾನುವಿಗ್ರಹಃ ।
ಸರ್ವಾಧಾರಾ ಸಾ ಪ್ರಕೃತಿಃ ಸರ್ವಾತ್ಮಾಹಂ ಜಗತ್ಸು ಚ ॥ ೨೩ ॥

ಅಹಮಾತ್ಮಾ ಮನೋ ಬ್ರಹ್ಮಾ ಜ್ಞಾನರೂಪೋ ಮಹೇಶ್ವರಃ ।
ಪಂಚಪ್ರಾಣಾಃ ಸ್ವಯಂ ವಿಷ್ಣುರ್ಬುದ್ಧಿಃ ಪ್ರಕೃತಿರೀಶ್ವರೀ ॥ ೨೪ ॥

೨೦–೨೧. ಕುಂಬಾರನು ಮಣ್ಣಿಲ್ಲದೆ ಗಡಿಗೆಯನ್ನು ಹೇಗೆ ಮಾಡಲಾರನೋ, ಅಕ್ಕಸಾಲೆಯು ಚಿನ್ನವಿಲ್ಲದೆ ಕರ್ಣಕುಂಡಲವನ್ನು ಹೇಗೆ ಮಾಡಲಾರನೋ, ಅದರಂತೆಯೇ ನಾನೂ ಶಕ್ತಿರೂಪಿಣಿಯಾದ ಪ್ರಕೃತಿಯಿಲ್ಲದೆ. ವಿಶ್ವಸೃಷ್ಟಿಯನ್ನು ಮಾಡಲಾರೆನು. ಆದುದರಿಂದಲೇ ಸೃಷ್ಟಿಯಲ್ಲಿ ಶಕ್ತಿಗೇ ಪ್ರಾಮುಖ್ಯತೆಯನ್ನು ಷಡ್ದರ್ಶನಗಳೂ ಕೊಟ್ಟಿರುವವು.

೨೨. ನಿರ್ಲಿಪ್ತಾತ್ಮನಾದ ನಾನು ಸಕಲ ದೇಹಗಳಲ್ಲೂ ಅದೃಶ್ಯನೂ ಸಾಕ್ಷಿರೂಪನೂ ಆಗಿದ್ದೇನೆ. ಪ್ರಕೃತಿ ಸೃಷ್ಟಿಗೊಳಗಾದ ಪಾಂಚಭೌತಿಕ ದೇಹಗಳೆಲ್ಲ ನಶ್ವರವಾದವು

೨೩. ತೇಜೋರೂಪನಾದ ನಾನು ಸೂರ್ಯನಂತೆ ತೇಜೋಮಯವಾದ ನಿತ್ಯ ಶರೀರವುಳ್ಳವನಾಗಿದ್ದೇನೆ. ಜಗತ್ತಿನಲ್ಲಿ ಪ್ರಕೃತಿಯು ಸರ್ವಾಧಾರರೂಪಳಾಗಿಯೂ ನಾನು ಸರ್ವಾತ್ಮಸ್ವರೂಪನಾಗಿಯೂ ವ್ಯಾಪಿಸಿದ್ದೇವೆ.

೨೪. ನಾನು ಆತ್ಮಸ್ವರೂಪನಾಗಿಯೂ, ಬ್ರಹ್ಮನು ಮನೋರೂಪನಾಗಿಯೂ ಮಹೇಶ್ವರನು ಜ್ಞಾನಸ್ವರೂಪನಾಗಿಯೂ ವಿಷ್ಣುವು ಪಂಚಪ್ರಾಣಸ್ವರೂಪನಾಗಿಯೂ ಈಶ್ವರೀಪ್ರಕೃತಿಯು ಬುದ್ಧಿರೂಪಿಣಿಯಾಗಿಯೂ ಸಕಲ ದೇಹದಲ್ಲೂ ಇರುವೆವು.

ಮೇಧಾನಿದ್ರಾದಯಶ್ಶಕ್ತಯಸ್ತಾಃ ಸರ್ವಾಶ್ಚ ಪ್ರಕೃತೇಃ ಕಲಾಃ ।
ಸಾ ಚ ಶೈಲೇಂದ್ರಕನ್ಯೈಷಾತ್ವಿತಿ ವೇದೇ ನಿರೂಪಿತಂ ॥ ೭೫ ॥

ಅಹಂ ಗೋಲೋಕನಾಥಶ್ಚ ವೈಕುಂಠೇಶಃ ಸನಾತನಃ ।
ಗೋಪೀಗೋಪೈಃ ಪರಿವೃತಸ್ತತ್ರೈವ ದ್ವಿಭುಜಃ ಸ್ವಯಂ ।
ಚತುರ್ಭುಜೋತ್ರ ದೇವೇಶೋ ಲಕ್ಷ್ಮೀಶಃ ಪಾರ್ಷದೈರ್ವೃತಃ ॥ ೭೬ ॥

ಊರ್ಧ್ವಂ ಪರಶ್ಚ ವೈಕುಂಠಾತ್ಪಂಚಾಶತ್ಕೋಟಿಯೋಜನೇ ।
ಮಮಾಶ್ರಯಶ್ಚ ಗೋಲೋಕೋ ಯತ್ರಾಹಂ ಗೋಪಿಕಾಪತಿಃ ॥ ೭೭ ॥

ವ್ರತಾರಾಧ್ಯಸ್ಸ ದ್ವಿಭುಜಃ ಸ ಚ ತತ್ಫಲದಾಯಕಃ ।
ಯದ್ರೂಪಂ ಚಿಂತಯೇದ್ಯೋ ಹಿ ತಚ್ಚ ತತ್ಫಲದಾಯಕಃ ॥ ೭೮ ॥

ವ್ರತಂ ಪೂರ್ಣಂ ಕುರು ಶಿವೇ ಶಿವಂ ದತ್ವಾ ಚ ದಕ್ಷಿಣಾಂ ।
ಪುನಃ ಸಮುಚಿತಂ ಮೂಲ್ಯಂ ದತ್ವಾ ನಾಥಂ ಗ್ರಹೀಷ್ಯಸಿ ॥ ೭೯ ॥

೭೫. ಮೇಧಾ, ನಿದ್ರಾ ಮುಂತಾದ ಸಕಲಶಕ್ತಿಗಳೂ ಪ್ರಕೃತಿಯ ಕಲೆಗಳು. ಆ ಪ್ರಕೃತಿಯೇ ಶೈಲರಾಜಪುತ್ರಿಯಾದ ಪಾರ್ವತಿಯೆಂದು ವೇದೋಕ್ತವಾಗಿದೆ

೭೬. ಗೋಪಗೋಪಿಯರಿಂದ ಪರಿವೃತನಾಗಿ ಗೋಲೋಕದಲ್ಲಿ ದ್ವಿಭುಜದಿಂದ ವಿರಾಜಿಸುತ್ತಿರುವ ನಾನೇ, ವೈಕುಂಠದಲ್ಲಿ ಚತುರ್ಭುಜನಾಗಿ ಪಾರ್ಷದರಿಂದ ಕೂಡಿ ಲಕ್ಷ್ಮೀರಮಣನಾಗಿರುವೆನು. ಆದುದರಿಂದ ಶ್ರೀಕೃಷ್ಣ ಮತ್ತು ನಾರಾಯಣ ಎಂಬ ನಾಮಭೇದವು ಉಪಾಧಿ ನಿಮಿತ್ತವಾಗಿರುವುದು.

೭೭. ವೈಕುಂಠಕ್ಕಿಂತ ಐವತ್ತು ಕೋಟಿಯೋಜನ ಮೇಲುಭಾಗದಲ್ಲಿ ಗೋಪೀಪತಿಯಾದ ನನ್ನ ಆಶ್ರಯವೆನಿಸಿದ ಗೋಲೋಕವಿರುವುದು.

೭೮. ದ್ವಿಭುಜನಾದ ಶ್ರೀಕೃಷ್ಣಪರಮಾತ್ಮನು ವ್ರತನಿಯಮಗಳಿಂದ ಆರಾಧಿತನಾಗಿ ಅದರ ಫಲವನ್ನು ಕೊಡುವನು. ಯಾರು ಪರಮಾತ್ಮನ ಯಾವ ರೂಪವನ್ನು ಧ್ಯಾನಿಸುವರೋ ಅವರು ಅದಕ್ಕೆ ತಕ್ಕ ಫಲವನ್ನು ಹೊಂದುವರು.

೭೯ ಆದ್ದರಿಂದ ಎಲೌ ಪಾರ್ವತಿಯೇ ಶಿವನನ್ನು ದಕ್ಷಿಣೆಯಾಗಿ ಕೊಟ್ಟು ನಿನ್ನ ವ್ರತವನ್ನು ಪೂರ್ಣಗೊಳಿಸು. ಅನಂತರ ಯೋಗ್ಯವಾದ ಬೆಲೆಯನ್ನಿತ್ತು ಕೊಟ್ಟು ಪುನಃ ನಿನ್ನ ಪತಿಯನ್ನು ಸ್ವೀಕರಿಸಬಹುದು

ವಿಷ್ಣುದೇಹಾ ಯಥಾ ಗಾವೋ ವಿಷ್ಣುದೇಹಸ್ತಥಾ ಶಿವಃ ।
ದ್ವಿಜಾಯ ದತ್ವಾ ಗೋಮೂಲ್ಯಂ ಗೃಹಾಣಸ್ವಾಮಿನಂ ಶುಭೇ ॥ ೮೦ ॥

ಯಜ್ಞಪತ್ನೀಂ ಯಥಾ ದಾತುಂ ಕ್ಷಮಃ ಸ್ವಾಮೀ ಸದೈವ ಹಿ
ತಥಾ ತ್ವಂಸ್ವಾಮಿನಂ ದಾತುಮಿತ್ಯರ್ಹಸೀತಿ ಶ್ರುತೌ ಶ್ರುತಂ ॥ ೮೧ ॥

ಇತ್ಯುಕ್ತ್ವಾ ಸ ಸಭಾಮಧ್ಯೇ ತತ್ರೈವಾಂತರಧೀಯತ ।
ಹೃಷ್ಟಾಸ್ತೇಸಾ ಚ ಸಂಹೃಷ್ಟಾ ದಕ್ಷಿಣಾಂ ದಾತುಮುದ್ಯತಾ ॥ ೮೨ ॥

ಕೃತ್ವಾ ಶಿವಾ ಪೂರ್ಣಹೋಮಂ ಸಾ ಶಿವಂ ದಕ್ಷಿಣಾಂ ದದೌ ।
ಸ್ವಸ್ತೀತ್ಯುಕ್ತ್ವಾ ಚ ಜಗ್ರಾಹ ಕುಮಾರೋ ದೇವಸಂಸದಿ ॥ ೮೩ ॥

ಉವಾಚ ದುರ್ಗಾ ಸಂತ್ರಸ್ತಾ ಶುಷ್ಕಕಂಠೌಷ್ಠತಾಲುಕಾ ।
ಕೃತಾಂಜಲಿಪುಟಾ ವಿಪ್ರಂ ಹೃದಯೇನ ವಿದೂಯತಾ ॥ ೮೪ ॥

೮೦. ಗೋವುಗಳು ಹೇಗೆ ವಿಷ್ಣುವಿಗೆ ಅಭಿನ್ನವಾದವುಗಳೋ ಹಾಗೆಯೇ ಶಿವನೂ ವಿಷ್ಣುವಿಗೆ ಅಭಿನ್ನನು. ಆದುದರಿಂದ ಒಂದು ಗೋವಿನ ಬೆಲೆಯನ್ನು ಕೊಟ್ಟು ನಿನ್ನ ಪತಿಯನ್ನು ಹಿಂದಕ್ಕೆ ಪಡೆಯಬಹುದು

೮೧. ಯಜಮಾನನು ಯಜ್ಞಪತ್ನಿಯಾದ ದಕ್ಷಿಣೆಯನ್ನು ಕೊಡಲು ಸರ್ವದಾ ಹೇಗೆ ಅರ್ಹನಾಗಿರುವನೋ ಹಾಗೆಯೇ ಸ್ತ್ರೀಯೂ ತನ್ನ ಪತಿಯನ್ನು ದಕ್ಷಿಣೆಯಾಗಿ ಕೊಡಲು ಅರ್ಹಳಾಗಿರುವಳೆಂದು ಶ್ರುತ್ಯುಕ್ತವಾಗಿದೆ.

೮೨. ಶ್ರೀಮನ್ನಾರಾಯಣನು ಸಭೆಯ ಮಧ್ಯದಲ್ಲಿ ಇಂತು ನುಡಿದು ಅಂತರ್ಧಾನಹೊಂದಿದನು. ಆಗ ದೇವತೆಗಳೆಲ್ಲರೂ ಸಂತುಷ್ಟರಾಗಲು ಪಾರ್ವತಿಯೂ ಕೂಡ ತುಷ್ಟಳಾಗಿ ಪತಿಯನ್ನು ದಕ್ಷಿಣೆಯಾಗಿ ಕೊಡಲು ಸಿದ್ಧಳಾದಳು.

೮೩. ಅನಂತರ ಪಾರ್ವತಿಯು ಪೂರ್ಣಾಹುತಿಯನ್ನು ಕೊಟ್ಟು, ತನ್ನ ಪತಿಯಾದ ಶಿವನನ್ನು ದಕ್ಷಿಣೆಯಾಗಿ ಸಮರ್ಪಿಸಿದಳು ಸನತ್ಕುಮಾರನೂಕೂಡ ಮಂಗಳವಾಗಲೆಂದು ನುಡಿದು, ದೇವತೆಗಳ ಆ ಸಭೆಯಲ್ಲಿ ದಕ್ಷಿಣೆಯನ್ನು ಸ್ವೀಕರಿಸಿದನು.

೮೪. ಆಗ ಪಾರ್ವತಿಯು ಪತಿವಿರಹದಿಂದ ದುಃಖಿತಳಾಗಿ, ಕೈಮುಗಿದುಕೊಂಡು ಆ ಪುರೋಹಿತನನ್ನು ಕುರಿತು ಒಣಗಿಹೋದ ತುಟಿಗಂಟಲುಗಳಿಂದ ಇಂತು ನುಡಿಯಲಾರಂಭಿಸಿದಳು.

॥ ಪಾರ್ವತ್ಯುವಾಚ ॥

ಗೋಮೂಲ್ಯಂ ಮತ್ಪತಿಸಮಮಿತಿ ವೇದೇ ನಿರೂಪಿತಂ ।
ಗವಾಂ ಲಕ್ಷಂ ಪ್ರಯಚ್ಛಾಮಿ ದೇಹಿ ಮತ್ಸ್ವಾಮಿನಂ ದ್ವಿಜ ॥ ೮೫ ॥

ತದಾ ದಾಸ್ಯಾಮಿ ವಿಪ್ರೇಭ್ಯೋ ದಾನಾನಿ ವಿವಿಧಾನಿ ಚ ।
ಆತ್ಮಹೀನೋ ಹಿ ದೇಹಶ್ಚ ಕರ್ಮ ಕಿಂ ಕರ್ತುಮೀಶ್ವರಃ ॥ ೮೬ ॥

॥ ಸನತ್ಕುಮಾರ ಉವಾಚ ॥

ಗವಾಂ ಲಕ್ಷೇಣ ಮೇ ದೇವಿ ವಲ್ಗುನಾ ಕಿಂ ಪ್ರಯೋಜನಂ ।
ದತ್ತಸ್ಯಾಮೂಲ್ಯರತ್ನಸ್ಯ ಗವಾಂ ಪ್ರತ್ಯರ್ಪಣೇನ ಚ ॥ ೮೭ ॥

ಸ್ವಸ್ಯ ಸ್ವಸ್ಯ ಸ್ವಯಂ ದಾತಾ ಲೋಕಃ ಸರ್ವೋ ಜಗತ್ತ್ರಯೇ ।
ಕರ್ತುರೇವೇಪ್ಸಿತಂ ಕರ್ಮ ಭವೇತ್ಕಿಂ ವಾ ಪರೇಚ್ಛಯಾ ॥ ೮೮

---

೮೫. ಪಾರ್ವತಿ:—ಎಲೈ ವಿಪ್ರೋತ್ತಮನೇ, ಗೋವಿನ ಬೆಲೆಯು ಪತಿಗೆ ಸಮವೆಂದು ವೇದೋಕ್ತವಾಗಿದೆ ಆದುದರಿಂದ ಲಕ್ಷ ಗೋವುಗಳನ್ನು ನಿನಗೆ ಕೊಡುವೆನು. ನನ್ನ ಪತಿಯನ್ನು ಹಿಂದಕ್ಕೆ ಕೊಡು

೮೬. ಅನಂತರ ಬ್ರಾಹ್ಮಣರಿಗೆ ವಿಧವಿಧ ದಾನಗಳನ್ನು ಕೊಡುವೆನು. ಈಗ ಆತ್ಮರಹಿತವಾದ ದೇಹದಂತೆ ನಾನು ಯಾವ ಕರ್ಮಕ್ಕೂ ಶಕ್ತಳಾಗಿಲ್ಲ.

೮೭. ಸನತ್ಕುಮಾರ.—ಎಲೌ ದೇವಿಯೇ, ತೃಣಸದೃಶವಾದ ಲಕ್ಷಗೋವುಗಳಿಂದ ನನಗೇನುಪ್ರಯೋಜನ? ರತ್ನಪ್ರಾಯವಾದ ಈ ಅಮೂಲ್ಯ ದಕ್ಷಿಣೆಗೆ ಬದಲಾಗಿ ಗೋವುಗಳನ್ನು ಬದಲು ಕೊಡುವುದರಿಂದ ನಿನಗಾವಪ್ರಯೋಜನ ?

೮೮ ಜಗತ್ತ್ರಯದಲ್ಲಿರುವ ಸಕಲ ಜನಗಳೂ ತಮ್ಮ ತಮ್ಮ ವಸ್ತುಗಳನ್ನು ತಾವೇ ಇಚ್ಛೆಬಂದಂತೆ ದಾನ ಮಾಡಬಹುದು. ಕರ್ತೃವು ಇಚ್ಛಿಸಿದಂತೆ ಕರ್ಮವು ನಡೆಯುವುದೇ ಹೊರತು ಮತ್ತೊಬ್ಬರ ಇಚ್ಛೆಯಂತಲ್ಲ.

ದಿಗಂಬರಂ ಪುರಃ ಕೃತ್ವಾ ಭ್ರಮಿಷ್ಯಾಮಿ ಜಗತ್ತ್ರಯಂ ।
ಬಾಲಕಾನಾಂ ಬಾಲಿಕಾನಾಂ ಸಮೂಹಸ್ಮಿತಕಾರಣಂ ॥ ೮೯ ॥

ಇತ್ಯುಕ್ತ್ವಾ ಬ್ರಹ್ಮಣಃ ಪುತ್ರೋ ಗೃಹೀತ್ವಾ ಶಂಕರಂ ಮುನೇ ।
ಸನ್ನಿಧೌ ವಾಸಯಾಮಾಸ ತೇಜಸ್ವೀ ದೇವಸಂಸದಿ ॥ ೯೦ ॥

ದೃಷ್ಟ್ವಾ ಶಿವಂ ಗೃಹ್ಯಮಾಣಂ ಕುಮಾರೇಣ ಚ ಪಾರ್ವತೀ
ಸಮುದ್ಯತಾ ತನುಂ ತ್ಯಕ್ತುಂ ಶುಷ್ಕಕಂಠೌಷ್ಠತಾಲುಕಾ ॥ ೯೧ ॥

ವಿಚಿಂತ್ಯ ಮನಸಾ ಸಾಧ್ವೀತ್ಯೇವಮೇವ ದುರತ್ಯಯಂ ।
ನ ದೃಷ್ಟೋಽಭೀಷ್ಟದೇವಶ್ಚ ನ ಚ ಪ್ರಾಪ್ತಂ ಫಲಂ ವ್ರತೇ ॥ ೯೨ ॥

ಏತಸ್ಮಿನ್ನಂತರೇ ದೇವಾಃ ಪಾರ್ವತೀಸಹಿತಾಸ್ತದಾ ।
ಸದ್ಯೋ ದದೃಶುರಾಕಾಶೇ ತೇಜಸಾಂ ನಿಕರಂ ಪರಂ ॥ ೯೩ ॥

೮೯. ಬಾಲಕ ಬಾಲಕಿಯರಿಗೆ ಅತ್ಯಾನಂದದಾಯಕನಾದ ದಿಗಂಬರನನ್ನು (ಶಿವ) ಮುಂದುಮಾಡಿಕೊಂಡು ನಾನು ಮೂರುಲೋಕದಲ್ಲೂ ಭ್ರಮಿಸುವೆನು.

೯೦. ಬ್ರಹ್ಮಪುತ್ರನೂ ತೇಜಸ್ವಿಯೂ ಆದ ಸನತ್ಕುಮಾರನು ಹೀಗೆ ಹೇಳಿ, ಆ ದೇವತೆಗಳ ಸಭೆಯಲ್ಲಿ ಶಂಕರನನ್ನು ಕರೆದು ತನ್ನ ಸಮೀಪದಲ್ಲಿ ಕುಳ್ಳಿರಿಸಿ ಕೊಂಡನು.

೯೧. ಸನತ್ಕುಮಾರನು ಶಿವನನ್ನು ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡುದನ್ನು ಪಾರ್ವತಿಯು ನೋಡಿ, ದುಃಖದಿಂದ ಒಣಗಿದ ಗಂಟಲು ಮತ್ತು ತುಟಿಗಳುಳ್ಳವಳಾಗಿ ತನ್ನ ದೇಹತ್ಯಾಗಮಾಡಲುದ್ಯುಕ್ತಳಾದಳು.

೯೨. ತನ್ನ ಪತಿಯು ಪರಾಧೀನನಾದುದನ್ನೂ, ತನ್ನ ಅಭೀಷ್ಟದೇವನು ಪ್ರತ್ಯಕ್ಷನಾಗದುದನ್ನೂ, ವ್ರತದ ಸತ್ಫಲವು ದೊರೆಯದುದನ್ನೂ ಪರ್ಯಾಲೋಚಿಸಿ ಪಾರ್ವತಿಯು ದೇಹತ್ಯಾಗಕ್ಕೆ ಅನುವಾದಳು.

೯೩. ಈ ಮಧ್ಯದಲ್ಲಿ ಅಲ್ಲಿದ್ದ ದೇವತೆಗಳೂ ಮತ್ತು ಪಾರ್ವತಿಯೂ ಆಕಾಶದಲ್ಲಿ ಸೂರ್ಯಕೋಟಿ ಸಮಪ್ರಭೆಯುಳ್ಳ ತೇಜೋರಾಶಿಯನ್ನು ಕಂಡರು.

ಕೋಟಿಸೂರ್ಯಪ್ರಭೋರ್ಧ್ವಂ ಚ ಪ್ರಜ್ವಲಂತಂ ದಿಶೋ ದಶ ।
ಕೈಲಾಸಶೈಲಂ ಪುರತಃ ಸರ್ವದೇವಾದಿಭಿರ್ಯುತಂ ॥ ೯೪ ॥

ಸರ್ವಾಶ್ರಯಂ ಗಣಾಚ್ಛನ್ನಂ ವಿಸ್ತೀರ್ಣಂ ಮಂಡಲಾಕೃತಿಂ ।
ತಚ್ಚ ದೃಷ್ಟ್ವಾ ಭಗವತಸ್ತುಷ್ಟುವುಸ್ತೇ ಕ್ರಮೇಣ ಚ ॥ ೯೫ ॥

॥ ವಿಷ್ಣುರುವಾಚ ॥

ಬ್ರಹ್ಮಾಂಡಾನಿ ಚ ಸರ್ವಾಣಿ ಯಲ್ಲೋಮವಿವರೇಷು ಚ ।
ಸೋಽಯಂ ತೇ ಷೋಡಶಾಂಶಶ್ಚ ಕೇ ವಯಂ ಯೋ ಮಹಾವಿರಾಟ್ ॥೯೬॥

॥ ಬ್ರಹ್ಮೋವಾಚ ॥

ವೇದೋಪಯುಕ್ತಂ ದೃಶ್ಯಂ ಯತ್ಪ್ರತ್ಯಕ್ಷಂ ದ್ರಷ್ಟುಮೀಶ್ವರ ।
ಸ್ತೋತುಂ ತದ್ವರ್ಣಿತುಮಹಂ ಶಕ್ತಃ ಕಿಂ ಸ್ತೌಮಿ ತತ್ಪರಃ ॥ ೯೭ ॥

೯೪. ದಶದಿಕ್ಕುಗಳನ್ನೂ ಬೆಳಗುತ್ತಿರುವ ಆ ತೇಜೋಮಂಡಲವು ಸಕಲ ದೇವತೆಗಳನ್ನೊಳಗೊಂಡು ಕೈಲಾಸಪರ್ವತದ ಮುಂಭಾಗದಲ್ಲಿ ಕಾಣಿಸಿಕೊಂಡಿತು.

೯೫. ಸಕಲ ದೇವಗಣಗಳಿಗೆ ಆಶ್ರಯವೂ, ಅತಿ ವಿಸ್ತೀರ್ಣವೂ, ಮಂಡಲಾಕಾರವೂ ಆದ ಆ ತೇಜಸ್ಸನ್ನು ನೋಡಿ ದೇವತೆಗಳೆಲ್ಲರೂ ಕ್ರಮವಾಗಿ ಸ್ತುತಿಸಿದರು.

೯೬. ವಿಷ್ಣು.—ನಿಖಿಲವಿಶ್ವವೂ ಯಾರ ಲೋಮಕೂಪಗಳಲ್ಲಿ ಅಡಗಿದೆಯೋ ಅಂಥ ಮಹಾ ವಿರಾಟ್ಪುರುಷನೇ ನಿನ್ನ ಹದಿನಾರನೆಯ ಒಂದಂಶವೆಂದಮೇಲೆ ನಿನ್ನ ಮಹಿಮೆಯನ್ನು ಕಂಡರಿದವರಾರು ?

೯೭. ಬ್ರಹ್ಮ:- ಯಾರನ್ನು ವೇದಮೂಲಕವಾಗಿ ತಿಳಿಯಲು ಅಥವಾ ಸಾಕ್ಷಾದ್ದರ್ಶನಮಾಡಲು ಸಾಧ್ಯವೋ, ಅವನನ್ನು ವರ್ಣಿಸಿ ಸ್ತುತಿಸಬಹುದು. ನಿಗಮಾತೀತನೂ, ಅದೃಶ್ಯನೂ ಆದ ನಿನ್ನನ್ನು ನಾನು ಸ್ತುತಿಸಿ ಮುಗಿಯಲಾರೆನು.

|| ಶ್ರೀ ಮಹಾದೇವ ಉವಾಚ ||

ಜ್ಞಾನಾಧಿಷ್ಠಾತೃದೇವೋಽಹಂ ಸ್ತೌಮಿ ಜ್ಞಾನಪರಂ ಚ ಕಿಂ
ಸರ್ವಾನಿರ್ವಚನೀಯಂ ತಂ ತ್ವಾಂ ಸ್ವೇಚ್ಛಾಮಯಂ ವಿಭುಂ || ೯೮ ||

|| ಧರ್ಮ ಉವಾಚ ||

ಅದೃಶ್ಯಮವತಾರೇಷು ಯದ್ದೃಶ್ಯಂ ಸರ್ವಜಂತುಭಿಃ |
ಕಿಂ ಸ್ತೌಮಿ ತೇಜೋರೂಪಂ ತದ್ಭಕ್ತಾನುಗ್ರಹವಿಗ್ರಹಂ || ೯೯ ||

|| ದೇವಾ ಊಚುಃ ||

ಕೇ ವಯಂ ತ್ವತ್ಕಲಾಂಶಾಶ್ಚ ಕಿಂ ವಾ ತ್ವಾಂ ಸ್ತೋತುಮೀಶ್ವರಾಃ |
ಸ್ತೋತುಂ ನಶಕ್ತಾ ವೇದಾ ಯಂ ನ ಚ ಶಕ್ತಾ ಸರಸ್ವತೀ || ೧೦೦ ||

|| ಮುನಯ ಊಚುಃ ||

ವೇದಾನ್ಪಠಿತ್ವಾ ವಿದ್ವಾಂಸೋ ವಯಂ ಕಿಂ ವೇದಕಾರಣಂ |
ಸ್ತೋತುಮೀಶಾ ನ ವಾಣೀ ಚ ತ್ವಾಂ ವಾಙ್ಮನಸಯೋಃ ಪರಂ. || ೧೦೧

---

೯೮. ಮಹಾದೇವ :— ಜ್ಞಾನಾತೀತನೂ, (ನಿನ್ನ ಸ್ವರೂಪವು ಇಷ್ಟೆಂದು) ಅನಿರ್ವಚನೀಯನೂ, ಸ್ವೇಚ್ಛಾಮಯನೂ, ವಿಶ್ವವ್ಯಾಪಿಯೂ ಆದ ನಿನ್ನ ಮಹಿಮೆಯನ್ನು ಜ್ಞಾನಾಧಿಷ್ಠಾತೃದೇವನಾದ ನಾನು ವರ್ಣಿಸಿ ಸ್ತುತಿಸಲಾರೆನು.

೯೯. ಧರ್ಮ :—ಸ್ವಯಂತೇಜೋರೂಪನಾದುದರಿಂದ ಅದೃಶ್ಯನೂ, ಭಕ್ತರ ಅನುಗ್ರಹಕ್ಕಾಗಿ ಅವತಾರಗಳೆತ್ತಿ ಸಕಲ ಜಂತುಗಳಿಂದ ದೃಶ್ಯನೂ ಆದ ಪರಮಾತ್ಮನನ್ನು ನಾನು ಹೊಗಳಲು ಸಾಧ್ಯವೇ ?

೧೦೦. ದೇವತೆಗಳು :—ಚತುರ್ವೇದಗಳೂ ಮತ್ತು ಸರಸ್ವತಿಯೂ ಯಾವ ಪರಮಾತ್ಮನನ್ನು ಸ್ತುತಿಸಿ ಮುಗಿಯಲಾರವೋ, ಆ ಪರಮಾತ್ಮನ ಕೇವಲ ಕಲಾಮಾತ್ರದಿಂದ ಜನಿಸಿದ ನಾವು ಅವನನ್ನು ಸ್ತುತಿಸಲು ಶಕ್ತರಾಗುವುದೆಂತು ?

೧೦೧. ಮುನಿಗಳು:—ವಾಙ್ಮನಸ್ಸುಗಳಿಗೆ ಅಗೋಚರವಾದ ನಿನ್ನನ್ನು ಸ್ತುತಿಸಲು ವಾಗ್ದೇವಿಗೇ ಸಾಧ್ಯವಿಲ್ಲದಿರುವಾಗ, ವೇದಾಭ್ಯಾಸದಿಂದ ವಿದ್ವಾಂಸರೆನಿಸಿಕೊಂಡಿರುವ ನಾವು ವೇದಕಾರಣನಾದ ನಿನ್ನನ್ನು ಸ್ತುತಿಸಬಲ್ಲೆವೇ ?

॥ ಸರಸ್ವತ್ಯುವಾಚ ॥

ನಾಗಧಿಷ್ಠಾತೃದೇವೀಂ ಮಾಂ ವದಂತೇ ವೇದವಾದಿನಃ ।
ಕಿಂಚಿನ್ನ ಶಕ್ತಾ ತ್ವಾಂ ಸ್ತೋತುಮಹೋ ವಾಙ್ಮನಸೋಃ ಪರಂ ॥ ೧೦೨ ॥

॥ ಸಾವಿತ್ರ್ಯುವಾಚ ॥

ವೇದಪ್ರಸೂರಹಂ ನಾಥ ಸೃಷ್ಟಾತ್ವತ್ಕಲಯಾ ಪುರಾ ।
ಕಿಂ ಸ್ತೌಮಿ ಸ್ತ್ರೀಸ್ವಭಾವೇನ ಸರ್ವಕಾರಣಕಾರಣಂ ॥ ೧೦೩ ॥

॥ ಲಕ್ಷ್ಮೀರುವಾಚ ॥

ತ್ವದಂಶವಿಷ್ಣುಕಾಂತಾಹಂ ಜಗತ್ಪೋಷಣಕಾರಿಣೀ ।
ಕಿಂ ಸ್ತೌಮಿ ತ್ವತ್ಕಲಾಸೃಷ್ಟಾ ಜಗತಾಂ ಬೀಜಕಾರಣಂ ॥ ೧೦೪ ॥

॥ ಹಿಮಾಲಯ ಉವಾಚ ॥

ಹಸಂತಿ ಸಂತೋ ಮಾಂ ನಾಥ ಕರ್ಮಣಾ ಸ್ಥಾವರಂ ಪರಂ ।
ಸ್ತೋತುಂ ಸಮುದ್ಯತಂ ಕ್ಷುದ್ರಃ ಕಿಂ ಸ್ತೌಮಿ ಸ್ತೋತುಮಕ್ಷಮಃ ॥ ೧೦೫ ॥

೧೦೨. ಸರಸ್ವತಿ:—ವೇದಾಧ್ಯಾಯಿಗಳೆಲ್ಲರೂ ನನ್ನನ್ನು ಮಾತಿಗೆ ಅಧಿದೇವತೆಯೆಂದು ಕರೆಯುವರು. ಮನೋವಾಕ್ಕುಗಳಿಗೆ ಸಿಲುಕದ ನಿನ್ನನ್ನು ನಾನೆಂತು ಬಣ್ಣಿಸಲಿ.

೧೦೩. ಸಾವಿತ್ರಿ:—ಎಲೈ ಪ್ರಭುವೇ ನಿನ್ನ ಕಲೆಯಿಂದ ಸೃಷ್ಟಳಾದ ನಾನು ವೇದಮಾತೆಯೆನಿಸಿಕೊಂಡಿರುವೆನು ಕಾರಣಗಳಿಗೆಲ್ಲ ಆದಿಕಾರಣನಾದ ನಿನ್ನನ್ನು ಚಂಚಲಮನಸ್ಸುಳ್ಳ ಹೆಂಗಸು ಸ್ತುತಿಸಲು ಸಾಧ್ಯವೇ ?

೧೦೪. ಲಕ್ಷ್ಮೀ:—ನಿನ್ನ ಕಲೆಯಿಂದ ಜನಿಸಿ, ನಿನ್ನ ಅಂಶಸ್ವರೂಪನಾದ ವಿಷ್ಣುವಿನ ಕಾಂತೆಯಾಗಿ, ಜಗತ್ತಿನ ರಕ್ಷಣೆಗೆ ಕಾರಣಳಾಗಿರುವ ನಾನು ಜಗತ್ತಿನ ಮೂಲಕಾರಣನಾದ ನಿನ್ನನ್ನು ಎಂತು ಸ್ತುತಿಸಲಿ ?

೧೦೫. ಹಿಮಾಲಯ:—ಜಗತ್ಪತಿಯೇ, ಜನ್ಮಾಂತರ ಕರ್ಮದಿಂದ ಸ್ಥಾವರನಾಗಿ ಜನ್ಮವೆತ್ತಿರುವ ನಾನು ನಿನ್ನನ್ನು ಸ್ತುತಿಸುವೆನೆಂದು ತೊಡಗಿದರೆ ನನ್ನನ್ನು ನೋಡಿ ಸತ್ಪುರುಷರೆಲ್ಲರೂ ಹಾಸ್ಯಮಾಡುವರು ಆದುದರಿಂದ ಕ್ಷುದ್ರನಾದ ನಾನು ನಿನ್ನನ್ನು ಸ್ತುತಿಸಲಾರೆನು.

ಕ್ರಮೇಣ ಸರ್ವೇ ತಂ ಸ್ತುತ್ವಾ ದೇವಾ ವಿರರಮುರ್ಮುನೇ ।
ದೇವ್ಯಶ್ಚ ಮುನಯಃ ಸರ್ವೇ ಪಾರ್ವತೀ ಸ್ತೋತುಮುದ್ಯತಾ ॥ ೧೦೬ ॥

ಧೌತವಸ್ತ್ರಾ ಜಟಾಭಾರಂ ಬಿಭ್ರತೀ ಸುವ್ರತಾ ವ್ರತೇ ।
ಪ್ರೇರಿತಾ ಪರಮಾತ್ಮಾನಂ ವ್ರತಾರಾಧ್ಯಂ ಶಿವೇನ ಚ ॥ ೧೦೭ ॥

ಜ್ವಲದಗ್ನಿಶಿಖಾರೂಪಾ ತೇಜೋಮೂರ್ತಿಮತೀಸತೀ ।
ತಪಸಾಂ ಫಲದಾ ಮಾತಾ ಜಗತಾಂ ಸರ್ವಕರ್ಮಣಾಂ ॥ ೧೦೮ ॥

॥ ಪಾರ್ವತ್ಯುವಾಚ ॥

ಕೃಷ್ಣ ಜಾನಾಸಿ ಮಾಂ ಭದ್ರ ನಾಹಂ ತ್ವಾಂ ಜ್ಞಾತುಮೀಶ್ವರೀ ।
ಕೇ ವಾ ಜಾನಂತಿ ವೇದಜ್ಞಾ ವೇದಾ ವಾ ವೇದಕಾರಕಾಃ ॥ ೧೦೯ ॥

೧೦೬. ನಾರದ ಮುನಿಯೇ, ಈ ಪ್ರಕಾರವಾಗಿ ಎಲ್ಲ ದೇವತೆಗಳೂ ದೇವಿಯರೂ ಮತ್ತು ಮುನಿಗಳೂ ಕ್ರಮವರಿತು ಆ ಪರಮಾತ್ಮನನ್ನು ಸ್ಮರಿಸಿ ಸುಮ್ಮನಾಗಲು ಅನಂತರ ಪಾರ್ವತಿಯು ಸ್ತುತಿಸಲಾರಂಭಿಸಿದಳು.

೧೦೭. ಶುಭ್ರವಸ್ತ್ರವನ್ನೂ ಜಟಾಭಾರವನ್ನೂ ಧರಿಸಿ ವ್ರತನಿಷ್ಠಳಾಗಿದ್ದ ಆ ಪಾರ್ವತಿಯು ಶಿವನಿಂದ ಪ್ರೇರಿತಳಾಗಿ ವ್ರತಾರಾಧ್ಯನಾದ ಪರಮಾತ್ಮನನ್ನು ಸ್ತುತಿಸಲು ಮೊದಲುಮಾಡಿದಳು.

೧೦೮. ಉರಿಯುತ್ತಿರುವ ಅಗ್ನಿಶಿಖೆಯಂತೆ ತೇಜೋಮಯಳೂ. ಜಗತ್ತಿನಲ್ಲಿರುವ ಸಕಲರ ಕರ್ಮ ಮತ್ತು ತಪಸ್ಸಿನ ಫಲದಾತ್ರಿಯೂ ಆದ ಪಾರ್ವತಿಯು ಈ ರೀತಿಯಾಗಿ ಸ್ತುತಿಸಿದಳು.

೧೦೯. ಪಾರ್ವತಿ :—ಎಲೈ ಶ್ರೀಕೃಷ್ಣಪರಮಾತ್ಮನೇ ನೀನು ನನ್ನ ಸ್ವರೂಪವನ್ನರಿತಿರುವೆ. ಆದರೆ ನಾನು ಮಾತ್ರ ನಿನ್ನ ಸ್ವರೂಪವನ್ನರಿಯಲಾರೆ ಅಷ್ಟೇಕೆ? ವೇದಗಳೂ, ವೇದಕರ್ತೃಗಳೂ ಮತ್ತು ವೇದಜ್ಞರೂ ನಿನ್ನ ಸ್ವರೂಪವನ್ನು ತಿಳಿಯಲಾರರು

ತ್ವದಂಶಾಸ್ತ್ವಾಂ ನ ಜಾನಂತಿ ಕಥಂ ಜ್ಞಾಸ್ಯಂತಿ ತೇ ಕಲಾಃ ।
ತ್ವಂ ಚಾಪಿ ತತ್ವಂ ಜಾನಾಸಿ ಕಿಮನ್ಯೇ ಜ್ಞಾತುಮೀಶ್ವರಾಃ ॥ ೧೧೦ ॥

ಸೂಕ್ಷ್ಮಾತ್ಸೂಕ್ಷ್ಮತಮೋಽವ್ಯಕ್ತಃ ಸ್ಥೂಲಾತ್ಸ್ಥೂಲತಮೋ ಮಹಾನ್ ।
ವಿಶ್ವಸ್ತ್ವಂ ವಿಶ್ವರೂಪಶ್ಚ ವಿಶ್ವಬೀಜಂ ಸನಾತನಃ ॥ ೧೧೧ ॥

ಕಾರ್ಯಂ ತ್ವಂ ಕಾರಣಂ ತ್ವಂ ಚ ಕಾರಣಾನಾಂ ಚ ಕಾರಣಂ ।
ತೇಜಸ್ವರೂಪೋ ಭಗವಾನ್ನಿರಾಕಾರೋ ನಿರಾಶ್ರಯಃ ॥ ೧೧೨ ॥

ನಿರ್ಲಿಪ್ತೋ ನಿರ್ಗುಣಃ ಸಾಕ್ಷೀ ಸ್ವಾತ್ಮಾರಾಮಃ ಪರಾತ್ಪರಃ ।
ಪ್ರಕೃತೀಶೋ ವಿರಾಡ್ಬೀಜಂ ವಿರಾಡ್ರೂಪಸ್ತ್ವಮೇವ ಚ ।
ಸಗುಣಸ್ತ್ವಂ ಪ್ರಾಕೃತಿಕಃ ಕಲಯಾ ಸೃಷ್ಟಿಹೇತವೇ ॥ ೧೧೩ ॥

೧೧೦. ನಿನ್ನ ಅಂಶಾವತಾರಿಗಳೇ ನಿನ್ನ ಸ್ವರೂಪವನ್ನು ತಿಳಿಯಲಾಗದಿರುವಾಗ ನಿನ್ನ ಕಲಾಸಂಭೂತರು ಹೇಗೆ ತಿಳಿಯಬಲ್ಲರು ? ಆತ್ಮತತ್ವವನ್ನು ಆತ್ಮಸ್ವರೂಪನಾದ ನೀನೇ ಬಲ್ಲೆಯಲ್ಲದೆ ಇತರರಾರೂ ತಿಳಿಯರು

೧೧೧. ಸೂಕ್ಷ್ಮವಾದ ವಸ್ತುಗಳಿಗಿಂತಲೂ ಅತಿಸೂಕ್ಷ್ಮನಾದುದರಿಂದ ಅವ್ಯಕ್ತನೂ, ಸ್ಥೂಲವಸ್ತುಗಳಿಗೆಲ್ಲ ಸ್ಥೂಲನಾದುದರಿಂದ ಮಹತ್ಸ್ವರೂಪನೂ ಆದ ನೀನು ವಿಶ್ವಕ್ಕೆ ಬೀಜಸ್ವರೂಪನೂ, ವಿಶ್ವರೂಪನೂ, ವಿಶ್ವವ್ಯಾಪಕನೂ ಆಗಿರುವೆ.

೧೧೨. ಕಾರ್ಯರೂಪನೂ, ಕಾರಣನೂ ಆಗಿರುವ ನೀನೇ ಕಾರಣಗಳಿಗೆಲ್ಲ ಆದಿಕಾರಣನೂ ಆಗಿರುವೆ ನಿನ್ನ ತೇಜೋಮಯವಾದ ರೂಪವು ನಿರಾಕಾರವೂ, ನಿರಾಶ್ರಯವೂ ಆದುದು.

೧೧೩. ನಿರ್ಲಿಪ್ತನೂ, ನಿರ್ಗುಣನೂ, ಸಾಕ್ಷಿಸ್ವರೂಪನೂ, ಸ್ವಾತ್ಮಾರಾಮನೂ, ಪರಾತ್ಪರನೂ, ಪ್ರಕೃತಿಗೊಡೆಯನೂ, ವಿರಾಡ್ಬೀಜನೂ, ವಿರಾಡ್ರೂಪನೂ ಆದ ನೀನೇ ಸೃಷ್ಟ್ಯುನ್ಮುಖನಾದಾಗ ನಿನ್ನದೊಂದು ಕಲೆಯಿಂದ ಸಗುಣನೂ ಪ್ರಾಕೃತನೂ ಆಗುವೆ.

ಪ್ರಕೃತಿಸ್ತ್ವಂ ಪುಮಾಂಸ್ತ್ವಂ ಚ ವೇದಾಽನ್ಯೋನ ಕ್ವಚಿದ್ಭವೇತ್ ।
ಜೀವಸ್ತ್ವಂ ಸಾಕ್ಷಿಣೋ ಭೋಗೀ ಸ್ವಾತ್ಮನಃ ಪ್ರತಿಬಿಂಬಕಃ ॥ ೧೧೪ ॥

ಕರ್ಮ ತ್ವಂ ಕರ್ಮಬೀಜಂ ತ್ವಂ ಕರ್ಮಣಾಂ ಫಲದಾಯಕಃ ।
ಧ್ಯಾಯಂತಿ ಯೋಗಿನಸ್ತೇಜಸ್ತ್ವದೀಯಮಶರೀರಿ ಯತ್ ॥ ೧೧೫ ॥

ಕೇಚಿಚ್ಚತುರ್ಭುಜಂ ಶಾಂತಂ ಲಕ್ಷ್ಮೀಕಾಂತಂ ಮನೋಹರಂ ।
ವೈಷ್ಣವಾಶ್ಚೈವ ಸಾಕಾರಂ ಕಮನೀಯಂ ಮನೋಹರಂ ।
ಶಂಖಚಕ್ರಗದಾಪದ್ಮಧರಂ ಪೀತಾಂಬರಂ ಪರಂ ॥ ೧೧೬ ॥

ದ್ವಿಭುಜಂ ಕಮನೀಯಂ ಚ ಕಿಶೋರಂ ಶ್ಯಾಮಸುಂದರಂ ।
ಶಾಂತಂ ಗೋಪಾಂಗನಾಕಾಂತಂ ರತ್ನಭೂಷಣಭೂಷಿತಂ ॥ ೧೧೭ ॥

ಏವಂ ತೇಜಸ್ವಿನಂ ಭಕ್ತಾಃ ಸೇವಂತೇ ಸತತಂ ಮುದಾ ।
ಧ್ಯಾಯಂತಿ ಯೋಗಿನೋ ಯತ್ತತ್ಕುತಸ್ತೇಜಸ್ವಿನಂ ವಿನಾ ॥ ೧೧೮ ॥

೧೧೪ ಪ್ರಕೃತಿ ಮತ್ತು ಪುರುಷರ ರೂಪದ್ವಯವನ್ನು ಹೊಂದಬಲ್ಲ ನಿನ್ನ ಮಹಿಮೆಯನ್ನು ಯಾರೂ ತಿಳಿಯಲಾರರು. ಸಾಕ್ಷಿಸ್ವರೂಪನೂ, ಕರ್ಮಫಲಭೋಗಿಯೂ, ಆತ್ಮಪ್ರತಿಬಿಂಬರೂಪನಾದ ಜೀವನೆನಿಸಿರುವನೂ ನೀನೇ ಆಗಿರುವೆ.

೧೧೫. ಕರ್ಮಸ್ವರೂಪನೂ, ಕರ್ಮಕಾರಣನೂ, ಕರ್ಮಫಲದಾಯಕನೂ ಆದ ನಿನ್ನ ಶರೀರರಹಿತವಾದ ಕೇವಲ ತೇಜಸ್ಸನ್ನು ಯೋಗಿಗಳು ಧ್ಯಾನಿಸುವರು

೧೧೬. ವೈಷ್ಣವದೀಕ್ಷೆಯನ್ನು ಕೈಗೊಂಡ ಭಕ್ತರಾದರೋ ಚತುರ್ಭುಜನೂ, ಶಾಂತನೂ, ಲಕ್ಷ್ಮೀಕಾಂತನೂ, ಮನೋಹರನೂ, ಪೀತಾಂಬರವಾಸಿಯೂ, ಶಂಖಚಕ್ರಗದಾಪದ್ಮಧಾರಿಯೂ ಆದ ಪರಮಾತ್ಮನ ಸುಂದರಸಾಕಾರರೂಪವನ್ನು ಭಜಿಸುವರು.

೧೧೭. ಮತ್ತೆ ಕೆಲವುಭಕ್ತರು ದ್ವಿಭುಜನೂ, ಶಾಂತನೂ, ರಾಧಾಕಾಂತನೂ, ರತ್ನಭೂಷಣಭೂಷಿತನೂ, ಗೋಪಕಿಶೋರನೂ ಆದ ಶ್ರೀಕೃಷ್ಣನ ಕಮನೀಯಾಕಾರವನ್ನು ಭಜಿಸುವರು.

೧೧೮. ಯೋಗಿಗಳು ಧ್ಯಾನಿಸುವ ತೇಜೋಮಯನಾದ ಪರಮಾತ್ಮನಿಗೆ ಆಧಾರವೊಂದನ್ನು ಭಕ್ತರು ಮೇಲೆ ಹೇಳಿದ ರೀತಿಯಲ್ಲಿ ಕಲ್ಪಿಸಿಕೊಂಡು ಯಾವಾಗಲೂ ಭಕ್ತಿಯಿಂದ ಧ್ಯಾನಿಸುವರು.

ತತ್ತೇಜೋ ಬಿಭ್ರತಾಂ ದೇವದೇವಾನಾಂ ತೇಜಸಾ ಪುರಾ ।
ಆವಿರ್ಭೂತಾ ಸುರಾಣಾಂ ಚ ವಧಾಯ ಬ್ರಹ್ಮಣಾ ಸ್ತುತಾ ॥ ೧೧೯ ॥

ನಿತ್ಯಾ ತೇಜಸ್ಸ್ವರೂಪಾಹಂ ಧೃತ್ವಾ ವೈ ವಿಗ್ರಹಂ ವಿಭೋ ।
ಸ್ತ್ರೀರೂಪಂ ಕಮನೀಯಂ ಚ ವಿಧಾಯ ಸಮುಪಸ್ಥಿತಾ ॥ ೧೨೦ ॥

ಮಾಯಯಾ ತವ ಮಾಯಾಹಂ ಮೋಹಯಿತ್ವಾ ಸುರಾನ್ಪುರಾ ।
ನಿಹತ್ಯ ಸರ್ವಾಂಶ್ಚೈಲೇಂದ್ರಮಗಮಂ ತಂ ಹಿಮಾಲಯಂ ॥ ೧೨೧ ॥

ತತೋಽಹಂ ಸಂಸ್ತುತಾ ದೇವೈಸ್ತಾರಕಾಕ್ಷೇಣ ಪೀಡಿತೈಃ ।
ಅಭವಂ ದಕ್ಷಜಾಯಾಯಾಂ ಶಿವಸ್ತ್ರೀ ಭವಜನ್ಮನಿ ॥ ೧೨೨ ॥

ತ್ಯಕ್ತ್ವಾ ದೇಹಂ ದಕ್ಷಯಜ್ಞೇ ಶಿವಾಹಂ ಶಿವನಿಂದಯಾ ।
ಅಭವಂ ಶೈಲಜಾಯಾಯಾಂ ಶೈಲಾಧೀಶಸ್ಯ ಕರ್ಮಣಾ ॥ ೧೨೩ ॥

೧೧೯. ಆ ಆತ್ಮತೇಜಸ್ಸನ್ನು ಧರಿಸಿರುವ ಎಲ್ಲ ದೇವತೆಗಳ ತೇಜಸ್ಸಿನಿಂದ ನಾನು ಪೂರ್ವದಲ್ಲಿ ರಾಕ್ಷಸವಧಗಾಗಿ ಬ್ರಹ್ಮನಿಂದ ಸ್ತುತಳಾಗಿ ಆವಿರ್ಭವಿಸಿದೆನು

೧೨೦. ನಿತ್ಯಳೂ ತೇಜಃಸ್ವರೂಪಳೂ ಆದ ನಾನು ಅತಿಸುಂದರವಾದಸ್ತ್ರೀಯ ಶರೀರವನ್ನು ಧರಿಸಿ, ರಾಕ್ಷಸ ಸಂಹಾರಕ್ಕಾಗಿ ಆವಿರ್ಭವಿಸಿದೆನು

೧೨೧. ನಿನ್ನ ಮಾಯಾಸ್ವರೂಪಳಾದ ನಾನು ಮಾಯಾಶಕ್ತಿಯಿಂದ ರಾಕ್ಷಸರನ್ನೆಲ್ಲ ಮೋಹಗೊಳಿಸಿ, ಎಲ್ಲರನ್ನೂ ಸಂಹರಿಸಿ, ಶೈಲರಾಜನಾದ ಹಿಮವಂತನ ಸಮೀಪಕ್ಕೆ ಹೋದೆನು

೧೨೨. ಅನಂತರ ತಾರಕಾಸುರನಿಂದ ಪೀಡಿತರಾದ ದೇವತೆಗಳಿಂದ ಸ್ತುತಳಾಗಿ, ದಕ್ಷಬ್ರಹ್ಮನ ಪತ್ನಿಯಲ್ಲಿ ಜನಿಸಿ, ಭವರೂಪನಾದ ಶಿವನ ಪತ್ನಿಯಾದೆನು.

೧೨೩. ಶಿವೆಯಾದ ನಾನು ದಕ್ಷನು ಮಾಡಿದ ಶಿವನಿಂದೆಯನ್ನು ಸಹಿಸಲಾರದ ದಕ್ಷಯಜ್ಞದಲ್ಲಿ ದೇಹತ್ಯಾಗಮಾಡಿ, ಶೈಲರಾಜನ ಕರ್ಮಾನುಗುಣವಾಗಿ ಅವನ ಪತ್ನಿಯಾದ ಮೇನಕೆಯಲ್ಲಿ ಜನ್ಮವೆತ್ತಿದೆನು.

ಅನೇಕ ತಪಸಾ ಪ್ರಾಪ್ತಃ ಶಿವಶ್ಚಾತ್ರಾಪಿ ಜನ್ಮನಿ ।
ಪಾಣಿಂ ಜಗ್ರಾಹ ಮೇ ಯೋಗೀ ಪ್ರಾರ್ಥಿತೋ ಬ್ರಹ್ಮಣಾ ವಿಭುಃ॥ ೧೨೪ ॥

ಶೃಂಗಾರಜಂ ಚ ತತ್ತೇಜೋ ನಾಲಭಂ ದೇವಮಾಯಯಾ ।
ಸ್ತೌಮಿ ತ್ವಾಮೇವ ತೇನೇಶ ಪುತ್ರದುಃಖೇನ ದುಃಖಿತಾ ॥ ೧೨೫ ॥

ವ್ರತೇ ಭವದ್ವಿಧಂ ಪುತ್ರಂ ಲಬ್ಧುಮಿಚ್ಛಾಮಿ ಸಾಂಪ್ರತಂ ।
ದೇವೇನ ವಿಹಿತಾ ವೇದೇ ಸಾಂಗೇ ಸ್ವಸ್ವಾಮಿದಕ್ಷಿಣಾ ॥ ೧೨೬ ॥

ಶ್ರುತ್ವಾ ಸರ್ವಂ ಕೃಪಾಸಿಂಧೋ ಕೃಪಾಂ ಮೇ ಕರ್ತುಮರ್ಹಸಿ ।
ಇತ್ಯುಕ್ತ್ವಾ ಪಾರ್ವತೀ ತತ್ರ ವಿರರಾಮ ಚ ನಾರದ ॥ ೧೨೭ ॥

---

೧೨೪. ಈ ಜನ್ಮದಲ್ಲಿಯೂ ಕೂಡ ನನ್ನ ತಪೋಬಲದಿಂದ ಶಿವನು ಪತಿಯಾಗಿ ಲಭಿಸಿದನು. ಯೋಗೀಶ್ವರನಾದ ಶಿವನು ಬ್ರಹ್ಮನಿಂದ ಪ್ರಾರ್ಥಿತನಾಗಿ ನನ್ನ ಪಾಣಿಗ್ರಹಣಮಾಡಿದನು.

೧೨೫. ಅವನೊಡನೆ ಅನೇಕ ಕಾಮಸುಖಗಳನ್ನನುಭವಿಸಿದರೂ ದೇವಮಾಯೆಯಿಂದ ಶಿವನ ದಿವ್ಯ ಶೃಂಗಾರ ತೇಜಸ್ಸನ್ನು ನಾನು ಹೊಂದಲಾಗಲಿಲ್ಲ. ಆದುದರಿಂದ ಅಪುತ್ರವತಿಯಾದ ನಾನು ದುಃಖಿತಳಾಗಿ ನಿನ್ನನ್ನು ಪುತ್ರಪ್ರಾಪ್ತಿಗಾಗಿ ಸ್ತುತಿಸುತ್ತಿದ್ದೇನೆ.

೧೨೬. ಈಗ ನಾನು ಮಾಡಿದ ವ್ರತದ ಫಲವಾಗಿ ನಿನ್ನಂಥ ದಿವ್ಯಪುತ್ರನನ್ನು ಪಡೆಯಲು ಬಯಸುತ್ತೇನೆ. ಆದರೆ ಸರ್ವೇಶ್ವರನಾದ ನೀನು ಈ ವ್ರತವು ಸಂಪೂರ್ಣಗೊಳ್ಳಲು ಪತಿಯನ್ನೇ ದಕ್ಷಿಣೆಯಾಗಿ ಕೊಡಬೇಕೆಂದು ವೇದದಲ್ಲಿ ನಿರೂಪಿಸಿರುವೆ. ಆದರಂತೆ ನನ್ನ ಪತಿಯನ್ನು ದಕ್ಷಿಣೆಯಾಗಿ ಸಮರ್ಪಿಸಿರುವೆನು.

೧೨೭. ಆದುದರಿಂದ ದಯಾಮಯನಾದ ನೀನು ನನ್ನಲ್ಲಿ ದಯೆ ತೋರಿ, ನನ್ನ ಬಯಕೆಗಳನ್ನು ಈಡೇರಿಸು. (ನಾರಾಯಣ) ಎಲೈ ನಾರದನೇ, ಪಾರ್ವತೀದೇವಿಯು ಈ ರೀತಿಯಾಗಿ ಸ್ತುತಿಸಿ ಮೌನದಿಂದಿದ್ದಳು.

ಭಾರತೇ ಪಾರ್ವತೀಸ್ತೋತ್ರಂ ಯಃ ಶೃಣೋತಿ ಸುಸಂಯುತಃ ।
ಸತ್ಪುತ್ರಂ ಲಭತೇ ನೂನಂ ವಿಷ್ಣುತುಲ್ಯಪರಾಕ್ರಮಂ ॥ ೧೨೮ ॥

ಸಂವತ್ಸರಂ ಹವಿಷ್ಯಾಶೀ ಹರಿಮಭ್ಯರ್ಚ್ಯ ಭಕ್ತಿತಃ ।
ಸುಪುಣ್ಯಕವ್ರತಫಲಂ ಲಭತೇ ನಾತ್ರ ಸಂಶಯಃ ॥ ೧೨೯ ॥

ವಿಷ್ಣುಸ್ತೋತ್ರಮಿದಂ ಬ್ರಹ್ಮನ್ಸರ್ವಸಂಪತ್ತಿವರ್ಧನಂ ।
ಸುಖದಂ ಮೋಕ್ಷದಂ ಸಾರಂ ಸ್ವಾಮಿಸೌಭಾಗ್ಯವರ್ಧನಂ ॥ ೧೩೦ ॥

ಸರ್ವಸೌಂದರ್ಯಬೀಜಂ ಚ ಯಶೋರಾಶಿವಿವರ್ಧನಂ ।
ಹರಿಭಕ್ತಿಪ್ರದಂ ತತ್ವಜ್ಞಾನಬುದ್ಧಿಸುಖಪ್ರದಂ ॥ ೧೩೧ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ ನಾರದ ನಾರಾಯಣಸಂವಾದೇ ಪುಣ್ಯಕವ್ರತೇ ಪತಿದಾನೇ ಪಾರ್ವತೀಕೃತಂ ಶ್ರೀಕೃಷ್ಣಸ್ತೋತ್ರಕಥನಂ ನಾಮ ಸಪ್ತಮೋಽಧ್ಯಾಯಃ

---

೧೨೮. ಭರತಖಂಡದಲ್ಲಿ ಯಾರು ಪಾರ್ವತಿಯು ಮಾಡಿದ ಈ ಸ್ತೋತ್ರವನ್ನು ಭಕ್ತಿಶ್ರದ್ಧೆಯಿಂದ ಕೇಳುವರೋ, ಅವರು ವಿಷ್ಣುವಿಗೆ ಸದೃಶ ಪರಾಕ್ರಮಿಯಾದ ಸತ್ಪುತ್ರನನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೧೨೯. ಒಂದುವರ್ಷಕಾಲ ಭಕ್ತಿಯಿಂದ ಶ್ರೀಹರಿಯನ್ನು ಪೂಜಿಸಿಕೊಂಡು, ಹವಿಷ್ಯಾನ್ನವನ್ನು ತಿಂದುಕೊಂಡಿದ್ದರೆ ಪುಣ್ಯಕವ್ರತದ ಫಲವನ್ನು ಹೊಂದುವುದರಲ್ಲಿ ಸಂಶಯವಿಲ್ಲ.

೧೩೦. ಎಲೈ ನಾರದನೇ, ಇಲ್ಲಿ ಹೇಳಿರುವ ವಿಷ್ಣುಸ್ತೋತ್ರವು ಸಕಲಸಂಪದಭಿವೃದ್ಧಿಕರವೂ, ಸುಖ ಮತ್ತು ಮೋಕ್ಷದಾಯಕವೂ, ಸಾರಭೂತವೂ, ಸ್ವಾಮಿ ಸೌಭಾಗ್ಯವರ್ಧಕವೂ ಆದುದು.

೧೩೧. ಈ ಸ್ತೋತ್ರವನ್ನು ಪಠಿಸುವವರಿಗೆ ಸೌಂದರ್ಯ ಮತ್ತು ಕೀರ್ತಿಗಳು ಹೆಚ್ಚಿ, ಹರಿಭಕ್ತಿಯೂ, ತತ್ವಜ್ಞಾನವೂ, ಮೋಕ್ಷಸುಖವೂ ದೊರೆಯುವುದು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ 'ಪುಣ್ಯಕ ವ್ರತದಲ್ಲಿ ಪತಿದಾನ ಮಾಡುವಾಗ ಪಾರ್ವತಿಯು ಹೇಳಿದ ಶ್ರೀಕೃಷ್ಣಸ್ತೋತ್ರ ಕಥನರೂಪವಾದ' ಏಳನೆಯ ಅಧ್ಯಾಯವು ಸಮಾಪ್ತವಾದುದು.



## ಏಳನೇ ಅಧ್ಯಾಯದ ಸಾರಾಂಶ



ಶ್ರೀಹರಿಯ ನಿರ್ದೇಶದಂತೆ ಪಾರ್ವತಿಯು ಪುತ್ರಪ್ರಾಪ್ತಿಗಾಗಿ ಪುಣ್ಯಕವ್ರತವನ್ನು ಅತ್ಯಂತ ವೈಭವದಿಂದ ಆಚರಿಸಿದಳು. ವಿಧ್ಯುಕ್ತವಾಗಿ ದೇವಬ್ರಾಹ್ಮಣರನ್ನು ಆರಾಧಿಸಿ, ವ್ರತಪರಿಪೂರ್ಣತೆಗಾಗಿ ಪುರೋಹಿತನಾದ ಸನತ್ಕುಮಾರನಿಗೆ ಕೊಡಬೇಕಾದ ದಕ್ಷಿಣೆ ಏನೆಂದು ಕೇಳಲು, ಪುಣ್ಯಕವ್ರತದಲ್ಲಿ ತನ್ನ ಪತಿಯನ್ನೇ ದಕ್ಷಿಣೆಯನ್ನಾಗಿ ಕೊಡಬೇಕೆಂದು ಸನತ್ಕುಮಾರನು ಹೇಳಿದನು. ಆಗ ಪಾರ್ವತಿಯು 'ಸ್ತ್ರೀಯರ ಸಕಲ ಸೌಭಾಗ್ಯಕ್ಕೂ ಮೂಲಕಾರಣನಾದ ಪತಿದೇವನನ್ನೇ ದಾನ ಮಾಡಿದರೆ ಪುತ್ರಸಂತಾನವಾಗುವುದೆಂತು? ಅಲ್ಲದೆ ಅಸ್ವತಂತ್ರಳಾದ ಸ್ತ್ರೀಯು ತನ್ನ ಪತಿಯನ್ನು ದಾನಮಾಡಲು ಹೇಗೆ ಅರ್ಹಳಾದಾಳು?' ಎಂದು ಪ್ರಶ್ನಿಸಲು, 'ಪ್ರಕೃತಿ ಪುರುಷರು ಅಭಿನ್ನರೂ, ಏಕದೇಹಧಾರಿಗಳೂ ಆದುದರಿಂದ ಒಬ್ಬರನ್ನೊಬ್ಬರು ದಾನ ಮಾಡಲು ಅರ್ಹರೆಂದೂ, ಗೋವಿಗೂ ಪರಮಾತ್ಮನಿಗೂ ಭೇದವಿಲ್ಲದುದರಿಂದಲೂ, ಸ್ತ್ರೀಯರಿಗೆ ಪತಿಯೇ ಪರಮಾತ್ಮನಾದುದರಿಂದಲೂ, ಮೊದಲು ಪತಿದಾನಮಾಡಿ, ಅನಂತರ ಪ್ರತಿಯಾಗಿ ಗೋದಾನ ಮಾಡುವುದರಿಂದ ಪತಿಯನ್ನು ಹಿಂದಕ್ಕೆ ಪಡೆಯಬಹುದೆಂದೂ ಶ್ರೀಹರಿಯು ಹೇಳಿದನು. ಅದರಂತೆ ಪಾರ್ವತಿಯು ಶಿವನನ್ನು ಸನತ್ಕುಮಾರನಿಗೆ ದಕ್ಷಿಣೆಯಾಗಿ ಕೊಟ್ಟು, ಅನಂತರ ಲಕ್ಷಗೋವುಗಳನ್ನು ದಕ್ಷಿಣೆಯಾಗಿ ಸ್ವೀಕರಿಸಿ, ಪತಿಯನ್ನು ಹಿಂದಕ್ಕೆ ಕೊಡಬೇಕೆಂದು ಸನತ್ಕುಮಾರನನ್ನು ಕೇಳಿಕೊಂಡಳು. ಆದರೆ ಸನತ್ಕುಮಾರನು ಶಿವನನ್ನು ಹಿಂದಕ್ಕೆ ಕೊಡಲಿಚ್ಛಿಸಲಿಲ್ಲ. ಆಗ ಪಾರ್ವತಿಯು ಶ್ರೀಕೃಷ್ಣಪರಮಾತ್ಮನನ್ನು ಅನನ್ಯಭಕ್ತಿಯಿಂದ ಸ್ತುತಿಸಲಾರಂಭಿಸಿದಳು.



|| ಓಂ ||

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ಅಷ್ಟಮೋಽಧ್ಯಾಯಃ ||

### || ನಾರಾಯಣ ಉವಾಚ ||

**ಪಾರ್ವತ್ಯಾಃ ಸ್ತವನಂ ಶ್ರುತ್ವಾ ಶ್ರೀಕೃಷ್ಣೋ ಕರುಣಾನಿಧಿಃ |**
**ಸ್ವರೂಪಂ ದರ್ಶಯಾಮಾಸ ಸರ್ವಾದೃಶ್ಯಂ ಸುದುರ್ಲಭಂ || ೧ ||**

**ಸ್ತುತ್ವಾ ದೇವೀ ವ್ರತಪರಾ ಕೃಷ್ಣಸಂಲಗ್ನಮಾನಸಾ |**
**ದದರ್ಶ ತೇಜಸಾಂ ಮಧ್ಯೇ ಸ್ವರೂಪಂ ಸರ್ವಮೋಹನಂ || ೨ ||**

**ಸದ್ರತ್ನಸಾರರಚಿತೇ ಹೀರಕೇಣ ಪರಿಷ್ಕೃತೇ |**
**ಯುಕ್ತೇ ಮಾಣಿಕ್ಯಮಾಲಾಭೀ ರತ್ನಪೂರ್ಣೇ ಮನೋರಮೇ || ೩ ||**

### ಎಂಟನಯ ಅಧ್ಯಾಯವು

೧. ನಾರಾಯಣ :—ಕರುಣಾಮಯನಾದ ಶ್ರೀಕೃಷ್ಣಪರಮಾತ್ಮನು ಪಾರ್ವತಿಯ ಸ್ತೋತ್ರದಿಂದ ಸಂತುಷ್ಟನಾಗಿ, ಎಲ್ಲರಿಗೂ ದುರ್ಲಭವೂ ಅದೃಶ್ಯವೂ ಆದ ತನ್ನ ನಿಜಸ್ವರೂಪವನ್ನು ಪಾರ್ವತಿಗೆ ತೋರಿಸಿದನು.

೨. ವ್ರತಪರಳಾದ ಪಾರ್ವತಿಯು ಶ್ರೀಕೃಷ್ಣನನ್ನು ಅನನ್ಯಭಕ್ತಿಯಿಂದ ಭಜಿಸಿ ನುತಿಸುತ್ತ, ತೇಜೋಮಂಡಲದ ಮಧ್ಯದಲ್ಲಿ ಸಕಲರ ಮನಮೋಹಕವಾದ ಶ್ರೀಕೃಷ್ಣನ ಸ್ವರೂಪವನ್ನು ಕಂಡಳು.

೩. ಶ್ರೇಷ್ಠರತ್ನಗಳಿಂದ ಖಚಿತವಾಗಿ, ಉತ್ತಮ ವಜ್ರಗಳನ್ನು ಪೊಟ್ಟಿ, ಮಾಣಿಕ್ಯತತ್ನದ ಮಾಲೆಯನ್ನು ಹಾಕಿರುವ, ಮನೋಹರವಾದ ರತ್ನಸಿಂಹಾಸನದಲ್ಲಿ ಆ ಪರಮಾತ್ಮನು ಮಂಡಿಸಿದ್ದನು.

ಪೀತಾಂಶುಕಂ ವಹ್ನಿಶುದ್ಧಂ ವರಂ ವಂಶಕರಂ ಪರಂ ।
ವನಮಾಲಾಗಲಂ ಶ್ಯಾಮಂ ರತ್ನಭೂಷಣಭೂಷಿತಂ ॥ ೪ ॥

ಕಿಶೋರವಯಸಂ ಚಿತ್ರವೇಷಂ ವೈ ಚಂದನಾಂಕಿತಂ ।
ಚಾರುಸ್ಮಿತಾಸ್ಯವಿಾಢ್ಯಂ ತಚ್ಛಾರದೇಂದುವಿನಿಂದಕಂ ॥ ೫ ॥

ಮಾಲತೀಮಾಲ್ಯಸಂಯುಕ್ತಂ ಕೇಕಿಪಿಚ್ಛಾವಚೂಡಕಂ ।
ಗೋಪಾಂಗನಾಪರಿವೃತಂ ರಾಧಾವಕ್ಷಸ್ಥಲೋಜ್ಜ್ವಲಂ ॥ ೬ ॥

ಕೋಟಿಕಂದರ್ಪಲಾವಣ್ಯಲೀಲಾಧಾಮ ಮನೋಹರಂ ।
ಅತೀವ ಹೃಷ್ಟಂ ಸರ್ವೇಷ್ಟಂ ಭಕ್ತಾನುಗ್ರಹಕಾರಕಂ ॥ ೭ ॥

ದೃಷ್ಟ್ವಾ ರೂಪಂ ರೂಪವತೀ ಪುತ್ರಂ ತದನುರೂಪಕಂ ।
ಮನಸಾ ವರಯಾಮಾಸ ವರಂ ಸಂಪ್ರಾಪ್ಯ ತತ್ಕ್ಷಣಂ ॥ ೮ ॥

---

೪. ಅಗ್ನಿಯಂತೆ ಪರಿಶುದ್ಧವಾದ ಪೀತಾಂಬರವನ್ನುಟ್ಟು, ಕೈಯ್ಯಲ್ಲಿ ಕೊಳಲನ್ನು ಹಿಡಿದಿರುವ ಆ ಶ್ಯಾಮಸುಂದರನು ಕಂಠದಲ್ಲಿರುವ ವನಮಾಲೆಯಿಂದಲೂ ರತ್ನಾಭರಣಗಳಿಂದಲೂ ಮನೋಹರನಾಗಿದ್ದನು.

೫. ಗೋಪಕಿಶೋರರೂಪಿಯಾದ ಆ ಪರಮಾತ್ಮನು ಚಂದನದ ಬೊಟ್ಟುಗಳನ್ನಿಟ್ಟು ವಿಚಿತ್ರವೇಷಧಾರಿಯಾಗಿ, ಶರಚ್ಚಂದ್ರನನ್ನು ಧಿಕ್ಕರಿಸುವ ಮಂದಸ್ಮಿತವದನದಿಂದ ಮನೋಹರನೂ, ಸ್ತುತಿಗೆ ಅರ್ಹನೂ ಆಗಿದ್ದನು.

೬. ಕಂಠದಲ್ಲಿ ಜಾಜೀಮಾಲೆಯನ್ನೂ ಕಿರೀಟದಲ್ಲಿ ನವಿಲುಗರಿಯನ್ನೂ ಧರಿಸಿ, ಗೋಪಸ್ತ್ರೀಯರಿಂದ ಪರಿವೃತನಾದ ಆ ಗೋಪಸುಂದರನು ವಕ್ಷಃಸ್ಥಲದಲ್ಲಿ ರಾಧೆಯನ್ನು ಧರಿಸಿ ಮೋಹಕನಾಗಿದ್ದನು.

೭. ಕೋಟಿಮನ್ಮಥರ ಮನೋಹರವಾದ ಲಾವಣ್ಯಕ್ಕೆ ಆಶ್ರಯನೂ ಸರ್ವದಾ ಸಂತುಷ್ಟನೂ ಭಕ್ತರಿಗೆ ಅನುಗ್ರಹದಾಯಕನೂ ಆದ ಆ ಶ್ರೀಕೃಷ್ಣ ಪರಮಾತ್ಮನನ್ನು ಪಾರ್ವತಿಯು ಮನದಣಿಯುವಂತೆ ನೋಡಿದಳು

೮. ರೂಪವತಿಯಾದ ಪಾರ್ವತಿಯು ಪರಮಾತ್ಮನ ಮನೋಹರವಾ ಆ ರೂಪಲಾವಣ್ಯಗಳನ್ನು ನೋಡಿ, ಅವನಿಗೆ ಅನುರೂಪನಾದ ಪುತ್ರನು ತನ್ನ ಜನಿಸಬೇಕೆಂದು ಮನಸ್ಸಿನಲ್ಲಿಯೇ ಬಯಸಿ ತನ್ನ ಇಷ್ಟಾರ್ಥವನ್ನು ಪಡೆದಳು.

ವರಂ ದತ್ವಾ ವರೇಶಸ್ತು ಯುದ್ಯನ್ಮನಸಿ ವಾಂಛಿತಂ ।
ದತ್ವಾಭೀಷ್ಟಂ ಸುರೇಭ್ಯಶ್ಚ ತತ್ರೈಜೋಽನ್ತರಧೀಯತ ॥ ೯ ॥

ಕುಮಾರಂ ಬೋಧಯಿತ್ವಾ ತು ದೇವದೇವ್ಯೈ ದಿಗಂಬರಂ ।
ದದುರ್ನಿರುಪಮಂ ತತ್ರ ಪ್ರಹೃಷ್ಟಾಯೈ ಕೃಪಾನ್ವಿತಾಃ ॥ ೧೦ ॥

ಬ್ರಾಹ್ಮಣೇಭ್ಯೋ ದದೌ ದುರ್ಗಾ ರತ್ನಾನಿ ವಿವಿಧಾನಿ ಚ ।
ಸುವರ್ಣಾನಿ ಚ ಭಿಕ್ಷುಭ್ಯೋ ಬಂದಿಭ್ಯೋ ವಿಶ್ವನಂದಿತಾ ॥ ೧೧ ॥

ಬ್ರಾಹ್ಮಣಾನ್ಭೋಜಯಾಮಾಸ ದೇವಾನ್ ವೈ ಪರ್ವತಾಂಸ್ತಥಾ ।
ಶಂಕರಂ ಪೂಜಯಾಮಾಸ ಚೋಪಹಾರೈರನುತ್ತಮೈಃ ॥ ೧೨ ॥

ದುಂದುಭಿಂ ವಾದಯಾಮಾಸ ಕಾರಯಾಮಾಸ ಮಂಗಲಂ ।
ಸಂಗೀತಂ ಗಾಪಯಾಮಾಸ ಹರಿಸಂಬಂಧಿಸುಂದರಂ ॥ ೧೩ ॥

---

೯. ತೇಜೋಮಯನಾದ ಪರಮಾತ್ಮನು ಪಾರ್ವತಿಯ ಮನೋಭಿಲಷಿತಗಳನ್ನು ಪೂರ್ತಿಗೊಳಿಸಿ, ದೇವತೆಗಳಿಗೂ ಅವರವರ ಅಭೀಷ್ಟವನ್ನು ದಯಪಾಲಿಸಿ ಅಂತರ್ಧಾನಹೊಂದಿದನು.

೧೦. ಅನಂತರ ದಯಾಯುತರಾದ ದೇವತೆಗಳೆಲ್ಲರೂ ಸನತ್ಕುಮಾರನಿಗೆ ಹೇಳಿ ದಿಗಂಬರನೂ, ಅನುಪಮನೂ ಆದ ಪರಶಿವನನ್ನು ಪಾರ್ವತಿಗೆ ಕೊಡಿಸಿ ಸಂತೋಷಪಡಿಸಿದನು

೧೧. ಇತ್ತ ದುರ್ಗಾ (ಪಾರ್ವತಿ) ದೇವಿಯು ಬ್ರಾಹ್ಮಣರಿಗೆಲ್ಲ ವಿವಿಧರತ್ನಗಳನ್ನಿತ್ತು, ಭಿಕ್ಷುಕರಿಗೂ, ಬಂದಿಗಳಿಗೂ ಸುವರ್ಣನಾಣ್ಯಗಳನ್ನಿತ್ತು ಎಲ್ಲರಿಂದಲೂ ಅಭಿನಂದಿತಳಾದಳು.

೧೨. ದೇವತೆಗಳನ್ನೂ, ಬ್ರಾಹ್ಮಣರನ್ನೂ, ಪರ್ವತಾಭಿಮಾನಿಪುರುಷರನ್ನೂ, ಭೋಜನದಿಂದ ತೃಪ್ತಿಪಡಿಸಿ, ಶಂಕರನಿಗೆ ಶ್ರೇಷ್ಠವಾದ ಉಪಹಾರಗಳನ್ನಿತ್ತು ಪೂಜಿಸಿದಳು.

೧೩. ನಗಾರಿ ಮುಂತಾದ ಮಂಗಳವಾದ್ಯಗಳನ್ನು ಮೊಳಗಿಸಿ, ಶ್ರೀಹರಿಗೆ ಸಂಬಂಧವಾದ ಸುಂದರ ಸಂಗೀತವನ್ನು ಗಾನಮಾಡಿಸಿದಳು.

ವ್ರತಂ ಸಮಾಪ್ಯ ಸಾ ದುರ್ಗಾ ದತ್ವಾ ದಾನಾನಿ ಸಸ್ಮಿತಾ ।
ಸರ್ವಾಂಶ್ಚ ಭೋಜಯಿತ್ವಾ ತು ಬುಭುಜೇ ಸ್ವಾಮಿನಾ ಸಹ ॥ ೧೪ ॥

ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿ ಸುವಾಸಿತಂ ।
ಕ್ರಮಾತ್ಪ್ರದಾಯ ಸರ್ವೇಭ್ಯೋ ಬುಭುಜೇ ತೇನ ಕೌತುಕಾತ್ ॥ ೧೫ ॥

ಪಯಃ ಫೇನನಿಭಾಂ ಶಯ್ಯಾಂ ರಮ್ಯಾಂ ಸದ್ರತ್ನಮಂಚಕೇ ।
ಪುಷ್ಪಚಂದನಸಂಯುಕ್ತಾಂ ಕಸ್ತೂರೀ ಕುಂಕುಮಾನ್ವಿತಾಂ ।
ರಹಸಿ ಸ್ವಾಮಿನಾಸಾರ್ಧಂ ಸುಷ್ವಾಪ ಪರಮೇಶ್ವರೀ ॥ ೧೬ ॥

ಕೈಲಾಸಸ್ಯೈಕದೇಶೇ ಚ ರಮ್ಯೇ ಚಂದನಕಾನನೇ ।
ಸುಗಂಧಿಕುಸುಮಾಢ್ಯೇನ ವಾಯುನಾ ಸುರಭೀಕೃತೇ ॥ ೧೭ ॥

ಭ್ರಮರಧ್ವನಿಸಂಯುಕ್ತೇ ಪುಂಸ್ಕೋಕಿಲರುತಾಶ್ರಯೇ ।
ವ್ಯಹಾರ್ಷೀತ್ಸಾ ಸುರಸಿಕಾ ತತ್ರ ತೇನ ಸಹಾಂಬಿಕಾ ॥ ೧೮ ॥

---

೧೪. ಈ ರೀತಿಯಾಗಿ ಆ ದುರ್ಗಾದೇವಿಯು ಪುಣ್ಯಕವ್ರತವನ್ನು ಪೂರ್ಣಗೊಳಿಸಿ, ವಿವಿಧ ದಾನಗಳನ್ನು ಕೊಟ್ಟು ಎಲ್ಲರಿಗೂ ಊಟಮಾಡಿಸಿ, ಸ್ಮಿತಮುಖಿಯಾಗಿ ಪತಿಯೊಡನೆ ತಾನೂ ಭುಜಿಸಿದಳು.

೧೫. ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನು ಕ್ರಮವಾಗಿ ಎಲ್ಲರಿಗೂ ಕೊಟ್ಟು, ತಾನೂ ಕುತೂಹಲದಿಂದ ಸೇವಿಸಿದಳು.

೧೬. ರತ್ನಮಂಚದಲ್ಲಿ ಹಾಸಿರುವ ಪುಷ್ಪಚಂದನಗಳಿಂದಲೂ ಕಸ್ತೂರಿ ಕುಂಕುಮಗಳಿಂದಲೂ ಸುವಾಸಿತವಾದ, ಹಾಲಿನ ನೊರೆಯಂತೆ ಬಿಳುಪಾದ, ಶಯನದಲ್ಲಿ ಪಾರ್ವತಿಯು ಪರಮೇಶನೊಡನೆ ಏಕಾಂತದಲ್ಲಿ ಪವಡಿಸಿದಳು.

೧೭–೧೮ ದಿವ್ಯ ಕುಸುಮಗಳ ಪರಿಮಳವನ್ನು ಬೀರುವ ವಾಯುವಿನಿಂದ ಸುವಾಸಿತವಾಗಿ ದುಂಬಿ ಮತ್ತು ಗಂಡು ಕೋಗಿಲೆಗಳ ಇಂಚರದಿಂದ ಮನೋಹರವಾಗಿರುವ ಕೈಲಾಸಪರ್ವತದ ಒಂದು ಭಾಗವಾದ ಚಂದನಾರಣ್ಯದಲ್ಲಿ ರಸಿಕಳಾದ ಆ ಅಂಬಿಕೆಯು ತನ್ನ ಪ್ರಾಣಕಾಂತನೊಡನೆ ವಿಹರಿಸಿದಳು.

ರೇತಃಪತನಕಾಲೇ ಚ ಸ ವಿಷ್ಣುರ್ವಿಷ್ಣುಮಾಯಯಾ ।
ವಿಧಾಯ ವಿಪ್ರರೂಪಂ ತದಾಜಗಾಮ ರತೇರ್ಗೃಹಂ ॥ ೧೯ ॥

ಜಟಾವಂತಂ ವಿನಾ ತೈಲಂ ಕುಚೈಲಂ ಭಿಕ್ಷುಕಂ ಮುನೇ ।
ಅತೀವ ಶುಕ್ಲದಶನಂ ತೃಷ್ಣಯಾ ಪರಿಪೀಡಿತಂ ॥ ೨೦ ॥

ಅತೀವ ಕೃಶಗಾತ್ರಂ ಚ ಬಿಭ್ರತ್ತಿಲಕಮುಜ್ವಲಂ ।
ಬಹುಕಾಕುಸ್ವರಂ ದೀನಂ ದೈನ್ಯಾತ್ಕುತ್ಸಿತಮೂರ್ತಿಮತ್ ॥ ೨೧ ॥

ಆಜುಹಾವ ಮಹಾದೇವಮತಿವೃದ್ಧೋಽನ್ನಯಾಚಕಃ ।
ದಂಡಾವಲಂಬನಂ ಕೃತ್ವಾ ರತಿದ್ವಾರೇಽತಿದುರ್ಬಲಃ ॥ ೨೨ ॥

॥ ಬ್ರಾಹ್ಮಣ ಉವಾಚ ॥

ಕಿಂ ಕರೋಷಿ ಮಹಾದೇವ ರಕ್ಷ ಮಾಂ ಶರಣಾಗತಂ ।
ಸಪ್ತರಾತ್ರಿವ್ರತೇಽತೀತೇ ಪಾರಣಾಕಾಂಕ್ಷಿಣಂ ಕ್ಷುಧಾ ॥ ೨೩ ॥

---

೧೯. ಶಿವನ ರೇತಸ್ಸು ಪತನವಾಗುವ ಕಾಲಕ್ಕೆ ಸರಿಯಾಗಿ ಮಾಯೆಯಿಂದ ಪ್ರೇರಿತನಾದ ವಿಷ್ಣುವು ವೃದ್ಧಬ್ರಾಹ್ಮಣನ ವೇಷಧಾರಿಯಾಗಿ ಅವರ ರತಿಗೃಹದ ಸಮೀಪಕ್ಕೆ ಬಂದನು.

೨೦. ಎಣ್ಣೆಯನ್ನು ಹಚ್ಚದೆ ಒರಟಾಗಿರುವ ಜಟಾಭಾರದಿಂದಲೂ, ಉಟ್ಟಿರುವ ಕೊಳಕಾದ ಬಟ್ಟೆಯಿಂದಲೂ, ಅತ್ಯಂತ ಬಿಳಿಚಿಕೊಂಡಿರುವ ಹಲ್ಲುಗಳಿಂದಲೂ ಆ ಬ್ರಾಹ್ಮಣನು ಬಾಯಾರಿ ಬಳಲಿದ ಭಿಕ್ಷುಕನಂತೆ ತೋರುತ್ತಿದ್ದನು.

೨೧. ಅತ್ಯಂತ ಕೃಶವಾದ ಶರೀರವುಳ್ಳ ಆ ಬ್ರಾಹ್ಮಣನು ಹಣೆಯಲ್ಲಿ ಉಜ್ವಲವಾದ ತಿಲಕವನ್ನು ಧರಿಸಿದ್ದರೂ ದೀನತೆಯಿಂದ ಕುತ್ಸಿತವಾದ ಮೂರ್ತಿಯುಳ್ಳವನೂ, ವಿಕಾರವುಳ್ಳವನೂ ಆಗಿದ್ದನು.

೨೨. ವೃದ್ಧಾಪ್ಯದಿಂದ ಅತ್ಯಂತ ದುರ್ಬಲನಾಗಿ ಕೈಯಲ್ಲಿ ದಂಡವನ್ನು ಧರಿಸಿ, ರತಿಗೃಹದ ಬಾಗಿಲಿನಲ್ಲಿ ನಿಂತು ಮಹಾದೇವನನ್ನು ಕುರಿತು ಅನ್ನವನ್ನು ಬೇಡಲಾರಂಭಿಸಿದನು.

೨೩. ಬ್ರಾಹ್ಮಣ:—ಎಲೈ ಮಹಾದೇವನೇ ನೀನೇನು ಮಾಡುತ್ತಿರುವೆ. ಏಳುರಾತ್ರಿ ಉಪವಾಸ ವ್ರತವನ್ನು ಕಳೆದು ಹಸಿವಿನಿಂದ ಪಾರಣೆಯನ್ನು ಬಯಸಿ ನಿನಗೆ ಶರಣಾಗತನಾಗಿರುವ ನನ್ನನ್ನು ಕಾಪಾಡು.

ಕಿಂ ಕರೋಷಿ ಮಹಾದೇವ ಹೇ ತಾತ ಕರುಣಾನಿಧೇ ।
ಪಶ್ಯ ವೃದ್ಧಂ ಜರಾಗ್ರಸ್ತಂ ತೃಷ್ಣಯಾ ಪರಿಪೀಡಿತಂ ॥ ೨೪ ॥

ಮಾತರುತ್ತಿಷ್ಠ ಮೇಽನ್ನಂ ತ್ವಂ ಪ್ರಯಚ್ಛಾದ್ಯ ಶಿವಂ ಜಲಂ ।
ಅನಂತರತ್ನೋದ್ಭವಜೇ ರಕ್ಷ ಮಾಂ ಶರಣಾಗತಂ ॥ ೨೫ ॥

ಮಾತರ್ಮಾತರ್ಜಗನ್ಮಾತರೇಹಿ ನಾಹಂ ಸ್ಥಿತೋ ಬಹಿಃ ।
ಸೀದಾಮಿ ತೃಷಯಾ ಕಸ್ಮಾತ್ತ್ವಯಿ ತಿಷ್ಠತ್ಯಮಾತರಿ ॥ ೨೬ ॥

ಇತಿ ಕಾಕುಸ್ವರಂ ಶ್ರುತ್ವಾ ಶಿವಸ್ಯೋತ್ತಿಷ್ಠತೋ ಮುನೇ ।
ಪಪಾತ ವೀರ್ಯಂ ಶಯ್ಯಾಯಾಂ ನ ಯೋನೌ ಪ್ರಕೃತೇಸ್ತದಾ ॥ ೨೭ ॥

ಉತ್ತಸ್ಥೌ ಪಾರ್ವತೀ ತ್ರಸ್ತಾ ಸೂಕ್ಷ್ಮವಸ್ತ್ರಂ ಪಿಧಾಯ ಚ ।
ಆಜಗಾಮ ಬಹಿರ್ದ್ವಾರಂ ಪಾರ್ವತ್ಯಾ ಸಹ ಶಂಕರಃ ॥ ೨೮ ॥

೨೪ ಕರುಣಾನಿಧಿಯಾದ ಎಲೈ ಮಹಾದೇವನೇ ಅತಿವೃದ್ಧನೂ ಬಾಯಾರಿ ಬಳಲಿದವನೂ ಆದ ನನ್ನನ್ನು ರಕ್ಷಿಸದೆ ನೀನೇನು ಮಾಡುತ್ತಿರುವೆ?

೨೫. ಅನೇಕರತ್ನಪ್ರಭವನಾದ ಹಿಮವಂತನ ಪುತ್ರಿಯೇ ಏಳು. ಶರಣಾಗತನಾದ ನನಗೆ ಅನ್ನನೀರುಗಳನ್ನು ಕೊಟ್ಟು ಕಾಪಾಡು.

೨೬. ಎಲೌ ಜಗನ್ಮಾತೆಯೇ, ನಾನು ಹೊರಗೆ ನಿಲ್ಲಲಾರೆ. ಬೇಗ ಬಾ. ಮಾತೆಯಾದ ನೀನಿರುವಾಗ ನಾನು ಹಸಿವು ಬಾಯಾರಿಕೆಯಿಂದ ಬಳಲುತ್ತಿರುವುದುಚಿತವೇ ?

೨೭. ಎಲೈ ನಾರದನೇ, ಈ ರೀತಿಯಾದ ಆ ಬ್ರಾಹ್ಮಣನ ದೀನಧ್ವನಿಯನ್ನು ಕೇಳಿ ಏಳಲಾರಂಭಿಸಿದ ಶಿವನ ರೇತಸ್ಸು ಪ್ರಕೃತಿಯ ಯೋನಿಯಲ್ಲಿ ಬೀಳದೆ ಹಾಸಿಗೆಯಮೇಲೆ ಬಿದ್ದುಬಿಟ್ಟಿತು.

೨೮. ಶಿವನ ರೇತಸ್ಸು ವ್ಯರ್ಥವಾದುದನ್ನು ಕಂಡು, ಭಯಾಕುಲಿತಳಾದ ಪಾರ್ವತಿಯೂ ವಸ್ತ್ರವನ್ನು ಧರಿಸಿಕೊಂಡು ಮೇಲಕ್ಕೆದ್ದಳು. ಅನಂತರ ಶಂಕರನು ಪಾರ್ವತಿಯೊಡನೆ ರತಿಗೃಹದ ಬಾಗಿಲಿಗೆ ಬಂದನು.

ದದರ್ಶ ಬ್ರಾಹ್ಮಣಂ ದೀನಂ ಜರಯಾ ಪರಿಪೀಡಿತಂ ।
ವೃದ್ಧಂ ಲುಲಿತಗಾತ್ರಂ ಚ ಬಿಭ್ರತಂ ದಂಡಮಾನತಂ ॥ ೨೯ ॥

ತಪಸ್ವಿನಮಶಾಂತಂ ಚ ಶುಷ್ಕಕಂಠೌಷ್ಠತಾಲುಕಂ ।
ಕುರ್ವಂತಂ ಪರಯಾ ಭಕ್ತ್ಯಾ ಪ್ರಣಾಮಂ ಸ್ತವನಂ ತಯೋಃ ॥ ೩೦ ॥

ಶ್ರುತ್ವಾ ತದ್ವಚನಂ ತತ್ರ ನೀಲಕಂಠಃ ಸುಧೋಪಮಂ ।
ಉವಾಚ ಪರಯಾ ಪ್ರೀತ್ಯಾ ಪ್ರಸನ್ನಸ್ತಂ ಪ್ರಹಸ್ಯ ಚ ॥ ೩೧ ॥

॥ ಶಂಕರ ಉವಾಚ ॥

ಗೃಹಂ ತೇ ಕುತ್ರ ವಿಪ್ರರ್ಷೇ ವದ ವೇದವಿದಾಂ ವರ ।
ಕಿನ್ನಾಮ ಭವತಃ ಕ್ಷಿಪ್ರಂ ಜ್ಞಾತುಮಿಚ್ಛಾಮಿ ಸಾಂಪ್ರತಂ ॥ ೩೨ ॥

॥ ಪಾರ್ವತ್ಯುವಾಚ ॥

ಆಗತೋಽಸಿ ಕುತೋ ವಿಪ್ರ ಮಮ ಭಾಗ್ಯಾದುಪಸ್ಥಿತಃ ।
ಅದ್ಯ ಮೇ ಸಫಲಂ ಜನ್ಮ ಬ್ರಾಹ್ಮಣೋ ಮದ್ಗೃಹೇಽತಿಥಿಃ ॥ ೩೩ ॥

೨೯. ವಾರ್ಧಕ್ಯಪೀಡಿತನಾಗಿ ಸಡಿಲವಾದ ದೇಹವನ್ನು ಊರುಗೋಲಿನ ಅವಲಂಬನೆಯಿಂದ ಧರಿಸಿ, ದೀನನಾಗಿ ನಿಂತಿರುವ ಬ್ರಾಹ್ಮಣನನ್ನು ಶಿವನು ನೋಡಿದನು.

೩೦. ಅಶಾಂತತೆಯಿಂದ ಒಣಗಿಹೋದ ತುಟಿ ಮತ್ತು ಗಂಟಲುಳ್ಳವನಾಗಿ ಪರಮ ಭಕ್ತಿಯಿಂದ ಪಾರ್ವತೀ ಪರಮೇಶ್ವರರನ್ನು ಆ ಅನಾಥಬ್ರಾಹ್ಮಣನು ನಮಿಸಿ ಸ್ತುತಿಸಲಾರಂಭಿಸಿದನು.

೩೧. ಅವನ ದೀನವಚನಗಳನ್ನು ಕೇಳಿ ನೀಲಕಂಠನು (ಶಿವ) ಅವನಿಗೆ ಪ್ರಸನ್ನನಾಗಿ ಮಂದಹಾಸವನ್ನು ಬೀರುತ್ತ, ಅಮೃತೋಪಮವಾದ ಕೆಲವು ಮಾತುಗಳನ್ನು ಹೇಳಿದನು.

೩೨. ಶಂಕರ:—ವೇದಜ್ಞರಲ್ಲಿ ಶ್ರೇಷ್ಠನಾದ ಎಲೈ ಬ್ರಾಹ್ಮಣೋತ್ತಮನೇ, ನಿನ್ನ ಮನೆ ಎಲ್ಲಿರುವುದು ? ನಿನ್ನ ದಿವ್ಯನಾಮಾಂಕಿತವಾವುದು ? ಎಂಬುದನ್ನು ಜಾಗ್ರತೆಯಾಗಿ ತಿಳಿಯಲಿಚ್ಛಿಸುತ್ತೇನೆ.

೩೩. ಪಾರ್ವತಿ :—ಎಲೈ ವಿಪ್ರವರನೇ, 'ನನ್ನ ಭಾಗ್ಯೋದಯದಿಂದ ಎಲ್ಲಿಂದಲೋ ನೀನು ಬಂದಿರುವೆ. ಬ್ರಾಹ್ಮಣನು ಅತಿಥಿಯಾಗಿ ಮನೆಗೆ ಬಂದ ಇಂದು ನನ್ನ ಜನ್ಮವು ಸಫಲವಾಯಿತು.

ಅತಿಥಿಃ ಪೂಜಿತೋ ಯೇನ ತ್ರಿಜಗತ್ತೇನ ಪೂಜಿತಂ ।
ತತ್ರೈವಾಧಿಷ್ಠಿತಾ ದೇವಾ ಬ್ರಾಹ್ಮಣಾ ಗುರವೋ ದ್ವಿಜ ॥ ೩೪ ॥

ತೀರ್ಥಾನ್ಯತಿಥಿಪಾದೇಷು ಶಶ್ವತ್ತಿಷ್ಠಂತಿ ನಿಶ್ಚಿತಂ ।
ತತ್ಪಾದಧೌತತೋಯೇನ ಮಿಶ್ರಿತಾನಿ ಲಭೇದ್ಗೃಹೀ ॥ ೩೫ ॥

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಅತಿಥಿಃ ಪೂಜಿತೋ ಯೇನ ಸ್ವಾತ್ಮಶಕ್ತ್ಯಾ ಯಥೋಚಿತಂ ॥ ೩೬ ॥

ಮಹಾದಾನಾನಿ ಸರ್ವಾಣಿ ಕೃತಾನಿ ತೇನ ಭೂತಲೇ ।
ಅತಿಥಿಃ ಪೂಜಿತೋ ಯೇನ ಭಾರತೇ ಭಕ್ತಿಪೂರ್ವಕಂ ॥ ೩೭ ॥

ನಾನಾಪ್ರಕಾರಪುಣ್ಯಾನಿ ವೇದೋಕ್ತಾನಿ ಚ ಯಾನಿ ವೈ ।
ಅನ್ಯೇ ಚಾತಿಥಿಸೇವಾಯಾಃ ಕಲಾಂ ನಾರ್ಹಂತಿ ಷೋಡಶೀಂ ॥ ೩೮ ॥

೩೪. ಯಾರು ಅತಿಥಿಯನ್ನು ಆದರದಿಂದ ಪೂಜಿಸುವರೋ ಅವರು ಮೂರು ಲೋಕವನ್ನೂ ಪೂಜಿಸಿದಂತಾಗುವುದು. ದೇವತೆಗಳು, ಬ್ರಾಹ್ಮಣರು ಮತ್ತು ಗುರುಗಳೂ ಅತಿಥಿಯಲ್ಲಿಯೇ ಅಧಿಷ್ಠಿತರಾಗಿದ್ದಾರೆ

೩೫. ಅತಿಥಿಯ ಪಾದಗಳಲ್ಲಿ ಸಕಲ ಪುಣ್ಯತೀರ್ಥಗಳೂ ನಿಶ್ಚಿತವಾಗಿಯೂ ನೆಲೆಸಿರುವುವು. ಗೃಹಸ್ಥನು ಅತಿಥಿಯ ಪಾದಪ್ರಕ್ಷಾಳನೆ ಮಾಡಿದ ನೀರಿನಿಂದ ಮಿಶ್ರಿತವಾದ ಪುಣ್ಯೋದಕವನ್ನು ಪಡೆಯಬಹುದು.

೩೬. ಯಾರು ತನ್ನ ಶಕ್ತಿಗನುಗುಣವಾಗಿ ಅತಿಥಿಪೂಜೆಯನ್ನು ಯಥೋಚಿತವಾಗಿ ಮಾಡುವನೋ, ಅವನು ಸಕಲ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ ಮತ್ತು ಎಲ್ಲ ಯಜ್ಞಗಳಲ್ಲೂ ದೀಕ್ಷೆಗೊಂಡ ಫಲವನ್ನು ಪಡೆಯುವನು.

೩೭. ಭರತಖಂಡದಲ್ಲಿ ಭಕ್ತಿಪೂರ್ವಕವಾಗಿ ಅತಿಥಿ ಪೂಜೆಗೈದವನು ಭೂಲೋಕದಲ್ಲಿ ಎಲ್ಲ ಮಹಾದಾನಗಳನ್ನೂ ಮಾಡಿ ಹೊಂದಬಹುದಾದ ಫಲವನ್ನು ಹೊಂದುವನು.

೩೮. ವೇದೋಕ್ತವಾದ ವಿವಿಧ ಪುಣ್ಯಕರ್ಮಗಳು ಎಷ್ಟಿವೆಯೋ ಅವೆಲ್ಲವೂ ಅತಿಥಿಸೇವೆಯ ಹದಿನಾರನೆಯ ಒಂದಂಶದಷ್ಟು ಫಲವನ್ನೂ ಕೊಡಲಾರವು.

ಅಪೂಜಿತೋಽತಿಥಿರ್ಯಸ್ಯ ಭವನಾದ್ವಿನಿವರ್ತತೇ ।
ಪಿತೃದೇವಾಗ್ನಯಃ ಪಶ್ಚಾದ್ಗುರವೋ ಯಾಂತ್ಯಪೂಜಿತಾಃ　　॥ ೩೯ ॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ತಾನಿ ಸರ್ವಾಣಿ ಲಭತೇ ನಾಭ್ಯರ್ಚ್ಯಾತಿಥಿಮೀಪ್ಸಿತಂ　　॥ ೪೦ ॥

॥ ಬ್ರಾಹ್ಮಣ ಉವಾಚ ॥

ಜಾನಾಸಿ ವೇದಾನ್ವೇದಜ್ಞೇ ವೇದೋಕ್ತಂ ಕುರು ಪೂಜನಂ ।
ಕ್ಷುತ್ತೃಡ್ಭ್ಯಾಂ ಪೀಡಿತೋ ಮಾತರ್ವಚನಂ ಚ ಶ್ರುತೌ ಶ್ರುತಂ　　॥ ೪೧ ॥

ವ್ಯಾಧಿಯುಕ್ತೋ ನಿರಾಹಾರೋ ಯದಾ ವಾಽನಶನವ್ರತೀ ।
ಮನೋರಥೇನೋಪಹಾರಂ ಭೋಕ್ತುಮಿಚ್ಛತಿ ಮಾನವಃ　　॥ ೪೨ ॥

೩೯. ಯಾರ ಮನೆಯಿಂದ ಅತಿಥಿಯು ಪೂಜಿತನಾಗದೆ ವ್ಯರ್ಥವಾಗಿ ಹಿಂತಿರುಗುವನೋ, ಅವನ ಮನೆಯಿಂದ ಪಿತೃಗಳು, ದೇವತೆಗಳು, ಅಗ್ನಿತ್ರಯಗಳು ಮತ್ತು ಗುರುಗಳು ಅಪೂಜಿತರೂ ಅಪ್ರಸನ್ನರೂ ಆಗಿ ಹಿಂತಿರುಗುವರು.

(ಅಗ್ನಿತ್ರಯ :—ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ).

೪೦. ಅತಿಥಿಪೂಜೆಯನ್ನು ಮಾಡದವನು ಬ್ರಹ್ಮಹತ್ಯಾದಿ ಯಾವ ಯಾವ ಮಹಾಪಾಪಗಳಿವೆಯೋ ಅವೆಲ್ಲಕ್ಕೂ ಭಾಗಿಯಾಗುವನು.

೪೧. ಬ್ರಾಹ್ಮಣ :—ವೇದಗಳನ್ನೆಲ್ಲ ಬಲ್ಲ ಎಲೌ ಮಾತೆಯೇ, ವೇದೋಕ್ತವಾದ ಪೂಜೆಯನ್ನು ನನಗೆ ಮಾಡು. ನಾನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿರುವೆನು. ನನ್ನಂಥವರನ್ನು ಪೂಜಿಸುವ ಕ್ರಮವು ವೇದದಲ್ಲಿ ಇಂತು ಉಕ್ತವಾಗಿದೆ.

೪೨. ಅತಿಥಿಯು ರೋಗಗ್ರಸ್ತನಾಗಲೀ, ಅನಶನ ವ್ರತದಿಂದ ನಿರಾಹಾರಿಯಾಗಲೀ ಆಗಿದ್ದರೆ, ಅವನ ಮನೋಭಿಲಷಿತವಾದ ಉಪಹಾರವನ್ನು ಕೊಟ್ಟು ತೃಪ್ತಿಪಡಿಸಬೇಕು.

|| ಪಾರ್ವತ್ಯುವಾಚ ||

ಭೋಕ್ತುಮಿಚ್ಛಸಿ ಕಿಂ ವಿಪ್ರ ತ್ರೈಲೋಕ್ಯೇಚ ಸುದುರ್ಲಭಂ |
ದಾಸ್ಯಾಮಿ ಭೋಕ್ತುಂ ತ್ವಾಮದ್ಯ ಮಜ್ಜನ್ಮ ಸಫಲಂ ಕುರು || ೪೩ ||

|| ಬ್ರಾಹ್ಮಣ ಉವಾಚ ||

ವ್ರತೇ ಸುವ್ರತಯಾ ಸರ್ವಮುಪಹಾರಂ ಸಮಾಹೃತಂ |
ನಾನಾವಿಧಂ ಮಿಷ್ಟಮಿಷ್ಟಂ ಭೋಕ್ತುಂ ಶ್ರುತ್ವಾ ಸಮಾಗತಃ || ೪೪ ||

ಸುವ್ರತೇ ತವ ಪುತ್ರೋಽಹಮಗ್ರೇ ಮಾಂ ಪೂಜಯಿಷ್ಯಸಿ |
ದತ್ವಾ ಮಿಷ್ಟಾನಿ ವಸ್ತೂನಿ ತ್ರೈಲೋಕ್ಯೇ ದುರ್ಲಭಾನಿ ಚ || ೪೫ ||

ತಾತಾಃ ಪಂಚವಿಧಾಃ ಪ್ರೋಕ್ತಾ ಮಾತರೋ ವಿವಿಧಾಃ ಸ್ಮೃತಾಃ |
ಪುತ್ರಾಃ ಪಂಚವಿಧಾಃ ಸಾಧ್ವಿ ಕಥಿತೋ ವೇದವಾದಿಭಿಃ || ೪೬ ||

---

೪೩. ಪಾರ್ವತಿ.—ಎಲೈ ವಿಪ್ರೋತ್ತಮನೇ, ನೀನು ಯಾವ ಉಪಹಾರವನ್ನು ತಿನ್ನಲು ಬಯಸುವೆ? ಆ ಉಪಹಾರವು ತ್ರಿಲೋಕದಲ್ಲಿ ದುರ್ಲಭವಾದರೂ ನಿನಗೆ ತಿನ್ನಲು ನಾನು ತರಿಸಿಕೊಡುವೆನು. ಅದನ್ನು ತಿಂದು ನನ್ನ ಜನ್ಮವನ್ನು ಸಫಲಗೊಳಿಸು.

೪೪. ಬ್ರಾಹ್ಮಣ:—ವ್ರತನಿಷ್ಠಳಾದ ನೀನು ಪುಣ್ಯಕವ್ರತಕ್ಕಾಗಿ ನಾನಾವಿಧವಾದ ಉಪಹಾರಗಳನ್ನು ತರಿಸಿರುವಿಯೆಂದು ಕೇಳಿ ನನಗಿಷ್ಟವಾದ ಮಿಷ್ಟಾನ್ನವನ್ನು ತಿನ್ನಲು ನಾನು ಇಲ್ಲಿಗೆ ಬಂದಿರುವೆನು.

೪೫. ಎಲೌ ವ್ರತನಿಷ್ಠಳೇ, ನಾನು ಮುಂದೆ ನಿನ್ನ ಮಗನಾಗಿ ಜನಿಸುವೆನು. ಆದುದರಿಂದ ತ್ರಿಲೋಕದಲ್ಲಿಯೂ ದುರ್ಲಭವಾದ ಮಿಷ್ಟಾಹಾರವನ್ನು ನನಗೆ ಕೊಟ್ಟು ನನ್ನನ್ನು ಪೂಜಿಸು.

೪೬. ಸಾಧ್ವೀಮಣಿಯೇ, ತಂದೆ ಮತ್ತು ಮಗನು ಐದೈದು ಬಗೆಯೆಂದೂ, ತಾಯಿಯು ಅನೇಕ ಬಗೆಯೆಂದೂ ವೇದಜ್ಞರು ಹೇಳುವರು.

ಪಿಷ್ಟಕಂ ಪರಮಾನ್ನಂ ಚ ಸುಪಕ್ವಾನಿ ಫಲಾನಿ ಚ ।
ನಾನಾವಿಧಾನಿ ಪಿಷ್ಟಾನಿ ಕಾಲದೇಶೋದ್ಭವಾನಿ ಚ ॥ ೫೧ ॥

ಪಕ್ವಾನ್ನಂ ಸ್ವಸ್ತಿಕಂ ಕ್ಷೀರಮಿಕ್ಷುಮಿಕ್ಷುವಿಕಾರಜಂ ।
ಘೃತಂ ದಧಿ ಚ ಶಾಲ್ಯನ್ನಂ ಘೃತಪಕ್ವಂ ಚ ವ್ಯಂಜನಂ ॥ ೫೨ ॥

ಲಡ್ಡುಕಾನಿ ತಿಲಾನಾಂ ಚ ಸ್ವೃಷ್ಟಾನ್ನೈಃ ಸಗುಡಾನಿ ಚ ।
ಮಮಾಜ್ಞಾತಾನಿ ವಸ್ತೂನಿ ಸುಧಯಾ ತುಲ್ಯಕಾನಿ ಚ ॥ ೫೩ ॥

ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿ ಸುವಾಸಿತಂ ।
ಜಲಂ ಸುನಿರ್ಮಲಂ ಸ್ವಾದು ದ್ರವ್ಯಾಣ್ಯೇತಾನಿ ವಾಸಿತಂ ॥ ೫೪ ॥

ದ್ರವ್ಯಾಣಿ ಯಾನಿ ಭುಕ್ತ್ವಾ ಮೇ ಚಾರುಲಂಬೋದರಂ ಭವೇತ್ ।
ಅನಂತರತ್ನೋದ್ಭವಜೇ ತಾನಿ ಮಹ್ಯಂ ಪ್ರದಾಸ್ಯಸಿ ॥ ೫೫ ॥

೫೧–೫೨. ಆದುದರಿಂದ ತಂಬಿಟ್ಟು, ಪಾಯಸ, ಮಾಗಿದಹಣ್ಣು, ಕಾಲ ದೇಶಾನುಗುಣವಾದ ನಾನಾವಿಧ ಪಿಷ್ಟಗಳು, ಪಕ್ವಾನ್ನ ಸ್ವಸ್ತಿಕವಾಯನ, ಹಾಲು, ಕಬ್ಬು ಮತ್ತು ಅದರ ವಿಕಾರವಾದ ಸಕ್ಕರೆ ಮುಂತಾದುವು. ತುಪ್ಪ, ಮೊಸರು, ಶಾಲ್ಯನ್ನ, ತುಪ್ಪದಿಂದ ಬೇಯಿಸಿದ ಕಾಯಿಪಲ್ಯ ಇವೆಲ್ಲವನ್ನೂ ನನಗೆ ಕೊಡು

೫೩–೫೪. ಅಲ್ಲದೆ ಎಳ್ಳಿನ ಉಂಡೆಗಳನ್ನೂ, ಬೆಲ್ಲದಿಂದ ಕಲಸಿದ ಮಿಷ್ಟಾನ್ನ ವನ್ನೂ, ನನಗೆ ಆವರೂಪವಾದ ಮತ್ತು ಅಮೃತೋಪವಾದ ವಸ್ತುಗಳನ್ನೂ, ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲವನ್ನೂ, ನಿರ್ಮಲವೂ, ರುಚಿ ಕರವೂ, ಸುವಾಸಿತವೂ ಆದ ದ್ರವ್ಯಗಳನ್ನೂ ನನಗೆ ಕೊಡು.

೫೫. ಅನಂತ ರತ್ನಗಳ ಉತ್ಪತ್ತಿಗೆ ಕಾರಣನಾದ ಹಿಮವಂತನ ಪುತ್ರಿಯೇ, ಯಾವ ಆಹಾರವನ್ನು ತಿಂದರೆ ನನ್ನ ಹೊಟ್ಟೆ ತುಂಬಿ ಜೋಲಾಡುವುದೋ ಅವೆಲ್ಲ ವನ್ನೂ ನನಗೆ ಕೊಡುವವಳಾಗು,

ವಿದ್ಯಾದಾತಾನ್ನದಾತಾ ಚ ಭಯತ್ರಾತಾ ಚ ಜನ್ಮದಃ ।
ಕನ್ಯಾದಾತಾ ಚ ವೇದೋಕ್ತಾ ನರಾಣಾಂ ಪಿತರಃ ಸ್ಮೃತಾಃ　　|| ೪೭ ||

ಗುರುಪತ್ನೀ ಗರ್ಭದಾತ್ರೀ ಸ್ತನದಾತ್ರೀ ಪಿತುಃ ಸ್ವಸಾ ।
ಸ್ವಸಾ ಮಾತುಃ ಸಪತ್ನೀ ಚ ಪುತ್ರಭಾರ್ಯಾನ್ನದಾಯಿಕಾ　　|| ೪೮ ||

ಭೃತ್ಯಃ ಶಿಷ್ಯಶ್ಚ ಪೋಷ್ಯಶ್ಚ ವೀರ್ಯಜಃ ಶರಣಾಗತಃ ।
ಧರ್ಮಪುತ್ರಾಶ್ಚ ಚತ್ವಾರೋ ವೀರ್ಯಜೋ ಧನಭಾಗಿತಿ　　|| ೪೯ ||

ಕ್ಷುತ್ತೃಡ್ಭ್ಯಾಂ ಪೀಡಿತೋ ಮಾತರ್ವೃದ್ಧೋಽಹಂ ಶರಣಾಗತಃ ।
ಸಾಂಪ್ರತಂ ತವ ವಂಧ್ಯಾಯಾ ಅನಾಥಃ ಪುತ್ರ ಏವ ಚ　　|| ೫೦ ||

---

೪೭. ವಿದ್ಯೋಪದೇಶಕನೂ, ಅನ್ನದಾನ ಮಾಡಿದವನೂ, ಭಯದಿಂದ ಪಾರುಗಾಣಿಸಿದವನೂ, ಜನ್ಮದಾತೃವೂ ಮತ್ತು ಹೆಣ್ಣು ಕೊಟ್ಟು ವಂಶೋದ್ಧಾರ ಮಾಡುವವನೂ ಮನುಜನಿಗೆ ತಂದೆಗೆ ಸಮಾನರೆಂದು ವೇದೋಕ್ತವಾಗಿದೆ

೪೮. ಗುರುವಿನ ಪತ್ನಿ, ಗರ್ಭದಲ್ಲಿ ಧರಿಸಿದ್ದವಳು, ಸ್ತನ್ಯಪಾನ ಮಾಡಿಸಿದವಳು, ತಂದೆಯ ಸಹೋದರಿ, ತನ್ನ ಸಹೋದರಿ, ಸವತಿ ತಾಯಿ, ತನ್ನ ಸೊಸೆ ಮತ್ತು ಅನ್ನದಾನ ಮಾಡಿದವಳು ಈ ಎಂಟುಜನರೂ ಮನುಜನಿಗೆ ತಾಯಿಯೆನಿಸುವರು.

೪೯. ಸೇವಕ, ಶಿಷ್ಯ, ತನ್ನ ಪೋಷಣೆಗೊಳಗಾದವ, ಮರೆಹೊಕ್ಕವ ಮತ್ತು ತನ್ನ ವೀರ್ಯದಿಂದ ಜನಿಸಿದವ ಈ ಐವರೂ ಪುತ್ರಸದೃಶರು. ಇವರಲ್ಲಿ ನಾಲ್ವರು ಧರ್ಮಪುತ್ರರಾದುದರಿಂದ ವೀರ್ಯದಿಂದ ಜನಿಸಿದವನೇ ತಂದೆಯ ಆಸ್ತಿಗೆ ಭಾಗಿಯಾಗುವನು.

೫೦ ಎಲೌ ಮಾತೆಯೇ, ಹಸಿವು ಬಾಯಾರಿಕೆಗಳಿಂದ ಪೀಡಿತನೂ, ವೃದ್ಧನೂ ಆದ ನಾನು ನಿನ್ನ ಮರೆಹೊಕ್ಕಿದ್ದೇನೆ. ಬಂಜೆಯಾದ ನಿನಗೆ ದಿಕ್ಕಿಲ್ಲದ ನಾನು ಈಗ ಮಗನಾದಂತಾಯಿತು.

ಸ್ವಾಮೀ ತೇ ತ್ರಿಜಗತ್ಕರ್ತಾ ಪ್ರದಾತಾ ಸರ್ವಸಂಪದಾಂ ।
ಮಹಾಲಕ್ಷ್ಮೀಸ್ವರೂಪಾ ತ್ವಂ ಸರ್ವೈಶ್ವರ್ಯಪ್ರದಾಯಿನೀ ॥ ೫೬ ॥

ರತ್ನಸಿಂಹಾಸನಂ ರಮ್ಯಮಮೂಲ್ಯಂ ರತ್ನಭೂಷಣಂ ।
ವಹ್ನಿಶುದ್ಧಾಂಶುಕಂ ಚಾರು ಪ್ರದಾಸ್ಯಸಿ ಸುದುರ್ಲಭಂ ॥ ೫೭ ॥

ಸುದುರ್ಲಭಂ ಹರೇರ್ಮಂತ್ರಂ ಹರೌ ಭಕ್ತಿಂ ದೃಢಾಂ ಸತಿ ।
ಹರಿಪ್ರಿಯಾ ಹರೇಃ ಶಕ್ತಿಸ್ತ್ವಮೇವ ಸರ್ವದಾಸ್ಥಿತಾ ॥ ೫೮ ॥

ಜ್ಞಾನಂ ಮೃತ್ಯುಂಜಯಂ ನಾಮ ದಾತೃಶಕ್ತಿಂ ಸುಖಪ್ರದಾಂ ।
ಸರ್ವಸಿದ್ಧಿಂ ಚ ಕಿಂ ಮಾತರದೇಯಂ ಸ್ವಸುತಾಯ ಚ ॥ ೫೯ ॥

ಮನಃ ಸುನಿರ್ಮಲಂ ಕೃತ್ವಾ ಧರ್ಮೇ ತಪಸಿ ಸಂತತಂ ।
ಶ್ರೇಷ್ಠೇ ಸರ್ವಂ ಕರಿಷ್ಯಾಮಿ ನ ಕಾಮೇ ಜನ್ಮಹೇತುಕೇ ॥ ೬೦ ॥

---

೫೬. ಮೂರು ಲೋಕಕ್ಕೂ ಕರ್ತೃವೆನಿಸಿದ ನಿನ್ನ ಪತಿಯು ಸಕಲ ಸಂಪತ್ತನ್ನೂ ಕೊಡಲು ಶಕ್ತನಾಗಿರುವನು. ಮಹಾಲಕ್ಷ್ಮಿಯ ಸ್ವರೂಪಳಾದ ನೀನೂ ಕೂಡ ಸಕಲೈಶ್ವರ್ಯವನ್ನೂ ಕೊಡತಕ್ಕವಳಾಗಿರುವೆ.

೫೭. ಸರ್ವಸುಲಭವಲ್ಲದ ಸುಂದರವಾದ ರತ್ನಸಿಂಹಾಸನವನ್ನೂ, ಅಮೂಲ್ಯವಾದ ರತ್ನಾಭರಣವನ್ನೂ, ಅಗ್ನಿಯಂತೆ ಪರಿಶುದ ವಾದ ವಸ್ತ್ರವನ್ನೂ, ನೀನು ನನಗೆ ಕೊಡು.

೫೮. ಎಲೌ ಸತಿಯೇ, ಹರಿಪ್ರಿಯಳೂ, ಹರಿಯ ಶಕ್ತಿಸ್ವರೂಪಿಣಿಯೂ ಆದ ನೀನು ಎಲ್ಲರಿಗೂ ದುರ್ಲಭವಾದ ಶ್ರೀಹರಿಯ ಮಂತ್ರವನ್ನೂ, ದೃಢವಾದ ಹರಿಭಕ್ತಿಯನ್ನೂ ಸರ್ವದಾ ನನಗೆ ಅನುಗ್ರಹಿಸು.

೫೯. ಮೃತ್ಯುಂಜಯ ಜ್ಞಾನವನ್ನೂ, ಸುಖಕರವಾದ ದಾನಶಕ್ತಿಯನ್ನೂ, ಸಕಲ ಇಷ್ಟಾರ್ಥಸಿದ್ಧಿಯನ್ನೂ ನನಗೆ ಅನುಗ್ರಹಿಸು. ತಾಯಿಯು ತನ್ನ ಮಗನಿಗೆ ಕೊಡಲಾಗದಿರುವುದಾವುದು ?

೬೦. ಈ ವಿಷಯೋಪಭೋಗಗಳು ಕಳೆದನಂತರ ಮನಸ್ಸನ್ನು ನಿರ್ಮಲಗೊಳಿಸಿಕೊಂಡು ಧರ್ಮವೂ, ಸರ್ವಶ್ರೇಷ್ಠವೂ ಆದ ತಪಸ್ಸನ್ನಾಚರಿಸುವೆನು. ಪುನರ್ಜನ್ಮಕ್ಕೆ ಕಾರಣವಾದ ಈ ಇಂದ್ರಿಯ ಸುಖಗಳನ್ನು ಮತ್ತೆ ಬಯಸುವುದಿಲ್ಲ.

ಸ್ವಕಾಮಾತ್ಕುರುತೇ ಕರ್ಮ ಕರ್ಮಣೋ ಭೋಗ ಏವ ಚ ।
ಭೋಗೌ ಶುಭಾಶುಭೌ ಜ್ಞೇಯೌ ತೌ ಹೇತೂ ಸುಖದುಃಖಯೋಃ ॥ ೬೧ ॥

ದುಃಖಂ ನ ಕಸ್ಮಾದ್ಭವತಿ ಸುಖಂ ವಾ ಜಗದಂಬಿಕೇ ।
ಸರ್ವಂ ಸ್ವಕರ್ಮಣೋ ಭೋಗಸ್ತೇನ ತನ್ನಿರತೋ ಬುಧಃ ॥ ೬೨ ॥

ಕರ್ಮ ನಿರ್ಮೂಲಯಂತ್ಯೇವ ಸಂತೋ ಹಿ ಸತತಂ ಮುದಾ ।
ಹರಿಭಾವನಬುದ್ಧ್ಯಾ ತತ್ತಪಸಾ ಭಕ್ತಸಂಗತಃ ॥ ೬೩ ॥

ಇಂದ್ರಿಯದ್ರವ್ಯಸಂಯೋಗಸುಖಂ ವಿಧ್ವಂಸನಾವಧಿ ।
ಹರಿಸಂಲಾಪರೂಪಂ ಚ ಸುಖಂ ತತ್ಸಾರ್ವಕಾಲಿಕಂ ॥ ೬೪ ॥

ಹರಿಸ್ಮರಣಶೀಲಾನಾಂ ನಾಯುರ್ಯಾತಿ ಸತಾಂ ಸತಿ ।
ನ ತೇಷಾಮೀಶ್ವರಃ ಕಾಲೋ ನ ಚ ಮೃತ್ಯುಂಜಯೋ ಧ್ರುವಂ ॥ ೬೫ ॥

೬೧. ಮನುಜನು ಕಾಮದಿಂದ ಕರ್ಮ ಮಾಡುತ್ತಾನೆ. ಕರ್ಮ ಮಾಡಿದುದರಿಂದ ಅದರ ಫಲವನ್ನು ಭೋಗಿಸುತ್ತಾನೆ. ಆ ಭೋಗವು ಶುಭ ಮತ್ತು ಅಶುಭರೂಪವಾಗಿದ್ದು ಸುಖದುಃಖಗಳಿಗೆ ಕಾರಣವಾಗುತ್ತದೆ.

೬೨. ಎಲೌ ಜಗನ್ಮಾತೆಯೇ ದುಃಖವಾಗಲೀ, ಸುಖವಾಗಲೀ ಜನ್ಮಾಂತರದ ಕರ್ಮಾನುಗುಣವಾಗಿ ಲಭಿಸುವುದೇ ಹೊರತು ಬೇರೆಯಲ್ಲ. ಆದುದರಿಂದ ಪಂಡಿತನು ಕರ್ಮವನ್ನು ತ್ಯಾಗಮಾಡುವನು

೬೩. ಸಂತರು ವಿಷ್ಣುಭಕ್ತರ ಸಹವಾಸದಿಂದ ತಪೋನಿರತರಾಗಿ, ಸಕಲ ಕರ್ಮಗಳನ್ನೂ ಶ್ರೀಹರಿಗೆ ಸಮರ್ಪಣೆಮಾಡಿ, ಕರ್ಮಬಂಧನದಿಂದ ಸರ್ವದಾ ಬಿಡುಗಡೆ ಹೊಂದುವರು.

೬೪. ಇಂದ್ರಿಯ ಮತ್ತು ದ್ರವ್ಯಗಳ ಸಂಬಂಧದಿಂದುಂಟಾಗುವ ಸುಖವು ಸಂಬಂಧವಿಚ್ಛೇದವಾಗುವವರೆಗೆ ಮಾತ್ರವಿರುವುದು. ಆದರೆ ಶ್ರೀಹರಿಯ ಸ್ಮರಣರೂಪವಾದ ಸುಖವು ಸಾರ್ವಕಾಲಿಕವಾದುದು.

೬೫. ಎಲೌ ಪಾರ್ವತಿಯೇ, ಸರ್ವದಾ ಹರಿಸ್ಮರಣೆ ಮಾಡಿಕೊಂಡಿರುವ ಸಂತರಿಗೆ ಆಯುಸ್ಸು ಕ್ಷೀಣವಾಗುವುದಿಲ್ಲ. ಅವರಿಗೆ ಸರ್ವೇಶ್ವರನಾಗಲೀ, ಕಾಲಪುರುಷನಾಗಲೀ, ಮೃತ್ಯುಂಜಯನಾಗಲೀ ಯಾವ ಕೇಡುಕನ್ನೂ ಉಂಟುಮಾಡುವುದಿಲ್ಲ.

ಚಿರಂ ಜೀವಂತಿ ತೇ ಭಕ್ತಾ ಭಾರತೇ ಚಿರಜೀವಿನಃ ।
ಸರ್ವಸಿದ್ಧಿಂ ಚ ವಿಜ್ಞಾಯ ಸ್ವಚ್ಛಂದಂ ಸರ್ವಗಾಮಿನಃ || ೧೬ ||

ಜಾತಿಸ್ಮರಾ ಪರೇರ್ಭಕ್ತಾ ಜಾನತೇ ಕೋಟಿಜನ್ಮನಃ ।
ಕಥಯಂತಿ ಕಥಾಂ ಜನ್ಮ ಲಭನ್ತೇ ಸ್ವೇಚ್ಛಯಾ ಮುದಾ || ೧೭ ||

ಪರಂ ಪುನಂತಿ ತೇ ಪೂತಾಸ್ತೀರ್ಥಾನಿ ಸ್ವೀಯಲೀಲಯಾ ।
ಪುಣ್ಯಕ್ಷೇತ್ರೇಽತ್ರ ಸೇವಾಯೈ ಪರಾರ್ಥಂ ಚ ಭ್ರಮಂತಿ ತೇ || ೧೮ ||

ವೈಷ್ಣವಾನಾಂ ಪದಸ್ಪರ್ಶಾತ್ಸದ್ಯಃ ಪೂತಾ ವಸುಂಧರಾ ।
ಕಾಲಂ ಗೋದೋಹಮಾತ್ರಂ ತು ತೀರ್ಥೇ ಯತ್ರ ವಸಂತಿ ತೇ || ೧೯ ||

ಗುರೋರಾಸ್ಯಾದ್ವಿಷ್ಣುಮಂತ್ರಃ ಶ್ರುತೌ ಯಸ್ಯ ಪ್ರವಿಶ್ಯತಿ ।
ತಂ ವೈಷ್ಣವಂ ತೀರ್ಥಪೂತಂ ಪ್ರವದಂತಿ ಪುರಾವಿದಃ || ೨೦ ||

೧೬. ಆ ಭಕ್ತರೆಲ್ಲರೂ ಭರತಖಂಡದಲ್ಲಿ ಚಿರಂಜೀವಿಗಳಾಗಿ, ಸರ್ವಸಿದ್ಧಿಯನ್ನೂ ಪಡೆದು ಎಲ್ಲಕಡೆಯಲ್ಲೂ ಸ್ವಚ್ಛಂದವಾಗಿ ಸಂಚರಿಸುವರು.

೧೭. ಜನ್ಮಾಂತರದ ಜಾತಿಸ್ಮರಣೆಯುಳ್ಳ ಹರಿಭಕ್ತರು ಕೋಟಿಜನ್ಮಗಳ ಕಥೆಯನ್ನು ಹೇಳುವರು. ಮತ್ತು ತಮಗೆ ಇಚ್ಛೆಬಂದಾಗ ಜನ್ಮವೆತ್ತುವರು.

೧೮. ಪವಿತ್ರರಾದ ವಿಷ್ಣುಭಕ್ತರು ತಮ್ಮ ಮಹಿಮೆಯಿಂದ ತೀರ್ಥಗಳನ್ನೂ ಪವಿತ್ರಗೊಳಿಸುವರು. ಅವರು ಪರಮಾತ್ಮನ ಸೇವೆಗೂ ಮತ್ತು ಪರೋಪದೇಶಾರ್ಥವಾಗಿಯೂ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುವರು.

೧೯. ಹಸು ಕರೆಯುವಷ್ಟು ಹೊತ್ತು, ವೈಷ್ಣವರು ಯಾವ ತೀರ್ಥದಲ್ಲಿ ನೆಲೆಸಿದರೂ ಅವರ ಪಾದಸ್ಪರ್ಶದಿಂದ ಕೂಡಲೇ ಭೂದೇವಿಯು ಪವಿತ್ರಳಾಗುವಳು.

೨೦. ಗುರುಮುಖದಿಂದ ಯಾರ ಕಿವಿಯಲ್ಲಿ ವಿಷ್ಣುಮಂತ್ರೋಪದೇಶವಾಗಿರುವುದೋ, ಅವನು ಪವಿತ್ರನಾದ ವೈಷ್ಣವನೆಂದು ಪುರಾವಿದರು ಹೇಳುವರು

ಪುರುಷಾಣಾಂ ಶತಂ ಪೂರ್ವಮುದ್ಧರಂತಿ ಶತಂ ಪರಂ ।
ಲೀಲಯಾ ಭಾರತೇ ಭಕ್ತ್ಯಾ ಸೋದರಾನ್ಮಾತರಂ ತಥಾ ॥ ೭೧ ॥

ಮಾತಾಮಹಾನಾಂ ಪುರುಷಾನ್ದಶಪೂರ್ವಾನ್ದಶಾಪರಾನ್ ।
ಮಾತುಃಪ್ರಸೂಮುದ್ಧರಂತಿ ದಾರುಣಾದ್ಯಮತಾಡನಾತ್ ॥ ೭೨ ॥

ಭಕ್ತದರ್ಶನಮಾಶ್ಲೇಷಂ ಮಾನವಾಃ ಪ್ರಾಪ್ನುವಂತಿ ಯೇ ।
ತೇ ಯಾತಾಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಾಃ ॥ ೭೩ ॥

ನ ಲಿಪ್ತಾಃ ಪಾತಕೈರ್ಭಕ್ತಾ ಸಂತತಂ ಹರಿಮಾನಸಾಃ ।
ಯಥಾಗ್ನಯಃ ಸರ್ವಭಕ್ಷ್ಯಾ ಯಥಾ ದ್ರವ್ಯೇಷು ವಾಯವಃ ॥ ೭೪ ॥

ತ್ರಿಕೋಟಿಜನ್ಮನಾಮಂತೇ ಪ್ರಾಪ್ನೋತಿ ಜನ್ಮಮಾನವಂ ।
ಪ್ರಾಪ್ನೋತಿ ಭಕ್ತಸಂಗಂ ಸ ಮಾನುಷೇ ಕೋಟಿಜನ್ಮತಃ ॥ ೭೫ ॥

೭೧. ಅಂಥ ವೈಷ್ಣವರು ಭಾರತದಲ್ಲಿ ಜನ್ಮವೆತ್ತಿ, ತಮ್ಮ ನೂರುಜನ ಪೂರ್ವ ಪುರುಷರನ್ನು, ನೂರುಜನ ಮುಂದಿನವರನ್ನೂ, ಸಹೋದರರು ಮತ್ತು ತಾಯಿಯರನ್ನೂ ತಮ್ಮ ಭಕ್ತಿಯ ಮಹಿಮೆಯಿಂದ ಉದ್ಧರಿಸುವರು

೭೨. ಮಾತಾಮಹರ (ತಾಯಿಯ ತಂದೆ) ಹಿಂದೆ ಮತ್ತು ಮುಂದೆ ಜನಿಸಿದ ಹತ್ತು ಹತ್ತು ಜನರನ್ನೂ, ತಾಯಿಯ ತಾಯಿಯನ್ನೂ, ಕ್ರೂರವಾದ ಯಮದಂಡನೆಯಿಂದ ವೈಷ್ಣವನು ಪಾರುಗಾಣಿಸುವನು.

೭೩ ವಿಷ್ಣುಭಕ್ತರ ದರ್ಶನ ಮತ್ತು ಆಲಿಂಗನವನ್ನು ಪಡೆದ ಮಾನವರು ಸಕಲ ತೀರ್ಥಯಾತ್ರೆಯ ಫಲವನ್ನೂ, ಸಕಲ ಯಜ್ಞದೀಕ್ಷೆಯ ಫಲವನ್ನೂ ಪಡೆಯುವರು.

೭೪. ಸರ್ವದಾ ಶ್ರೀಹರಿಯಲ್ಲಿಯೇ ಮನಸ್ಸನ್ನಿಟ್ಟಿರುವ ಭಕ್ತರಿಗೆ ಪಾಪವು ಸಂಘಟಿಸುವುದಿಲ್ಲ. ಸರ್ವಭಕ್ಷಕವಾದ ಅಗ್ನಿಯೂ, ಸಕಲವನ್ನೂ ಸ್ಪರ್ಶಮಾಡುವ ವಾಯುವೂ ಪವಿತ್ರವೆನಿಸಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

೭೫. ಪ್ರಾಣಿಯು ಮೂರುಕೋಟಿ ಜನ್ಮಗಳು ಕಳೆದನಂತರ ಮಾನುಷ ಜನ್ಮವನ್ನು ಹೊಂದುವನು. ಕೋಟಿ ಮನುಷ್ಯಜನ್ಮಗಳು ಕಳೆದನಂತರ ವಿಷ್ಣುಭಕ್ತರ ಸಂಗವು ಅವನಿಗೆ ದೊರೆಯುವುದು.

ಭಕ್ತಸಂಗಾದ್ಭವೇದ್ಭಕ್ತೇರಂಕುರೋ ಜೀವಿತಃ ಸತಿ ।
ಅಭಕ್ತದರ್ಶನಾದೇವ ಸ ಚ ಪ್ರಾಪ್ನೋತಿ ಶುಷ್ಕತಾಂ ॥ ೭೬ ॥

ಪುನಃ ಪ್ರಫುಲ್ಲತಾಂ ಯಾತಿ ವೈಷ್ಣವಾಲಾಪಮಾತ್ರತಃ ।
ಅಂಕುರಶ್ಚಾವಿನಾಶೀ ಚ ವರ್ಧತೇ ಪ್ರತಿ ಜನ್ಮನಿ ॥ ೭೭ ॥

ತತ್ತರೋರ್ವರ್ಧಮಾನಸ್ಯ ಹರಿದಾಸ್ಯಂ ಫಲಂ ಸತಿ ।
ಪರಿಣಾಮೋ ಭಕ್ತಿಪಾಕೇ ಪಾರ್ಷದಶ್ಚ ಭವೇದ್ಧರೇಃ ॥ ೭೮ ॥

ಮಹತಿ ಪ್ರಲಯೇ ನಾಶೋ ನ ಭವೇತ್ತಸ್ಯ ನಿಶ್ಚಿತಂ ।
ಸರ್ವಸೃಷ್ಟೇಶ್ಚ ಸಂಹಾರೇ ಬ್ರಹ್ಮಲೋಕಸ್ಯ ವೇಧಸಃ ॥ ೭೯ ॥

ತಸ್ಮಾನ್ನಾರಾಯಣೇ ಭಕ್ತಿಂ ದೇಹಿ ಮಾಮಂಬಿಕೇ ಸದಾ ।
ನ ಭವೇದ್ವಿಷ್ಣುಭಕ್ತಿಶ್ಚ ವಿಷ್ಣುಮಾಯೇ ತ್ವಯಾ ವಿನಾ ॥ ೮೦ ॥

---

೭೬. ವಿಷ್ಣುಭಕ್ತರ ಸಹವಾಸದಿಂದ ಭಕ್ತಿಯ ಅಂಕುರವು ವ್ಯಕ್ತವಾಗುವುದು. ಭಕ್ತರಲ್ಲದ ಪಾಷಂಡಿಗಳ ದರ್ಶನಮಾತ್ರದಿಂದಲೂ ಭಕ್ತ್ಯಂಕುರವು ಒಣಗುವುದು.

೭೭. ವೈಷ್ಣವರೊಡನೆ ಸಂಲಾಪಮಾಡಿದ ಮಾತ್ರದಿಂದ ಪುನಃ ಆ ಅಂಕುರವು ಚಿಗುರಿ ಪ್ರತಿಜನ್ಮದಲ್ಲೂ ನಿರಂತರವಾಗಿ ಅಭಿವೃದ್ಧಿಗೊಳ್ಳುವುದು.

೭೮. ಎಲೌ ಪತಿವ್ರತೆಯೇ, ಈ ರೀತಿಯಾಗಿ ಭಕ್ತಿಯ ಅಂಕುರವು ಬೆಳೆದು ಮರವಾಗಿ ಹರಿದಾಸ್ಯವೆಂಬ ಫಲವನ್ನು ಕೊಡುತ್ತದೆ. ಭಕ್ತಿಯು ಪರಿಪಕ್ವವಾದ ನಂತರ ಭಕ್ತನು ಶ್ರೀಹರಿಯ ಪಾರ್ಷದನಾಗುವನು.

೭೯. ಮಹಾಪ್ರಳಯದಲ್ಲಿಯೂ, ಬ್ರಹ್ಮಲೋಕದ ಮತ್ತು ಬ್ರಹ್ಮಸೃಷ್ಟಿಯ ನಾಶಕಾಲದಲ್ಲಿಯೂ ವಿಷ್ಣುವಿನ ಪಾರ್ಷದನಿಗೆ ನಾಶವಿಲ್ಲ.

೮೦. ಅಂಬಿಕೆಯೇ, ಆದಕಾರಣದಿಂದ ನನಗೆ ಶ್ರೀಮನ್ನಾರಾಯಣನಲ್ಲಿ ಸರ್ವದಾ ಭಕ್ತಿಯಿರುವಂತೆ ಅನುಗ್ರಹಿಸು. ವಿಷ್ಣುಮಾಯೆಯಾದ ನಿನ್ನ ಅನುಗ್ರಹವಾದ ಹೊರತು ಯಾರಿಗೂ ವಿಷ್ಣುಭಕ್ತಿಯುಂಟಾಗುವುದಿಲ್ಲ.

ತದ್ವಂತಂ ಲೋಕಶಿಕ್ಷಾರ್ಥಂ ಸ್ವತಪಸ್ತವ ಪೂಜನಂ ।
ಸರ್ವೇಷಾಂ ಫಲದಾತ್ರೀ ತ್ವಂ ನಿತ್ಯರೂಪಾ ಸನಾತನೀ ॥ ೮೧ ॥

ಗಣೇಶರೂಪಃ ಶ್ರೀಕೃಷ್ಣಃ ಕಲ್ಪೇ ಕಲ್ಪೇತವಾತ್ಮಜಃ ।
ತ್ವತ್ಕ್ರೋಡಮಾಗತಃ ಕ್ಷಿಪ್ರಮಿತ್ಯುಕ್ತ್ವಾಂತರಧೀಯತ ॥ ೮೨ ॥

ಕೃತ್ವಾಂತರ್ಧಾನಮೀಶಶ್ಚ ಬಾಲರೂಪಂ ವಿಧಾಯ ಸಃ ।
ಜಗಾಮ ಪಾರ್ವತೀತಲ್ಪಂ ಮಂದಿರಾಭ್ಯಂತರಸ್ಥಿತಂ ॥ ೮೩ ॥

ತಲ್ಪಸ್ಥೇ ಶಿವವೀರ್ಯೇ ಚ ಮಿಶ್ರಿತಃ ಸ ಬಭೂವ ಹ ।
ದದರ್ಶ ಗೇಹಶಿಖರಂ ಪ್ರಸೂತೋ ಬಾಲಕೋ ಯಥಾ ॥ ೮೪ ॥

ಶುದ್ಧಚಂಪಕವರ್ಣಾಭಃ ಕೋಟಿಚಂದ್ರಸಮಪ್ರಭಃ ।
ಸುಖದೃಶ್ಯಃ ಸರ್ವಜನೈಶ್ಚಕ್ಷೂರಶ್ಮಿವಿವರ್ಧಕಃ ॥ ೮೫ ॥

೮೧. ವಿಷ್ಣುಭಕ್ತರೂ ಕೂಡ ಲೋಕೋಪದೇಶಕ್ಕಾಗಿ ತಪಸ್ಸನ್ನೂ, ನಿನ್ನ ಪೂಜೆಯನ್ನೂ ಆಚರಿಸುವರು. ನಿತ್ಯಳೂ ಸನಾತನಿಯೂ ಆದ ನೀನು ಸಕಲರ ತಪಸ್ಸಿಗೂ ಫಲವನ್ನು ಕೊಡುವೆ.

೮೨. ಶ್ರೀಕೃಷ್ಣನು ಪ್ರತಿಕಲ್ಪದಲ್ಲಿಯೂ ಗಣೇಶನ ರೂಪದಲ್ಲಿ ನಿನ್ನ ಮಗನಾಗಿ ಅವತರಿಸುವನು. ಈಗಲೂ ಜಾಗ್ರತೆಯಾಗಿ ನಿನ್ನ ಉದರದಲ್ಲಿ ಪ್ರವೇಶಿಸುವನು ಎಂದು ಹೇಳಿ ಆ ವೃದ್ಧಬ್ರಾಹ್ಮಣನು ಅಂತರ್ಧಾನಹೊಂದಿದನು.

೮೩. ವೃದ್ಧಬ್ರಾಹ್ಮಣರೂಪಧಾರಿಯಾದ ಪರಮಾತ್ಮನು ಬಾಗಿಲಿನಿಂದ ಕಣ್ಮರೆಯಾಗಿ ಬಾಲಕರೂಪಧಾರಿಯಾಗಿ, ರತಿಗೃಹದ ಒಳಗಿರುವ ಪಾರ್ವತಿಯ ಹಾಸಿಗೆಗೆ ಹೋದನು

೮೪. ಹಾಸಿಗೆಯಲ್ಲಿ ಶಿವನ ವೀರ್ಯದಲ್ಲಿ ಮಿಶ್ರಿತನಾಗಿ, ಆಗತಾನೆ ಹುಟ್ಟಿದ ಶಿಶುವಿನಂತೆ ಮನೆಯ ಮೇಲುಭಾಗವನ್ನು ನೋಡುತ್ತ ಮೇಲುಮುಖನಾಗಿ ಮಲಗಿದನು.

೮೫. ಸಂಪಿಗೆ ಹೂವಿನಂತಿರುವ ಮೈಬಣ್ಣದಿಂದ ಮನೋಹರವಾದ ಆ ಬಾಲಕನ ಕೋಟಿಚಂದ್ರಪ್ರಭೆಯುಳ್ಳ ಮುಖವನ್ನು ಎಲ್ಲರೂ ನೋಡಿ ತಮ್ಮ ಕಣ್ಣಿನ ಕಾಂತಿಯನ್ನು ಹೆಚ್ಚಿಸಿಕೊಳ್ಳುವಂತಿತ್ತು.

## ಎಂಟನೆಯ ಅಧ್ಯಾಯದ ಸಾರಾಂಶ



ಪಾರ್ವತಿಯ ಸ್ತೋತ್ರದಿಂದ ಶ್ರೀಕೃಷ್ಣಪರಮಾತ್ಮನು ಸಂತುಷ್ಟನಾಗಿ ಆಕೆಗೆ ತನ್ನ ದಿವ್ಯದರ್ಶನವನ್ನಿತ್ತನು. ಭುವನಮೋಹಕವಾದ ಆ ಸುಂದರ ರೂಪವನ್ನು ನೋಡಿ ಪಾರ್ವತಿಯು ಆತನೇ ತನಗೆ ಮಗನಾಗಬೇಕೆಂದು ಬಯಸಿದಳು. ಆಕೆಯ ಬಯಕೆಯನ್ನು ಈಡೇರಿಸುವುದಾಗಿ ವರವಿತ್ತು, ದೇವತೆಗಳಿಗೂ ಅವರವರ ಇಷ್ಟಾರ್ಥವನ್ನು ಕೊಟ್ಟು ಪರಮಾತ್ಮನು ಅಂತರ್ಧಾನ ಹೊಂದಿದನು. ಅನಂತರ ದೇವತೆಗಳೆಲ್ಲರೂ ಸನತ್ಕುಮಾರನಿಗೆ ಹೇಳಿ ಶಿವನನ್ನು ಪಾರ್ವತಿಗೆ ಪ್ರತ್ಯರ್ಪಿಸಿದರು. ಸಂತುಷ್ಟಳಾದ ಪಾರ್ವತಿಯು ಅಸಂಖ್ಯ ಬ್ರಾಹ್ಮಣರಿಗೆ ಮಿಷ್ಟಭೋಜನವನ್ನು ಮಾಡಿಸಿ, ಭೂರಿ ದಕ್ಷಿಣೆಯಿತ್ತು, ಪುಣ್ಯಕವ್ರತವನ್ನು ಪೂರ್ಣಗೊಳಿಸಿ, ತಾನೂ ಪತಿಯೊಡನೆ ಊಟಮಾಡಿ ಏಕಾಂತದಲ್ಲಿ ಪವಡಿಸಿದಳು. ಪಾರ್ವತೀ ಪರಮೇಶ್ವರರು ಇಂತು ರತಿಸುಖವನ್ನನುಭವಿಸುತ್ತಿರುವಾಗ ವಿಷ್ಣುವು ವೃದ್ಧಬ್ರಾಹ್ಮಣರೂಪವನ್ನು ಧರಿಸಿ, ಆ ರತಿಗೃಹದ ಬಾಗಿಲಿಗೆ ಬಂದು ಆಹಾರವನ್ನು ಬೇಡಿದನು. ಆ ದೀನ ಧ್ವನಿಯನ್ನು ಕೇಳಿ ಹಾಸಿಗೆಯಿಂದೆದ್ದುಬಂದ ಶಿವನ ರೇತಸ್ಸು ಹಾಸಿಗೆಯಮೇಲೆ ಬಿದ್ದಿತು. ಅದನ್ನು ಕಂಡ ಪಾರ್ವತಿಯು ದುಃಖಿತಳಾದರೂ, ಬಂದ ಅತಿಥಿಯನ್ನು ಆದರದಿಂದ ಸತ್ಕರಿಸಿದಳು ವೃದ್ಧಬ್ರಾಹ್ಮಣವೇಷಧಾರಿಯಾದ ವಿಷ್ಣುವು ವಿಷ್ಣುಭಕ್ತರ ಮಹಿಮೆಯನ್ನು ಕೊಂಡಾಡಿ, ತನಗೆ ವಿಷ್ಣುಭಕ್ತಿಯನ್ನು ಅನುಗ್ರಹಿಸಬೇಕೆಂದು ಪಾರ್ವತಿಯನ್ನು ಬೇಡಿ, ಅಂತರ್ಧಾನ ಹೊಂದಿ, ಶಿಶುರೂಪವನ್ನು ತಾಳಿ, ಹಾಸಿಗೆಯಲ್ಲಿದ್ದ ಶಿವನ ವೀರ್ಯದಲ್ಲಿ ಸೇರಿ, ಆಗತಾನೆ ಜನಿಸಿದ ಶಿಶುವಿನಂತೆ ಆಟವಾಡಲಾರಂಭಿಸಿದನು. ಅಯೋನಿಜನಾದ ಆ ಶಿಶುವೇ ಮುಂದೆ ಗಣೇಶನೆಂದು ಪ್ರಖ್ಯಾತನಾದನು



ಅತೀವ ಸುಂದರತನುಃ ಕಾಮದೇವವಿಮೋಹನಃ ।
ಮುಖಂ ನಿರುಪಮಂ ಬಿಭ್ರಚ್ಚಾರದೇಂದುವಿನಿಂದಕಂ ॥ ೮೬ ॥

ಸುಂದರೇ ಲೋಚನೇ ಬಿಭ್ರಚ್ಚಾರುಪದ್ಮವಿನಿಂದಕೇ ।
ಓಷ್ಠಾಧರಪುಟಂ ಬಿಭ್ರತ್ಪಕ್ವಬಿಂಬವಿನಿಂದಕಂ ॥ ೮೭ ॥

ಕಪಾಲಂ ಚ ಕಪೋಲಂ ಚ ಪರಮಂ ಸುಮನೋಹರಂ ।
ನಾಸಾಗ್ರಂ ರುಚಿರಂ ಬಿಭ್ರದ್ವಿಂದ್ರಚಂಚುವಿನಿಂದಕಂ ॥ ೮೮ ॥

ತ್ರೈಲೋಕ್ಯೇ ವೈ ನಿರುಪಮಂ ಸರ್ವಾಂಗಂ ಬಿಭ್ರದುತ್ತಮಂ ।
ಶಯಾನಃ ಶಯನೇ ರಮ್ಯೇ ಪ್ರೇರಯನ್ಹಸ್ತಪಾದಕಂ ॥ ೮೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣೇಶಖಂಡೇ
ನಾರದನಾರಾಯಣಸಂವಾದೇ ಗಣೇಶೋತ್ಪತ್ತಿವರ್ಣನಂ
ನಾಮಾಷ್ಟಮೋಽಧ್ಯಾಯಃ

---

೮೬ ಮನ್ಮಥನನ್ನು ಮೋಹಗೊಳಿಸುವ ಸುಂದರ ಶರೀರವುಳ್ಳ ಆ ಬಾಲಕನ ಮುಖವು ಶರಚ್ಚಂದ್ರನನ್ನೂ ಧಿಕ್ಕರಿಸಿ ನಿರುಪಮವಾಗಿದ್ದಿತು.

೮೭–೮೮ ಕಮಲದಳಗಳನ್ನು ಧಿಕ್ಕರಿಸುವ ವಿಶಾಲವಾದ ನೇತ್ರಗಳಿಂದಲೂ, ಪಕ್ವವಾದ ತೊಂಡೆಹಣ್ಣನ್ನು ಅಲ್ಲಗಳೆಯುವ ತುಟಿಗಳಿಂದಲೂ, ಗರುಡನ ಕೊಕ್ಕಿನಂತಿರುವ ಮೂಗಿನ ತುದಿಯಿಂದಲೂ ಕೂಡಿ, ಮನೋಹರವಾದ ಆ ಬಾಲಕನ ಕಪೋಲವು ಕನ್ನಡಿಯಂತೆ ಮಿರುಗುತ್ತಿದ್ದಿತು.

೮೯. ತ್ರಿಲೋಕದಲ್ಲೂ ಸರ್ವೋತ್ತಮವಾದ ಸುಂದರಾಂಗಗಳುಳ್ಳ ಆ ಬಾಲಕನು ರಮ್ಯವಾದ ಶಯನದಲ್ಲಿ ಪವಡಿಸಿ ಕೈಕಾಲುಗಳನ್ನಾಡಿಸುತ್ತಿದ್ದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದ ನಾರದನಾರಾಯಣ ಸಂವಾದದಲ್ಲಿ ಗಣೇಶೋತ್ಪತ್ತಿ ವರ್ಣನರೂಪವಾದ
ಎಂಟನೆಯ ಅಧ್ಯಾಯವು ಮುಗಿದುದು.



—॥ ಓಂ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ನವಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಹರೌ ತಿರೋಹಿತೇ ಶರ್ವಾಣೀ ದುರ್ಗಾಶಂಕರಸ್ತದಾ ।
ಬ್ರಾಹ್ಮಣಾನ್ವೇಷಣಂ ಕೃತ್ವಾ ಬಭ್ರಾಮ ಪರಿತೋ ಮುನೇ ॥ ೧ ॥

॥ ಪಾರ್ವತ್ಯುವಾಚ ॥

ಅಯೇ ವಿಪ್ರೇಂದ್ರಾತಿವೃದ್ಧ ಕ್ವ ಗತೋಽಸಿ ಕ್ಷುಧಾತುರಃ ।
ಹೇ ತಾತ ದರ್ಶನಂ ದೇಹಿ ಪ್ರಾಣಾನ್ಮೇ ರಕ್ಷ ಮೇ ವಿಭೋ ॥ ೨ ॥

ಶಿವ ಶೀಘ್ರಂ ಸಮುತ್ತಿಷ್ಠ ಬ್ರಾಹ್ಮಣಾನ್ವೇಷಣಂ ಕುರು ।
ಕ್ಷಣಮುನ್ಮನಸೋರೇಷ ಗತಃ ಪ್ರತ್ಯಕ್ಷಮಾವಯೋಃ ॥ ೩ ॥

---

### ಒಂಭತ್ತನೆಯ ಅಧ್ಯಾಯವು

೧. ನಾರಾಯಣ :—ನಾರದಮುನಿಯೇ, ಇಂತು ವೃದ್ಧಬ್ರಾಹ್ಮಣನು ಕಣ್ಮರೆಯಾಗಲು, ಶಿವ ಪಾರ್ವತಿಯರು ಅವನನ್ನು ಹುಡುಕಿಕೊಂಡು ಅಲೆದಾಡಿದರು.

೨. ಪಾರ್ವತಿ :— ಅತ್ಯಂತ ವೃದ್ಧನಾದ ಎಲೈ ಬ್ರಾಹ್ಮಣೋತ್ತಮನೇ, ಹಸಿವಿನಿಂದ ಬಳಲಿದ ನೀನೆಲ್ಲಿಗೆ ಹೋದೆ. ತಂದೆಯೇ ನನಗೆ ದರ್ಶನವನ್ನು ಕೊಟ್ಟು ನನ್ನ ಪ್ರಾಣಗಳನ್ನು ಉಳಿಸು

೩. ಎಲೈ ಶಿವನೇ, ಜಾಗ್ರತೆಯಾಗಿ ಎದ್ದು ಆ ಬ್ರಾಹ್ಮಣನನ್ನು ಹುಡುಕಿಕೊಂಡು ಬಾ. ಕ್ಷಣಕಾಲ ಉದಾಸೀನ ಮಾಡಿದುದರಿಂದ ನಾವು ನೋಡುತ್ತಿರುವಂತೆಯೇ ಆತನು ಕಣ್ಮರೆಯಾದನು.

ಅಗೃಹೀತ್ವಾ ಗೃಹಾತ್ಪೂಜಾಂ ಗೃಹಿಣೇಽತಿಥಿರೀಶ್ವರ ।
ಯದಿ ಯಾತಿ ಕ್ಷುಧಾರ್ತಶ್ಚ ತಸ್ಯ ಕಿಂ ಜೀವನಂವೃಥಾ ॥ ೪ ॥

ಪಿತರಸ್ತಸ್ನ ಗೃಹ್ಣಂತಿ ಪಿಂಡದಾನಂ ಚ ತರ್ಪಣಂ ।
ತಸ್ಯಾಹುತಿಂ ನ ಗೃಹ್ಣಾತಿ ವಹ್ನಿಃ ಪುಷ್ಪಂ ಜಲಂ ಸುರಾಃ ॥ ೫ ॥

ಹವ್ಯಂ ಪುಷ್ಪಂ ಜಲಂ ದ್ರವ್ಯಮಶುಚೇಶ್ಚ ಸುರಾಸಮಂ ।
ಅಮೇಧ್ಯಸದೃಶಃ ಪಿಂಡಃ ಸ್ಪರ್ಶನಂ ಪುಣ್ಯನಾಶನಂ ॥ ೬ ॥

ಏತಸ್ಮಿನ್ನಂತರೇ ತತ್ರ ವಾಗ್ಬಭೂವಾಶರೀರಿಣೀ ।
ಕೈವಲ್ಯಯುಕ್ತಾ ಸಾ ದುರ್ಗಾ ತಾಂ ಶುಶ್ರಾವ ಶುಚಾತುರಾ ॥ ೭ ॥

ಶಾಂತಾ ಭವ ಜಗನ್ಮಾತಸ್ವಸುತಂಪಶ್ಯ ಮಂದಿರೇ ।
ಕೃಷ್ಣಂ ಗೋಲೋಕನಾಥಂ ತಂಪರಿಪೂರ್ಣತಮಂ ಪರಂ ॥ ೮ ॥

---

೪. ಈಶ್ವರನೇ. ಹಸಿದು ಬಳಲಿದ ಅತಿಥಿಯು ಉಚಿತ ಸತ್ಕಾರವನ್ನು ಹೊಂದದೆ ಗೃಹಸ್ಥನ ಮನೆಯಿಂದ ಹಿಂತಿರುಗಿದರೆ, ಆ ಗೃಹಸ್ಥನ ಜೀವನವು ವ್ಯರ್ಥವಾಗುವುದು.

೫. ಅಂಥ ಗೃಹಸ್ಥನು ಕೊಟ್ಟ ತರ್ಪಣೋದಕವನ್ನೂ, ಪಿಂಡಪ್ರದಾನವನ್ನೂ ಪಿತೃದೇವತೆಗಳು ಸ್ವೀಕರಿಸುವುದಿಲ್ಲ. ಅವನು ಅರ್ಪಿಸಿದ ಆಹುತಿಯನ್ನು ಅಗ್ನಿದೇವನೂ, ಪುಷ್ಪಜಲಗಳನ್ನು ದೇವತೆಗಳೂ ಸ್ವೀಕರಿಸುವುದಿಲ್ಲ,

೬. ಅತಿಥಿಸತ್ಕಾರವನ್ನು ಮಾಡದೆ ಅಶುಚಿಯಾದ ಗೃಹಸ್ಥನು ಸಮರ್ಪಿಸಿದ ಹವ್ಯಕವ್ಯಗಳೂ, ವತ್ರಪುಷ್ಪಪಾನೀಯಗಳೂ, ಮದ್ಯ (ಹೆಂಡ)ಕ್ಕೆ ಸಮನೆನಿಸುವುದು. ಅವನು ಕೊಟ್ಟ ಪಿಂಡವು ಅಮೇಧ್ಯಸದೃಶವಾಗುವುದು. ಅವನ ಸ್ಪರ್ಶದಿಂದ ಪುಣ್ಯನಾಶವಾಗುವುದು.

೭. ಈ ಮಧ್ಯೇ ಅಲ್ಲಿ ಅಶರೀರವಾಣಿಯೊಂದು ನುಡಿಯಿತು. ದುಃಖಿತಳಾದ ದುರ್ಗಾದೇವಿಯು ಕುತೂಹಲದಿಂದ ಅದನ್ನು ಕೇಳಿದಳು.

೮. ಎಲೌ ಜಗನ್ಮಾತೆಯೇ ಶಾಂತಳಾಗು. ಗೋಲೋಕಾಧಿನಾಥನೂ, ಪರಿಪೂರ್ಣಸ್ವರೂಪನೂ ಆದ ಶ್ರೀಕೃಷ್ಣಪರಮಾತ್ಮನು ನಿನ್ನ ಮಂದಿರದೊಳಗೆ ಶಿಶುವಾಗಿರುವನು. ಹೋಗಿ ನೋಡು.

ಸುಪುಣ್ಯಕವ್ರತತರೋಃ ಫಲರೂಪಂ ಸನಾತನಂ ।
ಯತ್ತೇಜೋ ಯೋಗಿನಃ ಶಶ್ವದ್ಧ್ಯಾಯಂತಿ ಸತತಂ ಮುದಾ ॥ ೯ ॥

ಧ್ಯಾಯಂತಿ ವೈಷ್ಣವಾ ದೇವಾ ಬ್ರಹ್ಮ ವಿಷ್ಣು ಶಿವಾದಯಃ ।
ಯಸ್ಯ ಪೂಜ್ಯಸ್ಯ ಸರ್ವಾಗ್ರೇ ಕಲ್ಪೇ ಕಲ್ಪೇ ಚ ಪೂಜನಂ ॥ ೧೦ ॥

ಯಸ್ಯ ಸ್ಮರಣಮಾತ್ರೇಣ ಸರ್ವವಿಘ್ನೋ ವಿನಶ್ಯತಿ ।
ಪುಣ್ಯರಾಶಿಸ್ವರೂಪಂ ಚ ಸ್ವಸುತಂ ಪಶ್ಯ ಮಂದಿರೇ ॥ ೧೧ ॥

ಕಲ್ಪೇ ಕಲ್ಪೇ ಧ್ಯಾಯಸಿ ಯಂ ಜ್ಯೋತೀರೂಪಂ ಸನಾತನಂ ।
ಪಶ್ಯ ತ್ವಂ ಮುಕ್ತಿದಂ ಪುತ್ರಂ ಭಕ್ತಾನುಗ್ರಹವಿಗ್ರಹಂ ॥ ೧೨ ॥

ತವ ವಾಂಛಾ ಪೂರ್ಣಬೀಜಂ ತಪಃ ಕಲ್ಪತರೋಃ ಫಲಂ ।
ಸುಂದರಂ ಸ್ವಸುತಂ ಪಶ್ಯ ಕೋಟಿಕಂದರ್ಪನಿಂದಕಂ ॥ ೧೩ ॥

---

೯. ಯೋಗಿಗಳು ತೇಜೋಮಯನಾದ ಯಾವ ಪರಮಾತ್ಮನನ್ನು ಸರ್ವದಾ ಸಂತೋಷದಿಂದ ಭಜಿಸುವರೋ, ಅನಾದಿಯಾದ ಆ ಪರಮಾತ್ಮನು ನೀನು ಮಾಡಿದ ಪುಣ್ಯಕವ್ರತವೆಂಬ ವೃಕ್ಷದ ಫಲರೂಪವಾಗಿ ಜನಿಸಿದ್ದಾನೆ.

೧೦ ವಿಷ್ಣುಭಕ್ತರೂ, ಬ್ರಹ್ಮ ವಿಷ್ಣು ಮಹೇಶ್ವರರೂ, ಸಕಲ ದೇವತೆಗಳೂ ಯಾವ ಪರಮಾತ್ಮನನ್ನು ಧ್ಯಾನಿಸುವರೋ, ಪ್ರತಿಕಲ್ಪದಲ್ಲಿಯೂ ಪೂಜ್ಯನಾದ ಯಾವಾತನಿಗೆ ಅಗ್ರಪೂಜೆಯಾಗುವುದೋ ಆತನು ನಿನ್ನ ಶಿಶುವಾಗಿರುವನು.

೧೧ ಯಾರನ್ನು ಸ್ಮರಿಸಿಕೊಂಡಮಾತ್ರದಿಂದ ಸಕಲ ವಿಘ್ನಗಳೂ ನಾಶ ಹೊಂದುವುವೋ, ಪುಣ್ಯರಾಶಿಸ್ವರೂಪನಾದ ಆ ಪರಮಾತ್ಮನು ನಿನ್ನ ಸುತನಾಗಿ ಜನಿಸಿರುವನು.

೧೨. ಸನಾತನನೂ ತೇಜೋರೂಪನೂ ಆದ ಯಾವ ಪರಮಾತ್ಮನನ್ನು ಪ್ರತಿ ಕಲ್ಪದಲ್ಲಿಯೂ ಧ್ಯಾನಮಾಡುವೆಯೋ, ಮುಕ್ತಿದಾಯಕನೂ, ಭಕ್ತಾನುಗ್ರಹಕ್ಕಾಗಿ ವಿಗ್ರಹಧಾರಿಯೂ ಆದ ಆ ಪರಮಾತ್ಮನು ನಿನ್ನ ಪುತ್ರನಾಗಿರುವನು.

೧೩. ನಿನ್ನ ಇಷ್ಟಪೂರ್ತಿಗೆ ಬೀಜಸ್ವರೂಪನೂ, ತಪಸ್ಸೆಂಬ ಕಲ್ಪವೃಕ್ಷಕ್ಕೆ ಫಲರೂಪನೂ, ಸೌಂದರ್ಯದಲ್ಲಿ ಕೋಟಿಮನ್ಮಥರನ್ನು ಮೀರುವವನೂ ಆದ ಪರಮಾತ್ಮನು ನಿನ್ನ ಪುತ್ರನಾಗಿರುವನು.

ನಾಯಂ ವಿಪ್ರಃ ಕ್ಷುಧಾರ್ತಶ್ಚ ವಿಪ್ರರೂಪೀ ಜನಾರ್ದನಃ ।
ಕಿಂ ವಾ ವಿಲಾಪಂ ಕುರುಷೇ ಕ್ವ ವಾ ವೃದ್ಧಃ ಕ್ವ ಚಾತಿಥಿಃ ।
ಸರಸ್ವತೀತ್ಯೇವ ಮುಕ್ತ್ವಾ ವಿರರಾಮ ಚ ನಾರದ ॥ ೧೪ ॥

ತ್ರಸ್ತಾ ಶ್ರುತ್ವಾಕಾಶವಾಣೀಂ ಜಗಾಮ ಸ್ವಾಲಯಂ ಸತೀ ।
ದದರ್ಶ ಬಾಲಂ ಪರ್ಯಂಕೇ ಶಯಾನಂ ಸಸ್ಮಿತಂ ಮುದಾ ॥ ೧೫ ॥

ಪಶ್ಯಂತಂ ಗೇಹಶಿಖರಂ ಶತಚಂದ್ರಸಮಪ್ರಭಂ ।
ಸ್ವಪ್ರಭಾಪಟಲೇನೈವ ದ್ಯೋತಯಂತಂ ಮಹೀತಲಂ ॥ ೧೬ ॥

ಕುರ್ವಂತಂ ಭ್ರಮಣಂ ತಲ್ಪೇ ಪಶ್ಯಂತಂ ಸ್ವೇಚ್ಛಯಾ ಮುದಾ ।
ಉಮೇತಿ ಶಬ್ದಂ ಕುರ್ವಂತಂ ರುದಂತಂ ತಂ ಸ್ತನಾರ್ಥಿನಂ ॥ ೧೭ ॥

---

೧೪. ಇಲ್ಲಿ ಬಂದಿದ್ದವನು ಹಸಿದು ಬಳಲಿದ ವೃದ್ಧಬ್ರಾಹ್ಮಣನಲ್ಲ, ಬ್ರಾಹ್ಮಣ ರೂಪಿಯಾಗಿ ಪರಮಾತ್ಮನು ಬಂದಿದ್ದನು. 'ಮುದುಕನೆಲ್ಲಿ, ಅತಿಥಿಯೆಲ್ಲಿ' ಎಂದು ಏಕೆ ವೃಥಾ ಗೋಳಾಡುವೆ. ಅಶರೀರವಾಣಿಯು ಇಂತು ನುಡಿದು ಸುಮ್ಮನಾಯಿತು.

೧೫. ಆಕಾಶವಾಣಿಯನ್ನು ಕೇಳಿ ಚಕಿತಳಾದ ಪಾರ್ವತಿಯು ಮಂದಿರ ದೊಳಕ್ಕೆ ಹೋಗಿ ಮಂಚದ ಮೇಲೆ ನಗುಮುಖದಿಂದ ಮಲಗಿರುವ ಸುಂದರ ಕಂದನನ್ನು ನೋಡಿದಳು.

೧೬. ಮೇಲುಮುಖನಾಗಿ ಮಲಗಿ ಮನೆಯ ಶಿಖರಭಾಗವನ್ನು ನೋಡು ತ್ತಿದ್ದ ನೂರುಚಂದ್ರರ ಕಾಂತಿಯಿಂದ ಮನೋಹರನಾದ ಆ ಬಾಲಕನು ತನ್ನ ದೇಹ ಕಾಂತಿಯಿಂದ ಭೂತಲವನ್ನು ಬೆಳಗುತ್ತಿದ್ದನು.

೧೭. ಹಾಸಿಗೆಯಲ್ಲಿ ಹೊರಳಾಡುತ್ತ, ಇಚ್ಛೆಬಂದಕಡೆ ನೋಡುತ್ತ, ಸ್ತನ್ಯ ಪಾನಕ್ಕಾಗಿ 'ಉಮಾ' ಎಂದು ಕೂಗಿಕೊಳ್ಳುತ್ತಿರುವ ಆ ಶಿಶುವನ್ನು ಪಾರ್ವತಿಯು ನೋಡಿದಳು.

ದೃಷ್ಟ್ವಾ ತದದ್ಭುತಂ ರೂಪಂ ತ್ರಸ್ತಾ ಶಂಕರಸನ್ನಿಧಿಂ ।
ಗತ್ವಾ ಸೋವಾಚ ಗಿರಿಶಂ ಸರ್ವಮಂಗಲಮಂಗಲಾ　　॥ ೧೮ ॥

॥ ಪಾರ್ವತ್ಯುವಾಚ ॥

ಗೃಹಮಾಗಚ್ಛ ಸರ್ವೇಶ ತಪಸಾಂ ಫಲದಾಯಕಂ ।
ಕಲ್ಪೇ ಕಲ್ಪೇ ಧ್ಯಾಯಸಿ ಯಂ ತಂ ಪಶ್ಯಾಗತ್ಯ ಮಂದಿರಂ　　॥ ೧೯ ॥

ಶೀಘ್ರಂ ಪುತ್ರಮುಖಂ ಪಶ್ಯ ಪುಣ್ಯಬೀಜಂ ಮಹೋತ್ಸವಂ ।
ಪುನ್ನಾಮನರಕತ್ರಾಣಕಾರಣಂ ಭವತಾರಣಂ　　॥ ೨೦ ॥

ಸ್ನಾನಂ ಚ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಣಂ ।
ಪುತ್ರಸಂದರ್ಶನಸ್ಯಾಸ್ಯ ಕಲಾಂ ನಾರ್ಹತಿ ಷೋಡಶೀಂ　　॥ ೨೧ ॥

ಸರ್ವದಾನೇನ ಯತ್ಪುಣ್ಯಂ ಕ್ಷ್ಮಾಪ್ರದಕ್ಷಿಣತಶ್ಚ ಯತ್ ।
ಪುತ್ರದರ್ಶನಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ　　॥ ೨೨ ॥

---

೧೮. ಸರ್ವಮಂಗಳರೂಪಿಣಿಯಾದ ಪಾರ್ವತಿಯು ಆ ಶಿಶುವಿನ ಆತ್ಯಾಶ್ಚರ್ಯಕರವಾದ ರೂಪವನ್ನು ನೋಡಿ ಚಕಿತಳಾಗಿ, ಶಿವನ ಸಮೀಪಕ್ಕೆ ಬಂದು, ಅವನನ್ನು ಕುರಿತು ಇಂತೆಂದಳು.

೧೯. ಪಾರ್ವತಿ:—ಎಲೈ ಸರ್ವೇಶ್ವರನೇ, ಯಾರು ತಪಃಫಲದಾಯಕನೋ, ಯಾರನ್ನು ಪ್ರತಿಕಲ್ಪದಲ್ಲಿಯೂ ಧ್ಯಾನಮಾಡುವೆಯೋ, ಆ ಪರಮಾತ್ಮನು ನಮ್ಮ ಮನೆಯಲ್ಲಿರುವುದನ್ನು ಬಂದು ನೋಡು.

೨೦. ಪುಣ್ಯಕಾರಣನೂ, ಮಹೋತ್ಸವದಾಯಕನೂ, ಪುಂನರಕತಾರಕನೂ, ಭವಭಂಜಕನೂ ಆದ ಪುತ್ರನ ಮುಖವನ್ನು ಜಾಗ್ರತೆ ಬಂದು ನೋಡು.

೨೧. ಸಕಲ ಪುಣ್ಯತೀರ್ಥಗಳ ಸ್ನಾನವೂ, ಎಲ್ಲ ಯಜ್ಞಗಳ ದೀಕ್ಷೆಯೂ, ಪುತ್ರಮುಖಾವಲೋಕನದ ಹದಿನಾರನೆಯ ಒಂದು ಭಾಗದಷ್ಟು ಪುಣ್ಯವನ್ನು ಕೊಡಲಾರವು.

೨೨. ಸಕಲ ದ್ರವ್ಯಗಳ ದಾನದಿಂದಲೂ, ಭೂಪ್ರದಕ್ಷಿಣೆ ಮಾಡುವುದರಿಂದಲೂ ಲಭಿಸುವ ಪುಣ್ಯವು ಪುತ್ರಮುಖಾವಲೋಕನಪುಣ್ಯದ ಹದಿನಾರನೆಯ ಒಂದು ಭಾಗಕ್ಕೂ ಎಣೆಯಾಗುವುದಿಲ್ಲ.

ಸರ್ವೈಸ್ತಪೋಭಿರ್ಯಜ್ಞೈಃ ಯದೇವಾನಶನೈರ್ವ್ರತೈಃ ।
ಸತ್ಪುತ್ರೋದ್ಭವಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೨೩ ॥

ಯದ್ವಿಪ್ರಭೋಜನೈಃ ಪುಣ್ಯಂ ಯದೇವ ಸುರಸೇವನೈಃ ।
ಸತ್ಪುತ್ರ ಪ್ರಾಪ್ತಿಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೨೪ ॥

ಪಾರ್ವತ್ಯಾ ವಚನಂ ಶ್ರುತ್ವಾ ಶಿವಃ ಸಂಹೃಷ್ಟಮಾನಸಃ ।
ಆಜಗಾಮ ಸ್ವಭವನಂ ಕ್ಷಿಪ್ರಂ ವೈ ಕಾಂತಯಾ ಸಹ ।
ದದರ್ಶ ತಲ್ಪೇ ಸ್ವಸುತಂ ತಪ್ತಕಾಂಚನಸನ್ನಿಭಂ ॥ ೨೫ ॥

ಹೃದಯಸ್ಥಂ ಚ ಯದ್ರೂಪಂ ತದೇವಾತಿಮನೋಹರಂ ।
ದುರ್ಗಾ ತಲ್ಪಾತ್ಸಮಾದಾಯ ಕೃತ್ವಾ ವಕ್ಷಸಿ ತಂ ಸುತಂ ।
ಚುಚುಂಬಾನಂದ ಜಲಧೌ ನಿಮಗ್ನಾ ಸೇತ್ಯುವಾಚ ತಂ ॥ ೨೬ ॥

೨೩. ಸಕಲ ತಪಸ್ಸುಗಳನ್ನಾಚರಿಸುವುದರಿಂದಲೂ, ಅನಶನವ್ರತಗಳನ್ನು ಕೈಗೊಳ್ಳುವುದರಿಂದಲೂ ದೊರೆಯುವ ಪುಣ್ಯವೂ ಕೂಡ ಸತ್ಪುತ್ರಪ್ರಾಪ್ತಿಯಿಂದ ಬರುವ ಪುಣ್ಯದ ಹದಿನಾರನೆಯ ಒಂದು ಭಾಗವನ್ನೂ ಹೋಲುವುದಿಲ್ಲ.

೨೪ ಬ್ರಾಹ್ಮಣ ಭೋಜನಮಾಡಿಸುವುದರಿಂದಲೂ, ದೇವತೆಗಳ ಸೇವೆಗೈಯ್ಯುವುದರಿಂದಲೂ ಪ್ರಾಪ್ತಿಯಾಗುವ ಪುಣ್ಯವೂ ಕೂಡ ಸತ್ಪುತ್ರಪ್ರಾಪ್ತಿಯ ಪುಣ್ಯದ ಷೋಡಶಕಲೆಗೂ ಎಣೆಯಾಗುವುದಿಲ್ಲ.

೨೫. ಪಾರ್ವತಿಯ ನುಡಿಯನ್ನು ಕೇಳಿ ಸಂತುಷ್ಟನಾದ ಶಿವನು ಆಕೆಯೊಡನೆ ಜಾಗ್ರತೆಯಾಗಿ ತನ್ನ ಮಂದಿರದೊಳಕ್ಕೆ ಬಂದನು. ಅಲ್ಲಿ ಪುಟಕ್ಕೆ ಹಾಕಿದ ಚಿನ್ನದಂತೆ ತೇಜಸ್ವಿಯಾದ ತನ್ನ ಮಗನನ್ನು ಮಂಚದಮೇಲೆ ಕಂಡನು.

೨೬ ತನ್ನ ಮನಸ್ಸಿನಲ್ಲಿ ಯಾವ ರೂಪವನ್ನು ಚಿತ್ರಿಸಿಕೊಂಡಿದ್ದಳೋ, ಮನೋಹರವಾದ ಅದೇ ರೂಪವನ್ನೆತ್ತಿ ಅವತರಿಸಿರುವ ಆ ಶಿಶುವನ್ನು ಪಾರ್ವತಿಯು ಹಾಸಿಗೆಯಿಂದ ಎತ್ತಿ ತನ್ನ ವಕ್ಷಃಸ್ಥಳದಲ್ಲಿ ಅಪ್ಪಿಕೊಂಡು ಮುದ್ದಿಟ್ಟು, ಆನಂದಸಾಗರದಲ್ಲಿ ಮುಳುಗಿದವಳಾಗಿ ಆ ಶಿಶುವನ್ನು ಕುರಿತಿಂತೆಂದಳು.

ಸಂಪ್ರಾಪ್ಯಾಮೂಲ್ಯರತ್ನಂ ತ್ವಾಂ ಪೂರ್ಣಮೇವ ಸನಾತನಂ ।
ಯಥಾ ಮನೋ ದರಿದ್ರಸ್ಯ ಸಹಸಾ ಪ್ರಾಪ್ಯ ಸದ್ಧನಂ ॥ ೨೭ ॥

ಕಾಂತೇಸುಚಿರಮಾಯತೇ ಪ್ರೋಷಿತೇ ಯೋಷಿತೋ ಯಥಾ ।
ಮಾನಸಂ ಪರಿಪೂರ್ಣಂ ಚ ಬಭೂವ ಚ ತಥಾ ಮಮ ॥ ೨೮ ॥

ಸುಚಿರಂ ಗತಮಾಯಾಂತಮೇಕಪುತ್ರಾ ಯಥಾ ಸುತಂ ।
ದೃಷ್ಟ್ವಾ ತುಷ್ಟಾ ಯಥಾ ವತ್ಸ ತಥಾಹಮಪಿ ಸಾಂಪ್ರತಂ ॥ ೨೯ ॥

ಸದ್ರತ್ನಂ ಸುಚಿರಂ ಭ್ರಷ್ಟಂ ಪ್ರಾಪ್ಯ ಹೃಷ್ಟೋ ಯಥಾ ಜನಃ ।
ಅನಾವೃಷ್ಟ್ಯಾ ಸುವೃಷ್ಟಿಂ ಚ ಸಂಪ್ರಾಪ್ಯಾಹಂ ತಥಾಸುತಂ ॥ ೩೦ ॥

ಯಥಾ ಸುಚಿರಮಂಧಾನಾಂ ಸ್ಥಿತಾನಾಂ ಚ ನಿರಾಶ್ರಯೇ ।
ಚಕ್ಷುಸ್ಸುನಿರ್ಮಲಂ ಪ್ರಾಪ್ಯ ಮನಃ ಪೂರ್ಣಂ ತಥೈವ ಮೇ ॥ ೩೧ ॥

೨೭. ಪರಿಪೂರ್ಣಸ್ವರೂಪನೂ, ಅನಾದಿಯೂ, ಅಮೂಲ್ಯರತ್ನಸದೃಶನೂ ಆದ ನಿನ್ನನ್ನು ಪಡೆದ ನನ್ನ ಮನಸ್ಸು ಅಚಿಂತಿತೋಪನತವಾದ ದ್ರವ್ಯವನ್ನು ಕಂಡ ದರಿದ್ರನ ಮನಸ್ಸಿನಂತೆ ಪ್ರಫುಲ್ಲಿತವಾಗಿದೆ.

೨೮. ಪ್ರವಾಸಿಯಾದ ಪತಿಯು ಚಿರಕಾಲದಮೇಲೆ ಹಿಂತಿರುಗಿಬಂದುದನ್ನು ಕಂಡ ಪತಿವ್ರತೆಯ ಮನಸ್ಸಿನಂತೆ ನನ್ನ ಮನಸ್ಸೂ ಪರಿಪೂರ್ಣವಾಯಿತು.

೨೯. ಎಲೈ ವತ್ಸನೇ, ದೇಶಾಂತರವಾಸಿಯಾದ ಮಗನು ಬಹಳಕಾಲದ ಮೇಲೆ ಹಿಂತಿರುಗಿಬಂದುದನ್ನು ಕಂಡ, ಏಕಮಾತ್ರ ಪುತ್ರನುಳ್ಳ ಮಾತೆಯು ಸಂತೋಷಿಸುವಂತೆ ನಾನು ಈಗ ಸಂತುಷ್ಟಳಾಗಿರುವೆನು.

೩೦. ಬಹಳಕಾಲದ ಹಿಂದೆ ಕಳೆದುಹೋದ ಉತ್ತಮರತ್ನವನ್ನು ಪುನಃ ಪಡೆದ ಮನುಷ್ಯನು ಸಂತುಷ್ಟನಾಗುವಂತೆಯೂ, ಅನಾವೃಷ್ಟಿ ಪ್ರದೇಶದಲ್ಲಿ ಸುವೃಷ್ಟಿಯನ್ನು ಕಂಡ ಪ್ರಜೆಗಳಂತೆಯೂ ಸುತಮುಖಾವಲೋಕನಮಾಡಿದ ನಾನು ಪ್ರೀತಳಾಗಿರುವೆನು

೩೧. ನಿರಾಶ್ರಯರಾಗಿ ಬಹಳಕಾಲದಿಂದಿದ್ದ ಕುರುಡರಿಗೆ ವಿಶಾಲವಾದ ನೇತ್ರಗಳು ಪ್ರಾಪ್ತವಾದರೆ ಹೇಗೋ ಹಾಗೆ ನನ್ನ ಮನಸ್ಸು ಪರಿಪೂರ್ತಿಗೊಂಡಿತು.

ದುಸ್ತರೇ ಸಾಗರೇ ಘೋರೇ ಪತಿತಸ್ಯ ಚ ಸಂಕಟೇ ।
ಅನೌಕಸ್ಯ ಪ್ರಾಪ್ಯ ನೌಕಾಂ ಮನಃ ಪೂರ್ಣಂ ತಥಾ ಮಮ ॥ ೩೨ ॥

ತೃಷ್ಣಯಾ ಶುಷ್ಕಕಂಠಾನಾಂ ಸುಚಿರಾಚ್ಚ ಸುಶೀತಲಂ ।
ಸುವಾಸಿತಂ ಜಲಂ ಪ್ರಾಪ್ಯ ಮನಃ ಪೂರ್ಣಂ ತಥಾ ಮಮ ॥ ೩೩ ॥

ದಾವಾಗ್ನಿಪತಿತಾನಾಂ ಚ ಸ್ಥಿತಾನಾಂ ಚ ನಿರಾಶ್ರಯೇ ।
ನಿರಗ್ನಿಮಾಶ್ರಯಂ ಪ್ರಾಪ್ಯ ಮನಃ ಪೂರ್ಣಂ ತಥಾ ಮಮ ॥ ೩೪ ॥

ಚಿರಂ ಬುಭುಕ್ಷಿತಾನಾಂ ಚ ವ್ರತೋಪೋಷಣಕಾರಿಣಾಂ ॥ ೩೫ ॥

ಸದನ್ನಂ ಪುರತೋ ದೃಷ್ಟ್ವಾ ಮನಃ ಪೂರ್ಣಂ ತಥಾ ಮಮ ।
ಇತ್ಯುಕ್ತ್ವಾ ಪಾರ್ವತೀ ತತ್ರ ಕ್ರೋಡೇ ಕೃತ್ವಾ ಸ್ವಬಾಲಕಂ ॥ ೩೬ ॥

---

೩೨. ದಾಟಲಾಗದ ಘೋರಸಾಗರ ಮಧ್ಯದಲ್ಲಿ ಬಿದ್ದು ದೋಣಿಯಿಲ್ಲದೆ ತೊಳಲುತ್ತಿರುವವನಿಗೆ ದೋಣಿ ಸಿಕ್ಕಿದರೆ ಹೇಗೋ ಹಾಗೆ ನನ್ನ ಮನಸ್ಸು ಪರಿಪೂರ್ಣವಾಗಿದೆ.

೩೩. ಬಾಯಾರಿಕೆಯಿಂದ ಬಳಲಿ ಬೆಂಡಾಗಿ ಗಂಟಲು ಗಾರಾದವರಿಗೆ, ಪಚ್ಚ ಕರ್ಪೂರಾದಿಗಳಿಂದ ಸುವಾಸಿತವಾದ ಶೀತಲೋದಕವು ಲಭಿಸಿದರೆ ಎಷ್ಟು ಸಂತೋಷವಾಗುವುದೋ ನನ್ನ ಮನಸ್ಸು ಅಷ್ಟು ಸಂತುಷ್ಟವಾಗಿದೆ.

೩೪. ಕಾಡುಕಿಚ್ಚಿನ ಮಧ್ಯೆ ಸಿಲುಕಿ, ನಿರಾಶ್ರಯರಾಗಿ ತಪಿಸುತ್ತಿರುವವರಿಗೆ ತಂಪಾದ ಆಶ್ರಯವು ದೊರೆತರೆ ಹೇಗೋ ಹಾಗೆ ನನ್ನ ಮನಸ್ಸು ಆನಂದಪೂರ್ಣವಾಗಿದೆ.

೩೫. ವ್ರತೋಪವಾಸಾದಿಗಳನ್ನಾಚರಿಸಿ ಚಿರಕಾಲದಿಂದ ಹಸಿದು ಬಳಲಿದವರಿಗೆ ಮಿಷ್ಟಾನ್ನವು ಲಭಿಸಿದಂತೆ ಲಭಿಸಿದ ನಿನ್ನಿಂದ ನನಗೆ ಸಂತೋಷವಾಯಿತು

೩೬. ಪಾರ್ವತಿಯು ಇಂತು ನುಡಿದು ಪರಮಾನಂದಭರಿತಳಾಗಿ ಆ ಬಾಲಕನನ್ನು ಅಪ್ಪಿಕೊಂಡು ಸ್ತನ್ಯಪಾನ ಮಾಡಿಸಿದಳು.

ಪ್ರೀತ್ಯಾ ಸ್ತನಂ ದದೌ ತಸ್ಮೈ ಪರಮಾನಂದಮಾನಸಾ ।
ಕ್ರೋಡೇ ಚಕಾರ ಭಗವಾನ್ಬಾಲಕಂ ಹೃಷ್ಟಮಾನಸಃ　　　॥ ೩೭ ॥

ಚುಚುಂಬ ಗಂಡೇ ವೇದೋಕ್ತಂ ಯುಯುಜೇ ಚಾಶಿಷಂ ಮುದಾ　॥ ೩೮ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ ನಾರದ
ನಾರಾಯಣಸಂವಾದೇ ಬಾಲಗಣೇಶದರ್ಶನಂ ನಾಮ
ನವಮೋಽಧ್ಯಾಯಃ

---

೩೭. ಸಂತುಷ್ಟನಾದ ಶಿವನೂ ಕೂಡ ಆ ಬಾಲಕನನ್ನು ತನ್ನ ವಕ್ಷಃಸ್ಥಲದಲ್ಲಿ ಅಪ್ಪಿಕೊಂಡು ಮುದ್ದಿಟ್ಟು ಆನಂದಿಸಿದನು.

೩೮. ಮತ್ತು ಕಪೋಲಗಳಿಗೆ ಚುಂಬಿಸಿ ಸಂತೋಷದಿಂದ ವೇದೋಕ್ತವಾದ ಆಶೀರ್ವಾದ ಮಾಡಿದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದಲ್ಲಿ
ಬಾಲಗಣೇಶದರ್ಶನರೂಪವಾದ
ಒಂಭತ್ತನೆಯ ಅಧ್ಯಾಯವು ಮುಗಿದುದು.



## ಒಂಭತ್ತನೆಯ ಅಧ್ಯಾಯದ ಸಾರಾಂಶ



ಇತ್ತ ಶಿವ ಪಾರ್ವತಿಯರು ಬಾಗಿಲಿಗೆ ಬಂದಿದ್ದ ವೃದ್ಧಬ್ರಾಹ್ಮಣನು ಕಣ್ಮರೆಯಾದುದಕ್ಕಾಗಿ ಬಹಳವಾಗಿ ತಪಿಸಿದರು. ಬಂದ ಅತಿಥಿಯು ನಿರಾಶನಾಗಿ ಮರಳಿದುದನ್ನು ಕಂಡ ಪಾರ್ವತಿಯು ಬಹಳವಾಗಿ ವ್ಯಥೆಗೊಂಡು, ಅವನನ್ನು ಮರಳಿ ಕರೆತರುವಂತೆ ಶಿವನನ್ನು ಬೇಡಿದಳು. ಅಷ್ಟರೊಳಗೆ 'ಬಂದಿದ್ದ ಅತಿಥಿಯು ವೃದ್ಧಬ್ರಾಹ್ಮಣ ಮಾತ್ರನಲ್ಲವೆಂದೂ, ಸಾಕ್ಷಾತ್ಪರಮಾತ್ಮನೇ ಆ ರೂಪದಿಂದ ಬಂದಿದ್ದು ಈಗ ಮಂದಿರದೊಳಗೆ ಶಿಶುವಾಗಿ ಆಡುತ್ತಿರುವನೆಂದೂ' ಅಶರೀರವಾಣಿಯೊಂದು ಪಾರ್ವತಿಗೆ ತಿಳಿಸಿತು. ಕೂಡಲೇ ಪಾರ್ವತಿಯು ಪರಮೇಶನೊಡನೆ ಮಂದಿರದೊಳಗೆ ಹೋಗಿ, ತನ್ನ ಮನೋಭೀಪ್ಸಿತನಾದ ಪರಮಾತ್ಮನು ದಿವ್ಯಮಂಗಳರೂಪಧಾರಿಯಾಗಿ ಬಾಲಲೀಲೆಯಾಡುತ್ತಿರುವುದನ್ನು ಮನದಣಿಯೆ ನೋಡಿ ಆನಂದತುಂದಿಲಳಾಗಿ, ಶಿಶುವನ್ನು ಎತ್ತಿಕೊಂಡು ಸ್ತನ್ಯಪಾನ ಮಾಡಿಸಿದಳು ಪರಮೇಶ್ವರನೂ ಕೂಡ ಬಾಲಕನನ್ನು ಅಪ್ಪಿಕೊಂಡು ಮುದ್ದಿಟ್ಟು ವೇದೋಕ್ತಮಂತ್ರದಿಂದ ಆಶೀರ್ವದಿಸಿದನು. ಇಂತು ಕಪಟನಾಟಕಸೂತ್ರಧಾರಿಯಾದ ಪರಮಾತ್ಮನು ಶಿವಪಾರ್ವತಿಯರನ್ನೂ ಪರೀಕ್ಷಿಸಿ, ಕೊನೆಗೆ ಅವರ ಪುತ್ರನಾಗಿ ಅವತರಿಸಿ ಗಣೇಶನೆನಿಸಿಕೊಂಡನು



—॥ ಓಂ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ದಶಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ತೌ ದಂಪತೀ ಬಹಿರ್ಗತ್ವಾ ಪುತ್ರಮಂಗಲಹೇತವೇ ।
ವಿವಿಧಾನಿ ಚ ರತ್ನಾನಿ ದ್ವಿಜೇಭ್ಯೋ ದದತುರ್ಮುದಾ ॥ ೧ ॥

ಬಂದಿಭ್ಯೋ ಭಿಕ್ಷುಕೇಭ್ಯಶ್ಚ ದಾನಾನಿ ವಿವಿಧಾನಿ ಚ ।
ನಾನಾವಿಧಾನಿ ವಾದ್ಯಾನಿ ವಾದಯಾಮಾಸ ಶಂಕರಃ ॥ ೨ ॥

ಹಿಮಾಲಯಶ್ಚ ರತ್ನಾನಾಂ ದದೌ ಲಕ್ಷಂ ದ್ವಿಜಾತಯೇ ।
ಸಹಸ್ರಂ ಚ ಗಜೇಂದ್ರಾಣಾಮಶ್ವಾನಾಂ ಚ ತ್ರಿಲಕ್ಷಕಂ ॥ ೩ ॥

### ಹತ್ತನೆಯ ಅಧ್ಯಾಯವು

೧. ನಾರಾಯಣ :— ಅನಂತರ ಆ ಶಿವಪಾರ್ವತಿಯರು ತಮ್ಮ ಪುತ್ರನ ಮಂಗಳಾಭಿವೃದ್ಧಿಗಾಗಿ, ಬ್ರಾಹ್ಮಣರಿಗೆ ವಿಧವಿಧ ರತ್ನಗಳನ್ನು ಸಂತೋಷದಿಂದ ದಾನವಾಗಿ ಕೊಟ್ಟರು

೨. ವಂದಿಮಾಗಧರಿಗೂ, ಭಿಕ್ಷುಕರಿಗೂ ಬೇಕಾದುದನ್ನು ದಾನಮಾಡಿ ಪರಶಿವನು ವಿವಿಧ ವಾದ್ಯಗಳನ್ನು ಮೊಳಗಿಸಿದನು.

೩. ಹಿಮವಂತನೂಕೂಡ ಬ್ರಾಹ್ಮಣೋತ್ತಮರಿಗೆ ಲಕ್ಷರತ್ನಗಳನ್ನೂ, ಶ್ರೇಷ್ಠವಾದ ಸಾವಿರ ಆನೆಗಳನ್ನೂ, ಮೂರುಲಕ್ಷ ಕುದುರೆಗಳನ್ನೂ ದಾನಮಾಡಿದನು.

ದಶಲಕ್ಷಂ ಗವಾಂ ಚೈವ ಪಂಚಲಕ್ಷಂ ಸುವರ್ಣಕಂ ।
ಮುಕ್ತಾಮಾಣಿಕ್ಯರತ್ನಾನಿ ಮಣಿಶ್ರೇಷ್ಠಾನಿ ಯಾನಿ ಚ ॥ ೪ ॥

ಅನ್ಯಾನ್ಯಪಿ ಚ ದಾನಾನಿ ವಸ್ತ್ರಾಣ್ಯಾಭರಣಾನಿ ಚ ।
ಸರ್ವಾಣ್ಯಮೂಲ್ಯರತ್ನಾನಿ ಕ್ಷೀರೋದೋತ್ಪತ್ತಿಕಾನಿ ಚ ॥ ೫ ॥

ಬ್ರಾಹ್ಮಣೇಭ್ಯೋ ದದೌ ವಿಷ್ಣುಃ ಕೌಸ್ತುಭಂ ಕೌತುಕಾನ್ವಿತಃ ।
ಬ್ರಹ್ಮಾ ವಿಶಿಷ್ಟದಾನಾನಿ ವಿಪ್ರಾಣಾಂ ವಾಂಛಿತಾನಿ ಚ ।
ಸುದುರ್ಲಭಾನಿ ಸೃಷ್ಟೌ ಚ ಬ್ರಾಹ್ಮಣೇಭ್ಯೋ ದದೌ ಮುದಾ ॥ ೬ ॥

ಧರ್ಮಃ ಸೂರ್ಯಶ್ಚ ಶಕ್ರಶ್ಚ ದೇವಾಶ್ಚ ಮುನಯಸ್ತಥಾ ।
ಗಂಧರ್ವಾಃ ಪರ್ವತಾ ದೇವ್ಯೋ ದದುರ್ದಾನಂ ಕ್ರಮೇಣ ಚ ॥ ೭ ॥

ಮಾಣಿಕ್ಯಾನಾಂ ಸಹಸ್ರಾಣಿ ರತ್ನಾನಾಂ ಚ ಶತಾನಿ ಚ ।
ಶತಾನಿ ಕೌಸ್ತುಭಾನಾಂ ಚ ಹೀರಕಾಣಾಂ ಶತಾನಿ ಚ ॥ ೮ ॥

೪ ಹತ್ತುಲಕ್ಷಗೋವುಗಳನ್ನೂ, ಐದುಲಕ್ಷ ಸುವರ್ಣನಾಣ್ಯಗಳನ್ನೂ, ಅಗಣಿತವಾಗಿ ಮುತ್ತು, ಮಾಣಿಕ್ಯ. ರತ್ನ ಮತ್ತು ಮಣಿಗಳನ್ನೂ ದಾನಮಾಡಿದನು.

೫. ವಸ್ತ್ರಾಭರಣಾದಿ ಇತರ ದಿವ್ಯದಾನಗಳನ್ನೂ, ಕ್ಷೀರಸಮುದ್ರದಲ್ಲಿ ಉತ್ಪನ್ನವಾದ ಸಕಲ ಅಮೂಲ್ಯರತ್ನಗಳನ್ನೂ ಯಥೇಚ್ಛವಾಗಿ ಕೊಟ್ಟನು.

೬. ಗಣೇಶನ ಉತ್ಪತ್ತಿಯಿಂದ ಸಂತುಷ್ಟನಾದ ವಿಷ್ಣುವು ಬ್ರಾಹ್ಮಣರಿಗೆಲ್ಲ ಕುತೂಹಲದಿಂದ ಕೌಸ್ತುಭರತ್ನಗಳನ್ನು ದಾನಮಾಡಿದನು. ಬ್ರಹ್ಮನೂ ಕೂಡ ಬ್ರಾಹ್ಮಣರಿಗೆ ಅಭೀಪ್ಸಿತವೂ, ಸೃಷ್ಟಿಯಲ್ಲಿ ಸುದುರ್ಲಭವೂ ಆದ ವಿಶಿಷ್ಟವಸ್ತುಗಳನ್ನು ಸಂತೋಷದಿಂದ ದಾನಮಾಡಿದನು.

೭. ಗಣೇಶನ ಜನ್ಮಮಹೋತ್ಸವದಲ್ಲಿ ಧರ್ಮ, ಸೂರ್ಯ, ಇಂದ್ರ ಮುಂತಾದ ಸಕಲ ದೇವತೆಗಳೂ, ಮುನಿಗಳೂ, ಗಂಧರ್ವರೂ, ಪರ್ವತಾಭಿಮಾನಿ ದೇವತೆಗಳೂ ಎಲ್ಲ ದೇವಿಯರೂ ಕ್ರಮವಾಗಿ ದಾನವಿತ್ತರು.

೮. ಸಹಸ್ರಾರು ಮಾಣಿಕ್ಯಗಳನ್ನೂ, ನೂರಾರು ರತ್ನಗಳನ್ನೂ, ನೂರಾರು ಕೌಸ್ತುಭ ಮತ್ತು ವಜ್ರಮಣಿಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದರು.

ಹರಿದ್ವರ್ಣಮಣೀಂದ್ರಾಣಾಂ ಸಹಸ್ರಾಣಿ ಮುದಾನ್ವಿತಾಃ ॥ ೯ ॥

ಗವಾಂ ರತ್ನಾನಿ ಲಕ್ಷಾಣಿ ಗಜರತ್ನಸಹಸ್ರಕಂ ।
ಅಮೂಲ್ಯಾನ್ಯಶ್ವರತ್ನಾನಿ ಶ್ವೇತವರ್ಣಾನಿ ಕೌತುಕಾತ್ ॥ ೧೦ ॥

ಶತಲಕ್ಷಂ ಸುವರ್ಣಾನಾಂ ವಹ್ನಿಶುದ್ಧಾಂಶುಕಾನಿ ಚ ।
ಬ್ರಾಹ್ಮಣೇಭ್ಯೋ ದದೌ ಬ್ರಹ್ಮಾ ತತ್ರ ಕ್ಷೀರೋದಧಿರ್ಮುದಾ ॥ ೧೧ ॥

ಹಾರಂ ಚಾಮೂಲ್ಯರತ್ನಾನಾಂ ತ್ರಿಷು ಲೋಕೇಷು ದುರ್ಲಭಂ ।
ಅತೀವ ನಿರ್ಮಲಂ ಸಾರಂ ಸೂರ್ಯಭಾನುವಿನಿಂದಕಂ ॥ ೧೨ ॥

ಪರಿಷ್ಕೃತಂ ಚ ಮಾಣಿಕ್ಯೈರ್ಹೀರಕೈಶ್ಚ ವಿರಾಜಿತಂ ।
ರಮ್ಯಂ ಕೌಸ್ತುಭಮಧ್ಯಸ್ಥಂ ದದೌ ದೇವೀ ಸರಸ್ವತೀ ॥ ೧೩ ॥

೯. ಸಾವಿರಾರು ಹಸರು ಬಣ್ಣದ ಪಚ್ಚಮಣಿಗಳನ್ನೂ ಬ್ರಾಹ್ಮಣರಿಗೆ ಸಂತೋಷದಿಂದ ದಾನಮಾಡಿದರು.

೧೦ ಉತ್ತಮವಾದ ಲಕ್ಷಗೋವುಗಳನ್ನೂ, ಸಾವಿರ ಆನೆಗಳನ್ನೂ, ಅತ್ಯಮೂಲ್ಯವೂ ಶ್ವೇತವರ್ಣವೂ ಆದ ಅಸಂಖ್ಯ ಕುದುರೆಗಳನ್ನೂ ಕುತೂಹಲದಿಂದ ದಾನಮಾಡಿದರು.

೧೧. ನೂರುಲಕ್ಷ ಸುವರ್ಣನಾಣ್ಯಗಳನ್ನೂ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನೂ ಬ್ರಹ್ಮದೇವನೂ ಮತ್ತು ಕ್ಷೀರಸಮುದ್ರನೂ ಬ್ರಾಹ್ಮಣರಿಗೆ ಸಂತೋಷದಿಂದ ದಾನಮಾಡಿದರು

೧೨-೧೩. ಮೂರುಲೋಕದಲ್ಲಿ ದುರ್ಲಭವೂ ಅತ್ಯಂತ ನಿರ್ಮಲವೂ. ಸೂರ್ಯಕಾಂತಿವಿನಿಂದಕವೂ, ಪೋಣಿಸಿರುವ ವಜ್ರ ಮಾಣಿಕ್ಯಾದಿಗಳಿಂದಲೂ, ಮಧ್ಯದಲ್ಲಿರುವ ಕೌಸ್ತುಭರತ್ನದಿಂದಲೂ, ಪರಿಶೋಭಿತವೂ ಆದ ಅಮೂಲ್ಯರತ್ನಹಾರಗಳನ್ನು ಸರಸ್ವತಿಯು ದಾನಮಾಡಿದಳು.

ವಿಷ್ಣುಃ ಪ್ರಮುದಿತಸ್ತತ್ರ ವಾದಯಾಮಾಸ ದುಂದುಭಿಂ
ಸಂಗೀತಂ ಗಾಯಯಾಮಾಸ ಕಾರಯಾಮಾಸ ನರ್ತನಂ
ವೇದಾಂಶ್ಚ ಪಾಠಯಾಮಾಸ ಪುರಾಣಾನಿ ಚ ನಾರದ ॥ ೧೯ ॥

ಮುನೀಂದ್ರಾನಾನಯಾಮಾಸ ಪೂಜಯಾಮಾಸ ತಾನ್ಮುದಾ ।
ಆಶಿಷಂ ದಾಪಯಾಮಾಸ ಕಾರಯಾಮಾಸ ಮಂಗಲಂ ।
ಸಾರ್ಧಂ ದೇವೈಶ್ಚ ದೇವೀಭಿರ್ದದೌ ತಸ್ಮೈ ಶುಭಾಶಿಷಃ ॥ ೨೦ ॥

॥ ವಿಷ್ಣುರುವಾಚ ॥

ಶಿವೇನ ತುಲ್ಯಂ ಜ್ಞಾನಂ ತೇ ಪರಮಾಯುಶ್ಚ ಬಾಲಕ ।
ಪರಾಕ್ರಮೇ ಮಯಾ ತುಲ್ಯಃ ಸರ್ವಸಿದ್ಧೀಶ್ವರೋ ಭವ ॥ ೨೧ ॥

॥ ಬ್ರಹ್ಮೋವಾಚ ॥

ಯಶಸಾ ತೇ ಜಗತ್ಪೂರ್ಣೋ ಸರ್ವಪೂಜ್ಯೋ ಭವಾಚಿರಂ ।
ಸರ್ವೇಷಾಂ ಪುರತಃ ಪೂಜಾ ಭವತ್ವತಿಸುದುರ್ಲಭಾ ॥ ೨೨ ॥

೧೯. ಎಲೈ ನಾರದನೇ, ಆ ಮಹೋತ್ಸವದಲ್ಲಿ ಪ್ರಮುದಿತನಾದ ವಿಷ್ಣುವು ನಗಾರಿ ಮುಂತಾದ ವಾದ್ಯಗಳನ್ನು ನೊಳಗಿಸಿ, ಸಂಗೀತರಸವನ್ನು ಗಾನಮಾಡಿಸಿ ನರ್ತನವನ್ನು ನಡೆಸಿ, ವೇದಪುರಾಣಗಳ ಪಠನಮಾಡಿಸಿದನು.

೨೦. ಅನಂತರ ಮುನಿಶ್ರೇಷ್ಠರನ್ನು ಕರೆಸಿ, ಅವರಿಗೆಲ್ಲ ಪೂಜೆಮಾಡಿಸಿ ಶಿಶುವಿಗೆ ಅವರಿಂದ ಆಶೀರ್ವಾದಮಾಡಿಸಿ ಮಂಗಳವೆಸಗಿದನು.

೨೧ ವಿಷ್ಣು :—ಎಲೈ ಶಿಶುವೇ, ನೀನು ಶಿವನಿಗೆ ಸಮನಾದ ಜ್ಞಾನದಿಂದಲೂ ಆಯುಸ್ಸಿನಿಂದಲೂ ಕೂಡಿ ಮೆರೆಯುವವನಾಗು. ನನಗೆ ಸದೃಶನಾದ ಪರಾಕ್ರಮಿಯಾಗಿ ಸರ್ವಸಿದ್ಧಿದಾಯಕನಾಗು.

೨೨. ಬ್ರಹ್ಮ :—ಜಾಗ್ರತೆಯಾಗಿ ತೇಜಸ್ಸಿನಿಂದಲೂ, ಯಶಸ್ಸಿನಿಂದಲೂ ಪರಿಪೂರ್ಣನಾಗಿ ಸರ್ವಪೂಜ್ಯನಾಗು. ಎಲ್ಲದೇವತೆಗಳಿಗೂ ದುರ್ಲಭವಾದ ಅಗ್ರ ಪೂಜೆಯು ನಿನಗುಂಟಾಗಲಿ.

ತ್ರೈಲೋಕ್ಯಸಾರಂ ಹಾರಂ ಚ ಸದ್ರತ್ನಗಣನಿರ್ಮಿತಂ ।
ಭೂಷಣಾನಿ ಚ ಸರ್ವಾಣಿ ಸಾ ಸಾವಿತ್ರೀ ದದೌ ಮುದಾ ॥ ೧೪ ॥

ಲಕ್ಷಂ ಸುವರ್ಣಲೋಷ್ಟ್ರಾನಾಂ ಧನಾನಿ ವಿವಿಧಾನಿ ಚ ।
ಶತಾನ್ಯಮೂಲ್ಯರತ್ನಾನಾಂ ಕುಬೇರಶ್ಚ ದದೌ ಮುದಾ ॥ ೧೫ ॥

ದಾನಾನಿ ದತ್ವಾ ವಿಪ್ರೇಭ್ಯಸ್ತೇ ಸರ್ವೇ ದದೃಶುಃ ಶಿಶುಂ ।
ಪರಮಾನಂದಸಂಯುಕ್ತಾಃ ಶಿವಪುತ್ರೋತ್ಸವೇ ಮುನೇ ॥ ೧೬ ॥

ಭಾರಂ ವೋಢುಮಶಕ್ತಾಶ್ಚ ಬ್ರಾಹ್ಮಣಾ ಬಂದಿನಸ್ತಥಾ ।
ಸ್ಥಾಯಂ ಸ್ಥಾಯಂ ಚ ಗಚ್ಛಂತೋ ಧನಾನಿ ಪಥಿ ಕಾತರಾಃ ॥ ೧೭ ॥

ಕಥಯಂತಿ ಕಥಾಃ ಸರ್ವೇ ವಿಶ್ರಾಂತಾಃ ಪೂರ್ವದಾಯಿನಾಂ ।
ವೃದ್ಧಾಃ ಶೃಣ್ವಂತಿ ಮುದಿತಾ ಯುವಾನೋ ಭಿಕ್ಷುಕಾ ಮುನೇ ॥ ೧೮ ॥

೧೪. ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿ ತ್ರೈಲೋಕ್ಯಸಾರವೆನಿಸಿದ ಹಾರವನ್ನೂ, ಸಕಲಾಭರಣಗಳನ್ನೂ ಸಾವಿತ್ರಿಯು ಸಂತೋಷದಿಂದ ದಾನಮಾಡಿದಳು.

೧೫. ಧನಾಧಿಪತಿಯಾದ ಕುಬೇರನು ಲಕ್ಷಗಟ್ಟಲೆ ಇಟ್ಟಿಗೆಯ ಆಕಾರದಲ್ಲಿರುವ ಸುವರ್ಣಗಳನ್ನೂ ವಿವಿಧ ದ್ರವ್ಯಗಳನ್ನೂ, ನೂರಾರು ಅಮೂಲ್ಯರತ್ನಗಳನ್ನೂ ಮುದದಿಂದ ದಾನಮಾಡಿದನು.

೧೬. ಎಲೈ ನಾರದಮುನಿಯೇ. ಇಂತು ಶಿವನಿಗೆ ಪುತ್ರೋತ್ಸವವಾದಾಗ ಪರಮಾನಂದತುಂದಿಲರಾದ ಸಕಲ ದೇವತೆಗಳೂ, ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟು ಆ ಶಿಶುವನ್ನು ಸಂದರ್ಶಿಸಿದರು.

೧೭. ಈ ಪ್ರಕಾರವಾದ ದಾನಗಳನ್ನು ತೆಗೆದುಕೊಂಡ ಬ್ರಾಹ್ಮಣರೂ ಮತ್ತು ವಂದಿಮಾಗಧರೂ ಭಾರವನ್ನು ಹೊರಲಾರದೆ ದಾರಿಯಲ್ಲಿ ನಿಂತು ನಿಂತು ವಿಶ್ರಮಿಸಿಕೊಳ್ಳುತ್ತ ಬಹಳ ಕಷ್ಟದಿಂದ ಪ್ರಯಾಣಮಾಡಿದರು

೧೮ ವಿಶ್ರಾಂತಿಗೊಂಡ ಸಕಲವಯೋವೃದ್ಧರೂ ಹಿಂದೆ ದಾನಮಾಡಿದವರ ಕಥೆಗಳನ್ನು ಹೇಳುತ್ತಿದ್ದರು ಯುವಕರೂ, ಭಿಕ್ಷುಕರೂ ಅದನ್ನು ಸಂತೋಷದಿಂದ ಕೇಳುತ್ತಿದ್ದರು.

|| ಧರ್ಮ ಉವಾಚ ||

ಮಯಾ ತುಲ್ಯಃ ಸುಧರ್ಮಿಷ್ಠೋ ಭವಾನ್ಭವತುಮುರ್ಲಭಃ ।
ಸರ್ವಜ್ಞಶ್ಚ ದಯಾಯುಕ್ತೋ ಹರಿಭಕ್ತೋ ಹರೇಃ ಸಮಃ || ೨೩ ||

|| ಮಹಾದೇವ ಉವಾಚ ||

ದಾತಾ ಭವ ಮಯಾ ತುಲ್ಯೋ ಹರಿಭಕ್ತಶ್ಚ ಬುದ್ಧಿಮಾನ್ ।
ವಿದ್ಯಾವಾನ್ಪುಣ್ಯವಾಂಛಾಂತೋ ದಾಂತಶ್ಚ ಪ್ರಾಣವಲ್ಲಭ || ೨೪ ||

|| ಲಕ್ಷ್ಮೀರುವಾಚ ||

ಮಮ ಸ್ಥಿತಿಶ್ಚ ತೇ ಗೇಹೇ ದೇಹೇ ಭವತು ಶಾಶ್ವತೀ ।
ಪತಿವ್ರತಾ ಮಯಾ ತುಲ್ಯಾ ಶಾಂತಾ ಕಾಂತಾ ಮನೋಹರಾ || ೨೫ ||

|| ಸರಸ್ವತ್ಯುವಾಚ ||

ಮಯಾ ತುಲ್ಯಾ ಸುಕವಿತಾ ಧಾರಣಾಶಕ್ತಿರೇವ ಚ ।
ಸ್ಮೃತಿರ್ವಿವೇಚನಾಶಕ್ತಿರ್ಭವತ್ವತಿತರಾಂ ಸುತ || ೨೬ ||

೨೩. ಧರ್ಮ :—ನೀನು ನನ್ನಂತೆಯೇ ಧರ್ಮಪರಾಯಣನೂ, ಸರ್ವಜ್ಞನೂ ದಯಾಸಾಗರನೂ, ಹರಿಭಕ್ತನೂ, ಶ್ರೀಹರಿಗೆ ಸಮಾನನೂ ಆಗು.

೨೪. ಮಹಾದೇವ :—ನನ್ನ ಪ್ರಾಣಸದೃಶನಾದ ಪುತ್ರನೇ, ನೀನು ನನ್ನಂತಯೇ. ದಾನಶೀಲನೂ, ಹರಿಭಕ್ತನೂ, ಬುದ್ಧಿವಂತನೂ, ವಿದ್ಯಾವಂತನೂ, ಪುಣ್ಯವಂತನೂ, ಶಾಂತನೂ ಮತ್ತು ದಾಂತನೂ ಆಗು.

೨೫. ಲಕ್ಷ್ಮಿ:—ನಿನ್ನಮನೆಯಲ್ಲಿಯೂ ಮತ್ತು ಶರೀರದಲ್ಲಿಯೂ ನಾನು ಸಂಪದ್ರೂಪದಿಂದಲೂ, ಕಾಂತಿರೂಪದಿಂದಲೂ ಇರುವೆನು. ಪತಿವ್ರತೆಯೂ, ನನಗೆ ಸದೃಶಳೂ, ಶಾಂತಳೂ ಮನೋಹರಳೂ ಆದ ಕಾಂತೆಯು ನಿನಗೆ ಲಭಿಸಲಿ.

೨೬. ಸರಸ್ವತಿ :—ಎಲೈ ಪುತ್ರನೇ, ನಿನಗೆ ನನ್ನಂತೆಯೇ ಒಳ್ಳೆಯ ಕವಿತಾ ಶಕ್ತಿಯೂ, ಧಾರಣಾಶಕ್ತಿಯೂ ಸ್ಮರಣ ಮತ್ತು ವಿವೇಚನಾಶಕ್ತಿಯೂ ದೊರೆಯಲಿ.

॥ ಸಾವಿತ್ರ್ಯುವಾಚ ॥

ವತ್ಸಾಹಂ ವೇದಜನನೀ ವೇದಜ್ಞಾನೀ ಭವಾಚಿರಂ ।
ಮನ್ಮಂತ್ರಜಪಶೀಲಶ್ಚ ಪ್ರವರೋ ವೇದವಾದಿನಾಂ ॥ ೨೭ ॥

॥ ಹಿಮಾಲಯ ಉವಾಚ ॥

ಶ್ರೀಕೃಷ್ಣೇತಿ ಮತಿಃ ಶಶ್ವದ್ಭಕ್ತಿರ್ಭವತು ಶಾಶ್ವತೀ ।
ಶ್ರೀಕೃಷ್ಣತುಲ್ಯೋ ಗುಣವಾನ್ಭವ ಕೃಷ್ಣಪರಾಯಣಃ ॥ ೨೮ ॥

॥ ಮೇನಕೋವಾಚ ॥

ಸಮುದ್ರತುಲ್ಯೋ ಗಾಂಭಿರ್ಯೇ ಕಾಮತುಲ್ಯಶ್ಚ ರೂಪವಾನ್ ।
ಶ್ರೀಯುಕ್ತಃ ಶ್ರೀಪತಿಸಮೋ ಧರ್ಮೇ ಧರ್ಮಸಮೋ ಭವ ॥ ೨೯ ॥

॥ ವಸುಂಧರೋವಾಚ ॥

ಕ್ಷಮಾಶೀಲೋ ಮಯಾತುಲ್ಯಃ ಶರಣ್ಯಃ ಸರ್ವರತ್ನವಾನ್ ।
ನಿರ್ವಿಘ್ನೋ ವಿಘ್ನನಿಘ್ನಶ್ಚ ಭವ ವತ್ಸ ಶುಭಾಶ್ರಯಃ ॥ ೩೦ ॥

೨೭. ಸಾವಿತ್ರಿ .—ಎಲೈ ವತ್ಸನೇ, ವೇದಮಾತೆಯಾದ ನನ್ನ ಆಶೀರ್ವಾದದಿಂದ ಬಹಳ ಜಾಗ್ರತೆಯಾಗಿ ವೇದಜ್ಞಾನಿಯಾಗು. ಅಲ್ಲದೆ ನನ್ನ ಮಂತ್ರವನ್ನು ಸರ್ವದಾ ಜಪಿಸುವವನಾಗಿ ವೇದಜ್ಞಾನಿಗಳಲ್ಲಿ ಸರ್ವೋತ್ತಮನಾಗು.

೨೮. ಹಿಮಾಲಯ :—ಶ್ರೀ ಕೃಷ್ಣನೇ ಸರ್ವೋತ್ತಮನೆಂಬ ಬುದ್ಧಿಯೂ ಅವನಲ್ಲಿ ಶಾಶ್ವತವಾದ ಭಕ್ತಿಯೂ ನಿನಗೆ ಉದಯಿಸಿ, ಶ್ರೀ ಕೃಷ್ಣನಂತೆ ಗುಣವಂತನೂ ಕೃಷ್ಣಪರಾಯಣನೂ ಆಗು.

೨೯. ಮೇನಕೆ :— ಗಾಂಭೀರ್ಯದಲ್ಲಿ ಸಮುದ್ರದಂತೆಯೂ, ರೂಪದಲ್ಲಿ ಮನ್ಮಥನಂತೆಯೂ, ಕಾಂತಿಯಲ್ಲಿ ಲಕ್ಷ್ಮೀರಮಣನಂತೆಯೂ, ಧರ್ಮದಲ್ಲಿ ಧರ್ಮಪುರುಷನಂತೆಯೂ ನೀನು ಪ್ರಖ್ಯಾತನಾಗು.

೩೦ ವಸುಂಧರೆ :- -ಎಲೈವತ್ಸನೇ. ನೀನು ನನ್ನಂತೆ ಕ್ಷಮಾಶೀಲನೂ, ಶರಣಾಗತ ರಕ್ಷಕನೂ, ಸಕಲರತ್ನಗಳಿಗೆ ಆಶ್ರಯನೂ, ನಿರ್ವಿಘ್ನನೂ, ವಿಘ್ನನಾಶಕನೂ ಆಗು.

|| ಪಾರ್ವತ್ಯುವಾಚ ||

ತಾತತುಲ್ಯಮಹಾಯೋಗೀ ಸಿದ್ಧಸಿದ್ಧಿಪ್ರದಃ ಶುಭಃ
ಮೃತ್ಯುಂಜಯಶ್ಚ ಭಗವಾನ್ಷಡೈಶ್ವರ್ಯಾನ್ವಿತಃ || ೩೧ ||

ಋಷಯೋ ಮುನಯಃ ಸಿದ್ಧಾ ಸರ್ವೇ ಯುಯುಜುರಾಶಿಷಃ |
ಬ್ರಾಹ್ಮಣಾ ಬಂದಿನಶ್ಚೈವ ಯುಯುಜುಃ ಸರ್ವಮಂಗಲಂ || ೩೨ ||

ಸರ್ವಂ ತೇ ಕಥಿತಂ ವತ್ಸ ಸರ್ವಮಂಗಲಮಂಗಲಂ |
ಗಣೇಶಜನ್ಮಕಥನಂ ಸರ್ವವಿಘ್ನವಿನಾಶನಂ || ೩೩ ||

ಇಮಂ ಸುಮಂಗಲಾಧ್ಯಾಯಂ ಯಃ ಶೃಣೋತಿ ಸುಖಂ ಯತಃ |
ಸರ್ವಮಂಗಲಸಂಯುಕ್ತಃ ಸ ಭವೇನ್ಮಂಗಲಾಲಯಃ || ೩೪ ||

---

೩೧. ಪಾರ್ವತಿ : —ತಂದೆಯಂತೆ ಮಹಾಯೋಗೀಶ್ವರನೂ, ಸಕಲಸಿದ್ಧಿದಾಯಕನೂ, ಮೃತ್ಯುಂಜಯನೂ, ಷಡ್ಗುಣೈಶ್ವರ್ಯಪರಿಪೂರ್ಣನೂ, ಆದನಾಗು

೩೨ ಅನಂತರ ಋಷಿಗಳು, ಮುನಿಗಳು ಮತ್ತು ಸಿದ್ಧರು ಆ ಶಿಶುವಿಗೆ ಆಶೀರ್ವದಿಸಿದರು. ಬ್ರಾಹ್ಮಣರು ಮತ್ತು ವಂದಿಮಾಗಧರು ಸರ್ವಮಂಗಳವನ್ನು ಅವನಿಗೆ ಬಯಸಿದರು

೩೩ ಎಲೈವತ್ಸ ನಾರದನೇ, ಸರ್ವಮಂಗಳಕರನಾದ ಎಲ್ಲಸಮಾಚಾರವನ್ನೂ ನಿನಗೆ ಹೇಳಿದೆನು. ಗಣೇಶಜನ್ಮಸಮಾಚಾರವನ್ನು ಕೇಳುವುದರಿಂದ ಸಕಲವಿಘ್ನವೂ ವಿನಾಶವಾಗುವುದು.

೩೪. ಮಂಗಳಕರವಾದ ಈ ಅಧ್ಯಾಯವನ್ನು ಯಾರು ನಿಯಮಪೂರ್ವಕವಾಗಿ ಕೇಳುವರೋ, ಅವರಿಗೆ ಸರ್ವಮಂಗಳವೂ ಉಂಟಾಗುವುದಲ್ಲದೆ ಅವರೇ ಮಂಗಳಗಳಿಗೆ ಮನೆಯಾಗುವರು.

ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಂ ।
ಕೃಪಣೋ ಲಭತೇ ಸತ್ವಂ ಶಶ್ವತ್ಸಂಪತ್ತ್ರದಾಯಿ ಚ ॥ ೩೫ ॥

ಭಾರ್ಯಾರ್ಥೀ ಲಭತೇ ಭಾರ್ಯಾಂ ಪ್ರಜಾರ್ಥೀ ಲಭತೇ ಪ್ರಜಾಂ ।
ಆರೋಗ್ಯಂ ಲಭತೇ ರೋಗೀ ಸೌಭಾಗ್ಯಂ ದುರ್ಭಗಾ ಲಭೇತ್ ॥ ೩೬ ॥

ಭ್ರಷ್ಟಪುತ್ರಂ ನಷ್ಟಧನಂ ಪ್ರೋಷಿತಂ ಚ ಪ್ರಿಯಂ ಲಭೇತ್ ।
ಶೋಕಾವಿಷ್ಟಃ ಸದಾನಂದಂ ಲಭತೇ ನಾತ್ರ ಸಂಶಯಃ ॥ ೩೭ ॥

ಯತ್ಪುಣ್ಯಂ ಲಭತೇ ಮರ್ತ್ಯೋ ಗಣೇಶಾಖ್ಯಾನಕಶ್ರುತಾ ।
ತತ್ಫಲಂ ಲಭತೇ ನೂನಮಧ್ಯಾಯಶ್ರವಣಾನ್ಮನೇ ॥ ೩೮ ॥

ಅಯಂ ಚ ಮಂಗಲಾಧ್ಯಾಯೋ ಯಸ್ಯ ಗೇಹೇ ಚ ತಿಷ್ಠತಿ ।
ಸದಾ ಮಂಗಲಸಂಯುಕ್ತಃ ಸ ಭವೇನ್ನಾತ್ರ ಸಂಶಯಃ ॥ ೩೯ ॥

೩೫. ಮಕ್ಕಳಿಲ್ಲದವರಿಗೆ ಮಕ್ಕಳೂ, ದರಿದ್ರರಿಗೆ ಧನವೂ, ದುರ್ಬಲನಿಗೆ ಬಲವೂ, ಶಾಶ್ವತವಾದ ಸಂಪತ್ತೂ ಸಿಗುವುದರಲ್ಲಿ ಸಂದೇಹವಿಲ್ಲ

೩೬. ಪತ್ನಿಯನ್ನು ಬಯಸುವವನಿಗೆ ಪತ್ನಿಯೂ, ಪ್ರಜೆಯನ್ನು ಬಯಸುವವನಿಗೆ ಸತ್ಪ್ರಜೆಯೂ, ಲಭಿಸುವುದು. ರೋಗಿಗೆ ಆರೋಗ್ಯವೂ, ದೌರ್ಭಾಗ್ಯನಿಗೆ ಸೌಭಾಗ್ಯವೂ ದೊರೆಯುವುದು.

೩೭. ಈ ಅಧ್ಯಾಯದ ಪಠನದಿಂದ ಭ್ರಷ್ಟನಾದ ಪುತ್ರನನ್ನೂ, ನಷ್ಟವಾದ ಧನವನ್ನೂ. ಪ್ರವಾಸಿಯಾದ ಪತಿಯನ್ನೂ, ಪುನಃ ಪಡೆಯುವರು ದುಃಖಿತನಾದವನು ಸರ್ವದಾ ಆನಂದವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

೩೮ ಗಣೇಶನ ಕಥೆಯನ್ನು ಕೇಳುವುದರಿಂದ ಮನುಜನಿಗೆ ಯಾವಪುಣ್ಯವು ಲಭಿಸುವುದೋ ಆ ಪುಣ್ಯವು ಈ ಅಧ್ಯಾಯ ಶ್ರವಣದಿಂದ ಲಭಿಸುವುದು.

೩೯. ಮಂಗಳಕರವಾದ ಈ ಅಧ್ಯಾಯವು ಯಾರ ಮನೆಯಲ್ಲಿರುವುದೋ, ಆ ಮನುಜನಿಗೆ ಸರ್ವದಾ ಮಂಗಳವುಂಟಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಯಾತ್ರಾಕಾಲೇ ಚ ಪುಣ್ಯಾಹೇ ಯಃ ಶೃಣೋತಿ ಸಮಾಹಿತಃ ।
ಸರ್ವಾಭೀಷ್ಟಂ ಸ ಲಭತೇ ಶ್ರೀ ಗಣೇಶಪ್ರಸಾದತಃ ॥ ೪೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣೇಶಖಂಡೇ
ನಾರದನಾರಾಯಣ ಸಂವಾದೇ ಗಣೇಶೋದ್ಭವಮಂಗಲಂ
ನಾಮ ದಶಮೋಽಧ್ಯಾಯಃ

---

೪೦ ಯಾತ್ರಾಕಾಲಗಳಲ್ಲಾಗಲೀ, ಪುಣ್ಯದಿವಸಗಳಲ್ಲಾಗಲೀ, ಸಾವಧಾನದಿಂದ ಈ ಅಧ್ಯಾಯವನ್ನು ಕೇಳುವವರು ಶ್ರೀ ಗಣೇಶನ ಅನುಗ್ರಹದಿಂದ ಸಕಲಾಭೀಷ್ಟವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದಲ್ಲಿ
ಗಣೇಶೋದ್ಭವ ಮಂಗಳವೆಂಬ ಹತ್ತನೆಯ ಅಧ್ಯಾಯವು ಮುಗಿದುದು



## ಹತ್ತನೆಯ ಅಧ್ಯಾಯದ ಸಾರಾಂಶ



ಪುತ್ರಮಹೋತ್ಸವದಲ್ಲಿ ಪಾರ್ವತೀಪರಮೇಶ್ವರರು ತಮ್ಮ ಸರ್ವಸ್ವವನ್ನು ಬ್ರಾಹ್ಮಣರಿಗೂ, ಭಿಕ್ಷುಕರಿಗೂ ಯಥೇಚ್ಛವಾಗಿ ದಾನಮಾಡಿದರು. ಅಲ್ಲದೆ ಬ್ರಹ್ಮವಿಷ್ಣುಮುಂತಾದ ಸಕಲ ದೇವತೆಗಳೂ ತಮತಮಗೆ ಅಭೀಪ್ಸಿತವಾದ ವಸ್ತುಗಳನ್ನು ಬ್ರಾಹ್ಮಣರಿಗೆ ಆತ್ಯಾದರದಿಂದ ದಾನಮಾಡಿ, ಶಿಶುವಿಗೆ ಮಂಗಳಾಶೀರ್ವಾದಮಾಡಿದರು. ಈಂತು ಎಲ್ಲರಿಂದಲೂ ಆಶೀರ್ವಾದಹೊಂದಿ ಗಣೇಶನು ದಿನೇ ದಿನೇ ಅಭಿವೃದ್ಧಿಹೊಂದುತ್ತಿದ್ದನು. ಗಣೇಶನ ಮಂಗಳಾಭಿವೃದ್ಧಿಯನ್ನು ತಿಳಿಸುವ ಈ ಮಂಗಳಾಧ್ಯಾಯವನ್ನು ಹೇಳಿ ಕೇಳಿದವರ ಇಷ್ಟಾರ್ಥವು ಕೈಗೂಡುವುದು.



|| ಓಂ ||

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ಏಕಾದಶೋಽಧ್ಯಾಯಃ ||

|| ನಾರಾಯಣ ಉವಾಚ ||

ಹರಿಸ್ತಮಾಶಿಷಂ ಕೃತ್ವಾ ರತ್ನಸಿಂಹಾಸನೇ ವರೇ |
ದೇವೈಶ್ಚ ಮುನಿಭಿಃ ಸಾರ್ಧಮುವಸತ್ತತ್ರ ಸಂಸದಿ || ೧

ದಕ್ಷಿಣೇ ಶಂಕರಸ್ತಸ್ಯ ವಾಮೇ ಬ್ರಹ್ಮಾ ಪ್ರಜಾಪತಿಃ |
ಪುರತೋ ಜಗತಾಂ ಸಾಕ್ಷೀ ಧರ್ಮೋ ಧರ್ಮವತಾಂ ವರಃ || ೨

### ಹನ್ನೊಂದನೆಯ ಅಧ್ಯಾಯವು

೧. ನಾರಾಯಣ :—ಶ್ರೀಹರಿಯು ಆ ಶಿಸುವಿಗೆ ಇಂತು ಆಶೀರ್ವಾದವಮಾಡಿ ಆ ಸಭೆಯಲ್ಲಿ ದೇವತೆಗಳು ಮತ್ತು ಮುನಿಗಳೊಡನೆ ಶ್ರೇಷ್ಠವಾದ ರತ್ನಸಿಂಹಾಸನದಲ್ಲಿ ಮಂಡಿಸಿದನು

೨. ಅವನ ಬಲಭಾಗದಲ್ಲಿ ಶಂಕರನೂ, ಎಡಭಾಗದಲ್ಲಿ ಪ್ರಜಾಪತಿಯಾದ ಬ್ರಹ್ಮನೂ, ಮುಂಭಾಗದಲ್ಲಿ ಜಗತ್ಸಾಕ್ಷಿಯೂ, ಧರ್ಮಿಷ್ಠನೂ ಆದ ಧರ್ಮದೇವನೂ ಕುಳಿತರು.

ತಥಾ ಧರ್ಮಸಮೀಪೇ ಚ ಸೂರ್ಯಃ ಶಕ್ರಃ ಕಲಾನಿಧಿಃ ।
ದೇವಾಶ್ಚ ಮುನಯೋ ಬ್ರಹ್ಮನ್ನೂಷುಃ ಶೈಲಾಃ ಸುಖಾಸನೇ ॥ ೩ ॥

ನನರ್ತ ನರ್ತಕಶ್ರೇಣೀ ಜಗುರ್ಗಂಧರ್ವಕಿನ್ನರಾಃ ।
ಶ್ರುತಿಸಾರಂ ಶ್ರುತಿಸುಖಂ ತುಷ್ಟುವುಃ ಶ್ರುತಯೋ ಹರಿಂ ॥ ೪ ॥

ಏತಸ್ಮಿನ್ನಂತರೇ ತತ್ರ ದ್ರಷ್ಟುಂ ಶಂಕರನಂದನಂ ।
ಆಜಗಾಮ ಮಹಾಯೋಗೀ ಸೂರ್ಯಪುತ್ರಃ ಶನೈಶ್ಚರಃ ॥ ೫ ॥

ಅತ್ಯಂತ ನಮ್ರವದನ ಈಷನ್ಮುದ್ರಿತಲೋಚನಃ ।
ಅಂತರ್ಬಹಿಃ ಸ್ಮರನ್ಕೃಷ್ಣಂ ಕೃಷ್ಣೈಕಗತಮಾನಸಃ ॥ ೬ ॥

ತಪಃಫಲಾಶೀ ತೇಜಸ್ವೀ ಜ್ವಲದಗ್ನಿಶಿಖೋಪಮಃ ।
ಅತೀವ ಸುಂದರಃ ಶ್ಯಾಮಃ ಪೀತಾಂಬರಧರೋ ವರಃ ॥ ೭ ॥

೩. ಎಲೈ ನಾರದಮುನಿಯೇ ಅನಂತರ ಧರ್ಮಪುರುಷನ ಸಮೀಪದಲ್ಲಿ ಸೂರ್ಯಚಂದ್ರರೂ, ಇಂದ್ರನೂ, ದೇವತೆಗಳೂ, ಮುನಿಗಳೂ ಮತ್ತು ಪರ್ವತಾಭಿಮಾನಿದೇವತೆಗಳೂ ಸುಖಾಸನದಲ್ಲಿ ಕುಳಿತಿರು

೪. ನರ್ತಕ ನರ್ತಕಿಯರು ನರ್ತನಮಾಡಿದರು. ಗಂಧರ್ವರು ಮತ್ತು ಕಿನ್ನರರು ಗಾಯನಮಾಡಿದರು. ಉಪನಿಷತ್ಸಾರಭೂತನಾದ ಶ್ರೀಹರಿಯನ್ನು ಶ್ರುತಿಗಳು ಶ್ರವಣಸುಖವಾಗುವಂತೆ ಸ್ತುತಿಸಿದವು.

೫. ಈ ಮಧ್ಯೆ ಮಹಾಯೋಗೀಶ್ವರನೂ, ಸೂರ್ಯಪುತ್ರನೂ ಆದ ಶನೀಶ್ವರನು ಶಂಕರನಮಗನನ್ನು ನೋಡುವುದಕ್ಕೆ ಅಲ್ಲಿಗೆ ಬಂದನು

೬. ಆ ಶನೈಶ್ಚರನು ನಮ್ರ ಮುಖನಾಗಿ ಕಣ್ಣುಗಳನ್ನು ಸ್ವಲ್ಪ ಮುಚ್ಚಿಕೊಂಡು ತದೇಕಧ್ಯಾನದಿಂದ ಶ್ರೀಕೃಷ್ಣಪರಮಾತ್ಮನನ್ನು ಒಳಗೂ-ಹೊರಗೂ ಸ್ಮರಿಸಿಕೊಳ್ಳುತ್ತಿದ್ದನು.

೭-೮. ಇತರರ ತಪಃಫಲಭೋಕ್ತೃವೂ, ಅಗ್ನಿಶಿಖೆಯಂತೆ ತೇಜಸ್ವಿಯೂ, ಶ್ಯಾಮಸುಂದರನೂ ಪೀತಾಂಬರಧಾರಿಯೂ ಆದ ಆ ಶನೀಶ್ವರನು ಬ್ರಹ್ಮ ವಿಷ್ಣು

ಪ್ರಣಮ್ಯ ವಿಷ್ಣುಂ ಬ್ರಹ್ಮಾಣಂ ಶಿವಂ ಧರ್ಮಂ ರವಿಂ ಸುರಾನ್ ।
ಮುನೀಂದ್ರಾನ್ಬಾಲಕಂ ದ್ರಷ್ಟುಂ ಜಗಾಮ ತದನುಜ್ಞಯಾ ॥ ೮ ॥

ಪ್ರಧಾನದ್ವಾರಮಾಸಾದ್ಯ ಶಿವತುಲ್ಯಪರಾಕ್ರಮಂ ।
ದ್ವಾಸ್ಥಂ ವೈ ಶೂಲಹಸ್ತಂ ಚ ವಿಶಾಲಾಕ್ಷಮುವಾಚ ಹ ॥ ೯ ॥

॥ ಶನೈಶ್ಚರ ಉವಾಚ ॥

ಶಿವಾಜ್ಞಯಾ ಶಿಶುಂ ದ್ರಷ್ಟುಂ ಯಾಮಿ ಶಂಕರಕಿಂಕರ ।
ವಿಷ್ಣುಪ್ರಮುಖದೇವಾನಾಂ ಮುನೀನಾಮನುರೋಧತಃ ॥ ೧೦ ॥

ಆಜ್ಞಾಂ ದೇಹಿ ಚ ಮಾಂ ಗಂತುಂ ಪಾರ್ವತೀಸನ್ನಿಧಿಂ ಬುಧ ।
ಪುನರ್ಯಾಮಿ ಶಿಶುಂ ದೃಷ್ಟ್ವಾ ವಿಷಯಾಸಕ್ತಮಾನಸಃ ॥ ೧೧ ॥

॥ ವಿಶಾಲಾಕ್ಷ ಉವಾಚ ॥

ಆಜ್ಞಾವಹೋ ನ ದೇವಾನಾಂ ನಾಹಂ ಶಂಕರಕಿಂಕರಃ ।
ಮಾರ್ಗಂ ದಾತುಂ ನಶಕ್ತೋಽಹಂ ವಿನಾ ಮನ್ಮಾತುರಾಜ್ಞಯಾ ॥ ೧೨ ॥

---

ಮಹೇಶ್ವರರನ್ನೂ, ಧರ್ಮಸೂರ್ಯರನ್ನೂ, ದೇವತೆಗಳನ್ನೂ, ಮತ್ತು ಮುನಿಗಳನ್ನೂ ವಂದಿಸಿ ಅವರ ಅನುಜ್ಞೆಯನ್ನು ಪಡೆದು ಶಿಶುಸಂದರ್ಶನಕ್ಕೆ ಹೋದನು.

೯. ಅಂತಃಪುರದ ಹೆಬ್ಬಾಗಿಲಿಗೆ ಹೋಗಿ ಅಲ್ಲಿದ್ದ ಈಶನಂತೆ ಪರಾಕ್ರಮಿಯೂ ಶೂಲಧಾರಿಯೂ, ಆದ ವಿಶಾಲಾಕ್ಷನೆಂಬ ದ್ವಾರಪಾಲಕನನ್ನು ಕುರಿತಿಂತೆಂದನು.

೧೦ ಶನೈಶ್ಚರಃ— ಎಲೈ ಶಂಕರನ ಕಿಂಕರನೇ, ಶಿವನಅಪ್ಪಣೆಯಿಂದಲೂ, ವಿಷ್ಣು ಮುಂತಾದ ದೇವತೆಗಳಮತ್ತು ಮುನಿಗಳ ಅನುಜ್ಞೆಯಿಂದಲೂ ನಾನು ಶಿಶುವಾದ ಗಣೇಶನನ್ನು ನೋಡಲು ಹೋಗುತ್ತಿದ್ದೇನೆ.

೧೧. ಆದುದರಿಂದ ಎಲೈ ಜ್ಞಾನಿಯೇ ಪಾರ್ವತಿಯುಸಮೀಪಕ್ಕೆ ಹೋಗಲು ನನಗೆ ಅಪ್ಪಣೆಕೊಡು. ಶಿಶುವನ್ನು ನೋಡಿಕೊಂಡು ಮತ್ತೆ ವಿಷಯಾಸಕ್ತ ಮನಸ್ಸಿನಿಂದ ಹೊರಗೆ ಹೋಗುವೆನು.

೧೨. ವಿಶಾಲಾಕ್ಷ—ನಾನು ದೇವತೆಗಳ ಆಜ್ಞಾಧಾರಕನಾಗಲೀ, ಶಂಕರನ ಕಿಂಕರನಾಗಲೀ ಅಲ್ಲ. ನನ್ನಮಾತೆಯಾದ ಪಾರ್ವತಿಯ ಅಪ್ಪಣೆಯಿಲ್ಲದೆ ನಾನು ದಾರಿಯನ್ನು ಬಿಡಲಾರೆ.

ಇತ್ಯುಕ್ತ್ವಾಭ್ಯಂತರಭ್ಯೇತ್ಯ ಪ್ರೇರಿತಃ ಸ ಶಿವಾಜ್ಞಯಾ ।
ದದೌ ಮಾರ್ಗಂ ಗ್ರಹೇಶಾಯ ವಿಶಾಲಾಕ್ಷೋ ಮುದಾ ತತಃ ॥ ೧೪ ॥

ಶನಿರಭ್ಯಂತರಂ ಗತ್ವಾ ಚಾನಮನ್ನಮ್ರಕಂಧರಃ ।
ರತ್ನಸಿಂಹಾಸನಸ್ಥಾಂ ಚ ಪಾರ್ವತೀಂ ಸಸ್ಮಿತಾಂ ಮುದಾ ॥ ೧೫ ॥

ಸಖಿಭಿಃ ಪಂಚಭಿಃ ಶಶ್ವತ್ಸೇವಿತಾಂ ಶ್ವೇತಚಾಮರೈಃ ।
ಸಖಿದತ್ತಂ ಚ ತಾಂಬೂಲಮುಪಭುಜ್ಯ ಸುವಾಸಿತಂ ॥ ೧೬ ॥

ವಹ್ನಿಶುದ್ಧಾಂಶುಕಾಧಾನಾಂ ರತ್ನಭೂಷಣಭೂಷಿತಾಂ ।
ಪಶ್ಯಂತೀಂ ನರ್ತಕೀನೃತ್ಯಂ ಪುತ್ರಂ ಧೃತ್ವಾ ಚ ವಕ್ಷಸಿ ॥ ೧೭ ॥

ನತಂ ಸೂರ್ಯಸುತಂ ದೃಷ್ಟ್ವಾ ದುರ್ಗಾಸಂಭಾಷ್ಯ ಸತ್ವರಂ ।
ಶುಭಾಶಿಷಂ ದದೌ ತಸ್ಮೈ ಪೃಷ್ಟ್ವಾ ತನ್ಮಂಗಲಂ ಶುಭಂ ॥ ೧೮ ॥

೧೪. ಹೀಗೆ ಹೇಳಿ ಆ ವಿಶಾಲಾಕ್ಷನು ಮನೆಯೊಳಕ್ಕೆ ಹೋಗಿ ಪಾರ್ವತಿಯ ಅಪ್ಪಣೆಪಡೆದು ಬಂದು ಗ್ರಹೇಶ್ವರನಾದ ಶನಿಗೆ ಮುದದಿಂದ ಮಾರ್ಗತೋರಿದನು.

೧೫. ಶನಿಯು ಅಂತಃಪುರದೊಳಕ್ಕೆ ಹೋಗಿ, ರತ್ನಸಿಂಹಾಸನದಲ್ಲಿ ಕುಳಿತಿರುವ ಸ್ಮಿತಮುಖಿಯಾದ ಪಾರ್ವತಿಗೆ ತಲೆಬಾಗಿ ಸಂತೋಷದಿಂದ ನಮಸ್ಕರಿಸಿದನು.

೧೬. ಆ ಪಾರ್ವತೀದೇವಿಯು ಐದುಜನ ಸಖಿಯರ ಶ್ವೇತಚಾಮರಸೇವೆಯನ್ನು ಕೈಗೊಳ್ಳುತ್ತ, ಆಪ್ತಸಖಿಯು ಕೊಡುತ್ತಿದ್ದ ಸುವಾಸಿತವಾದ ತಾಂಬೂಲವನ್ನು ಸೇವಿಸುತ್ತಿದ್ದಳು.

೧೭. ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನುಟ್ಟು, ರತ್ನಭೂಷಣಗಳನ್ನು ತೊಟ್ಟು, ಪುತ್ರನನ್ನು ವಕ್ಷಃಸ್ಥಲದಲ್ಲಿ ಅಪ್ಪಿಕೊಂಡು ನರ್ತಕಿಯ ನೃತ್ಯವನ್ನು ನೋಡುತ್ತ ಕುಳಿತಿದ್ದಳು.

೧೮. ಈ ರೀತಿಯಾದ ಪಾರ್ವತಿಯು ತನಗೆ ನಮಸ್ಕಾರಮಾಡಿದ ಸೂರ್ಯಪುತ್ರನಾದ ಶನೈಶ್ಚರನನ್ನು ನೋಡಿ, ಜಾಗ್ರತೆಯಾಗಿ ಕುಶಲಪ್ರಶ್ನೆಮಾಡಿ, ಅವನಿಗೆ ಮಂಗಳಾಶೀರ್ವಾದಗಳನ್ನು ಮಾಡಿ ಇಂತು ನುಡಿದಳು.

॥ ಪಾರ್ವತ್ಯುವಾಚ ॥

ಕಥಮಾನನ್ರವಕ್ತ್ರಸ್ತ್ವಂ ಶ್ರೋತುಮಿಚ್ಛಾಮಿ ಸಾಂಪ್ರತಂ ।
ಕಿಂ ನ ಪಶ್ಯಸಿ ಮಾಂ ಸಾಧೋ ಬಾಲಕಂ ವಾ ಗ್ರಹೇಶ್ವರ ॥ ೧೮ ॥

ಸರ್ವೇ ಸ್ವಕರ್ಮಣಾ ಸಾಧ್ವಿ ಭುಂಜತೇ ತಪಸಃ ಫಲಂ ।
ಶುಭಾಶುಭಂ ಚ ಯತ್ಕರ್ಮ ಕೋಟಿಕಲ್ಪೈರ್ನ ಲುಪ್ಯತೇ ॥ ೧೯ ॥

ಕರ್ಮಣಾ ಜಾಯತೇ ಜಂತುರ್ಬ್ರಹ್ಮೇಂದ್ರಾರ್ಯಮಮಂದಿರೇ ।
ಕರ್ಮಣಾ ನರಗೇಹೇಷು ಪಶ್ವಾದಿಷು ಚ ಕರ್ಮಣಾ ॥ ೨೦ ॥

ಕರ್ಮಣಾ ನರಕಂ ಯಾತಿ ವೈಕುಂಠಂ ಯಾತಿ ಕರ್ಮಣಾ ।
ಸ್ವಕರ್ಮಣಾ ಚ ರಾಜೇಂದ್ರ ಭೃತ್ಯಶ್ಚಾಪಿ ಸ್ವಕರ್ಮಣಾ ॥ ೨೧ ॥

ಕರ್ಮಣಾ ಸುಂದರಃ ಶಶ್ವದ್ವ್ಯಾಧಿಯುಕ್ತಃ ಸ್ವಕರ್ಮಣಾ ।
ಕರ್ಮಣಾ ವಿಷಯೀ ಮಾತರ್ನಿರ್ಲಿಪ್ತಶ್ಚ ಸ್ವಕರ್ಮಣಾ ॥ ೨೨ ॥

೧೮. ಪಾರ್ವತಿ :—ಎಲೈ ಗ್ರಹಪತಿಯೇ, ಸಾಧುವಾದ ನೀನು ನನ್ನನ್ನಾಗಲೀ, ಶಿಶುವನ್ನಾಗಲೀ ಕತ್ತೆತ್ತಿನೋಡದೆ ಈಗ ಹೀಗೆ ತಲೆತಗ್ಗಿಸಿಕೊಂಡು ನಿಂತಿರಲು ಕಾರಣವೇನೆಂಬುದನ್ನು ತಿಳಿಯ ಬಯಸುತ್ತೇನೆ.

೧೯. ಶನಿ :—ಎಲೌ ಸಾಧ್ವೀಮಣಿಯೇ, ಎಲ್ಲರೂ ತಮ್ಮ ಕರ್ಮಾನುಗುಣವಾಗಿ ತಪಃ ಫಲವನ್ನು ಉಪಭೋಗಿಸುವರು. ಶುಭಕರ್ಮವಾಗಲೀ. ಅಶುಭ ಕರ್ಮವಾಗಲೀ ಅನುಭವಿಸಿದ ಹೊರತು ಕೋಟಿಕಲ್ಪಗಳಾದರೂ ಸವೆಯುವುದಿಲ್ಲ.

೨೦. ಜಂತುವು ತನ್ನ ಕರ್ಮಾನುಗುಣವಾಗಿ. ಬ್ರಹ್ಮಲೋಕ ಇಂದ್ರಲೋಕ ಮತ್ತು ಸೂರ್ಯಲೋಕಗಳಲ್ಲಿಯೂ, ಮನುಷ್ಯಲೋಕದಲ್ಲಿಯೂ, ಪಶ್ವಾದಿಯೋನಿಗಳಲ್ಲಿಯೂ, ಜನಿಸುವನು.

೨೧. ನರಕವಾಗಲೀ, ವೈಕುಂಠವಾಗಲೀ ಕರ್ಮಾನುಗುಣವಾಗಿ ದೊರೆಯುವುದು. ಅಂತೆಯೇ ಕರ್ಮಾನುಗುಣವಾಗಿ ದೊರೆತನವಾಗಲೀ ಸೇವಕತನವಾಗಲೀ ಲಭಿಸುವುದು.

೨೨. ಎಲೌ ಮಾತೆಯೇ, ಮನುಜನು ಜನ್ಮಾಂತರದ ಕರ್ಮಾನುಗುಣವಾಗಿ ಸುಂದರನೋ ರೋಗಿಯೋ ವಿಷಯಾಸಕ್ತನೋ ನಿರ್ಲಿಪ್ತನೋ ಆಗುವನು

ಕರ್ಮಣಾ ಧನವಾಂಲ್ಲೋಕೋ ದೈನ್ಯಯುಕ್ತಃ ಸ್ವಕರ್ಮಣಾ ।
ಕರ್ಮಣಾ ಸತ್ಕುಟುಂಬೀ ಚ ಕರ್ಮಣಾ ಬಂಧುಕಂಟಕಃ ॥ ೨೩ ॥

ಸುಭಾರ್ಯಶ್ಚ ಸುಪುತ್ರಶ್ಚ ಸುಖೀ ಶಶ್ವತ್ಸ್ವಕರ್ಮಣಾ ।
ಅಪುತ್ರಕಶ್ಚ ಕುಸ್ತ್ರೀಕೋ ನಿಸ್ತ್ರೀಕಶ್ಚ ಸ್ವಕರ್ಮಣಾ ॥ ೨೪ ॥

ಇತಿಹಾಸಂ ಚಾತಿಗೋಪ್ಯಂ ಶ್ರುಣು ಶಂಕರವಲ್ಲಭೇ ।
ಅಕಥ್ಯಂ ಜನನೀಪಾರ್ಶ್ವೇ ಲಜ್ಜಾಜನಕಕಾರಣಂ ॥ ೨೫ ॥

ಆಬಾಲ್ಯಾತ್ಕೃಷ್ಣಭಕ್ತೋऽಹಂ ಕೃಷ್ಣಧ್ಯಾನೈಕಮಾನಸಃ ।
ತಪಸ್ಯಾಸು ರತಶ್ಚಶ್ವದ್ವಿಷಯೇऽಪಿ ರತಃ ಸದಾ ॥ ೨೬ ॥

ಪಿತಾ ದದೌ ವಿವಾಹೇ ತು ಕನ್ಯಾಂ ಚಿತ್ರರಥಸ್ಯ ಚ ।
ಅತಿತೇಜಸ್ವಿನೀ ಶಶ್ವತ್ತಪಸ್ಯಾಸು ರತಾ ಸತೀ ॥ ೨೭ ॥

---

೨೩. ಮನುಜನು ಹಣವಂತನಾಗಲೀ, ದರಿದ್ರನಾಗಲೀ, ಒಳ್ಳೆಯ ಕುಟುಂಬಿಯಾಗಲೀ, ಬಂಧುಕಂಟಕನಾಗಲೀ ಆಗುವುದೂ ಕರ್ಮಾನುಗುಣವಾಗಿಯೇ.

೨೪. ತನ್ನ ಕರ್ಮದಿಂದಲೇ ಮನುಜನು ಒಳ್ಳೆಯ ಪತ್ನೀಪುತ್ರರೊಡಗೂಡಿ ಸರ್ವದಾ ಸುಖಿಯಾಗಿರುವನು. ಅಂತೆಯೇ ಪತ್ನೀಪುತ್ರರಹಿತನಾಗಿರುವುದೂ, ದುಷ್ಟ ಸ್ತ್ರೀಯನ್ನು ಮದುವೆಯಾಗುವುದೂ ಜನ್ಮಾಂತರದ ಕರ್ಮಫಲವು.

೨೫. ಎಲೌ ಶಂಕರಪ್ರಿಯಳೇ, ಮಾತೆಯಾದ ನಿನ್ನೊಡನೆ ಹೇಳಬಾರದ ಮತ್ತು ಲಜ್ಜಾಜನಕವೂ, ಅತಿ ಗೋಪ್ಯವೂ ಆದ ನನ್ನ ಕಥೆಯನ್ನು ಹೇಳುವೆನು ಸಾವಧಾನದಿಂದ ಕೇಳು.

೨೬. ಬಾಲ್ಯದಿಂದಲೂ ಶ್ರೀಕೃಷ್ಣನ ಭಕ್ತನಾದ ನಾನು ಶ್ರೀಕೃಷ್ಣ ಧ್ಯಾನದಲ್ಲೂ, ತಪಸ್ಸಿನಲ್ಲೂ ನಿರತನಾಗಿ, ಒಮ್ಮೊಮ್ಮೆ ವಿಷಯಾಸಕ್ತಿಯನ್ನು ತೋರುತ್ತಿದ್ದೆ.

೨೭. ನನ್ನ ತಂದೆಯು ಚಿತ್ರರಥನ ಮಗಳನ್ನು ತಂದು ನನಗೆ ವಿವಾಹ ಮಾಡಿದನು. ಅತ್ಯಂತ ತೇಜಸ್ವಿನಿಯಾದ ಆಕೆಯೂ ತಪೋನಿರತಳಾಗಿದ್ದಳು.

ಏಕದಾ ಸಾ ತ್ವೃತುಸ್ನಾತಾ ಸುವೇಷಂ ಸ್ವಂ ವಿಧಾಯ ಚ ।
ರತ್ನಾಲಂಕಾರಸಂಯುಕ್ತಾ ಮುನಿಮಾನಸಮೋಹಿನೀ ॥ ೨೮ ॥

ಹರೇಃ ಪಾದಂ ಧ್ಯಾಯಮಾನಂ ಪಶ್ಯಂತೀ ಮದನೋಹಿತಾ ।
ಮತ್ಸಮೀಪಂ ಸಮಾಗತ್ಯ ಸಸ್ಮಿತಾ ಲೋಲಲೋಚನಾ ॥ ೨೯ ॥

ಶಶಾಪ ಮಾಮಪಶ್ಯಂತಮೃತುನಾಶಾಚ್ಚ ಕೋಪತಃ ।
ಬಾಹ್ಯಜ್ಞಾನವಿಹೀನಂ ಚ ಧ್ಯಾನಸಂಲಗ್ನಮಾನಸಂ ॥ ೩೦ ॥

ನ ದೃಷ್ಟಾಹಂ ತ್ವಯಾ ಯೇನ ನ ಕೃತಂ ಹ್ಯೃತುರಕ್ಷಣಂ ।
ತ್ವಯಾ ದೃಷ್ಟಂ ಚ ಯದ್ವಸ್ತು ಮೂಢ ಸರ್ವಂ ವಿನಶ್ಯತಿ ॥ ೩೧ ॥

ಅಹಂ ಚ ವಿರತೋ ಧ್ಯಾನಾತ್ತೋಷಯಂಸ್ತಾಂ ತದಾ ಸತೀಂ ।
ಶಾಪಂ ಮೋಕ್ತುಂ ನ ಶಕ್ತಾ ಸಾ ಪಶ್ಚಾತ್ತಾಪಮವಾಪ ಹ ॥ ೩೨ ॥

---

೨೮. ಹೀಗಿರಲು ಒಮ್ಮೆ ಅವಳು ಋತುಸ್ನಾನಮಾಡಿ, ಸುಂದರವೇಷವನ್ನು ಧರಿಸಿ, ರತ್ನಾಲಂಕಾರಗಳನ್ನು ತೊಟ್ಟು, ಮುನಿಗಳ ಮನಸ್ಸನ್ನೂ ಮೋಹಗೊಳಿಸುವಂತಿದ್ದಳು.

೨೯. ಕಾಮಾತುರಳಾದ ಆಕೆಯು ಶ್ರೀಹರಿಯ ಪಾದಗಳನ್ನು ಭಕ್ತಿಯಿಂದ ಭಜಿಸುತ್ತಿರುವ ನನ್ನ ಸಮೀಪಕ್ಕೆ ಬಂದು, ಸ್ಮಿತಮುಖಿಯಾಗಿ ಚಂಚಲಕಟಾಕ್ಷವನ್ನು ಬೀರತೊಡಗಿದಳು.

೩೦. ನಾನಾದರೋ ಧ್ಯಾನಾಸಕ್ತನಾಗಿ ಬಾಹ್ಯ ಪ್ರಪಂಚವನ್ನೇ ಮರೆತು, ಅವಳ ಕಡೆಗೆ ನೋಡದಿರಲು, ತನ್ನ ಋತುನಾಶವಾಯಿತೆಂಬ ಕೋಪದಿಂದ ಆಕೆಯು ನನಗೆ ಶಾಪಕೊಟ್ಟಳು

೩೧ 'ನೀನು ನನ್ನನ್ನು ನೋಡಿ ನನ್ನ ಋತುವನ್ನು ರಕ್ಷಣೆಮಾಡದಿದ್ದುದರಿಂದ ನೀನು ನೋಡಿದ ಸಕಲ ವಸ್ತುವೂ ನಾಶವಾಗಲಿ.'

೩೨. ಈ ರೀತಿಯಾದ ಶಾಪವಾಕ್ಯವನ್ನು ಕೇಳಿ, ನಾನು ಧ್ಯಾನದಿಂದ ವಿರತನಾಗಿ, ಪತಿವ್ರತೆಯಾದ ಆಕೆಯನ್ನು ಆಗ ತೃಪ್ತಿಪಡಿಸಿದೆನು. ಆದರೆ ಆಕೆಯು ಶಾಪವಿಮೋಚನೆಮಾಡಲು ಶಕ್ತಳಾಗದೆ ಪಶ್ಚಾತ್ತಾಪಹೊಂದಿದಳು.

ತೇನ ಮಾತರ್ನ ಪಶ್ಯಾಮಿ ಕಿಂಚಿದ್ವಸ್ತು ಸ್ವಚಕ್ಷುಷಾ ।
ತತಃ ಪ್ರಭೃತಿನಮ್ರಾಸ್ಯಃ ಪ್ರಾಣಿಹಿಂಸಾಭಯಾದಹಂ ॥ ೩೩ ॥

ಶನೈಶ್ಚರವಚಃ ಶ್ರುತ್ವಾ ಜಹಾಸ ಪಾರ್ವತೀ ಮುನೇ ।
ಉಚ್ಚೈಃ ಪ್ರಜಹಸುಃ ಸರ್ವಾ ನರ್ತಕೀ ಕಿನ್ನರೀಗಣಾಃ ॥ ೩೪ ॥

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೋ ಗಣೇಶಖಂಡೇ ನಾರದನಾರಾಯಣ ಸಂವಾದೇ ಶನೇರಧೋದೃಷ್ಟಿ ಕಾರಣಕಥನಂ ನಾಮ ಏಕಾದಶೋಽಧ್ಯಾಯಃ**

೩೩. ಆ ಕಾರಣದಿಂದ ನಾನು ನನ್ನ ಕಣ್ಣಿನಿಂದ ಯಾವ ವಸ್ತುವನ್ನೂ ನೋಡುತ್ತಿಲ್ಲ. ಎಲೌ ಮಾತೆಯೇ, ಅಂದು ಮೊದಲುಗೊಂಡು ಪ್ರಾಣಹಿಂಸೆಯಾಗ ಬಾರದೆಂದು ನಮ್ರಮುಖನಾಗಿಯೇ ಇದ್ದೇನೆ.

೩೪. ಎಲೈ ನಾರದನೇ, ಶನೀಶ್ವರನು ನುಡಿದ ಮಾತುಗಳನ್ನು ಕೇಳಿ ಪಾರ್ವತಿಯು ನಕ್ಕುಬಿಟ್ಟಳು. ಅಲ್ಲಿದ್ದ ನರ್ತಕಿಯರು ಮತ್ತು ಕಿನ್ನರಿಯರೂ ಕೂಡ ಗಟ್ಟಿಯಾಗಿ ನಗಲಾರಂಭಿಸಿದರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದಲ್ಲಿ ಶನಿ ಮತ್ತು ಪಾರ್ವತೀದೇವಿಗೆ ಸಂವಾದವಾದಾಗ ಶನಿಯು ತನ್ನ ಅಧೋದೃಷ್ಟಿಗೆ ಕಾರಣವನ್ನು ತಿಳಿಸುವ ಹನ್ನೊಂದನೆಯ ಅಧ್ಯಾಯವು ಮುಗಿದುದು.



## ಹನ್ನೊಂದನೆಯ ಅಧ್ಯಾಯದ ಸಾರಾಂಶ



ಗಣೇಶನಿಗೆ ಆಶೀರ್ವಾದಮಾಡಿದನಂತರ ಎಲ್ಲ ದೇವತೆಗಳೂ ತಮತಮಗೆ ಉಚಿತವಾದ ಆಸನದಲ್ಲಿ ಮಂಡಿಸಿದರು. ಅನಂತರ ನರ್ತಕಿಯರ ನರ್ತನವೂ, ಗಾಯಕರ ಗಾಯನವೂ ಎಲ್ಲರನ್ನೂ ಮೋಹಗೊಳಿಸಿತು. ಅಷ್ಟುಹೊತ್ತಿಗೆ ಸೂರ್ಯ ಪುತ್ರನಾದ ಶನಿಯು ಅಲ್ಲಿಗೆ ಸಮ್ಮುಖನಾಗಿ ಬಂದು, ಕ್ರಮವಾಗಿ ಎಲ್ಲ ದೇವತೆ ಗಳಿಗೂ ವಂದಿಸಿ, ಅವರ ಅನುಜ್ಞೆ ಪಡೆದು, ಗಣಪತಿಯನ್ನು ನೋಡಲು ಹೋದನು. ಅಂತಃಪುರದ ಕಾವಲುಗಾರನಾದ ವಿಶಾಲಾಕ್ಷನು ಪಾರ್ವತಿಯ ಅಪ್ಪಣೆಯಂತೆ ಅವನನ್ನು ಒಳಕ್ಕೆ ಬಿಡಲು, ಅವನು (ಶನಿಯು) ಪಾರ್ವತಿಗೆ ವಂದಿಸಿ, ಶಿಶುವನ್ನು ಕತ್ತೆತ್ತಿಯೂ ನೋಡದೆ ತಲೆಬಾಗಿ ನಿಂತನು. ಪಾರ್ವತಿಯು ಅವನಿಗೆ ಆಶೀರ್ವದಿಸಿ ಆ ರೀತಿಯಾಗಿ ತಲೆ ತಗ್ಗಿಸಿಕೊಂಡು ನಿಲ್ಲಲು ಕಾರಣವೇನೆಂದು ಕೇಳಿದಳು. ಆಗ ಶನಿಯು ಸಕಲ ಪ್ರಾಣಿಯೂ ತನ್ನ ಕರ್ಮಾನುಗುಣವಾದ ಸದಸತ್ಫಲಗಳನ್ನು ಅನುಭವಿಸಿಯೇ ತೀರಬೇಕೆಂದು ಹೇಳಿ, ಕೃಷ್ಣಭಕ್ತನಾದ ತಾನು ಋತುಸ್ನಾತಳಾದ ತನ್ನ ಪತ್ನಿಯನ್ನು ಉದಾಸೀನಮಾಡಿದುದರ ಫಲವಾಗಿ, ತಾನು ನೋಡಿದ ವಸ್ತು ಗಳೆಲ್ಲ ನಾಶವಾಗುವಂತೆ ಆಕೆಯಿಂದ ಶಾಪ ಪಡೆದಿರುವುದಾಗಿ ಹೇಳಿ, ಅದುಕಾರಣ ಪ್ರಾಣಿಹಿಂಸೆಯಾಗಬಾರದೆಂದು ತಲೆ ತಗ್ಗಿಸಿ ನಿಂತಿರುವುದಾಗಿ ಸಂಕೋಚದಿಂದ ಹೇಳಿದನು. ಶನಿಯ ಮಾತುಗಳನ್ನು ಕೇಳಿ ಪಾರ್ವತಿಯೂ, ಅಲ್ಲಿದ್ದ ನರ್ತಕಿ ಮತ್ತು ಗಾಯಕಿಯರೂ ನಗತೊಡಗಿದರು.



-॥ ಓಂ ॥-

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ದ್ವಾದಶೋಽಧ್ಯಾಯಃ ॥

॥ ನಾರಾಯಣ ಉವಾಚ ॥

ದುರ್ಗಾ ತದ್ವಚನಂ ಶ್ರುತ್ವಾ ಸಸ್ಮಾರ ಹರಿಮೀಶ್ವರಂ ।
ಈಶ್ವರೇಚ್ಛಾ ವಶೀಭೂತಂ ಜಗದೇವೇತ್ಯುವಾಚ ಹ ॥ ೧ ॥
ಸಾ ಚ ದೇವೀ ದೈವವಶಾ ಶನಿಂ ಪ್ರೋವಾಚ ಕೌತುಕಾತ್ ।
ಪಶ್ಯ ಮಾಂ ಮಚ್ಛಿಶುಮಿತಿ ನಿಷೇಕಃ ಕೇನ ವಾರ್ಯತೇ ॥ ೨ ॥

ಪಾರ್ವತ್ಯಾ ವಚನಂ ಶ್ರುತ್ವಾ ಶನಿರ್ಮನೇ ಹೃದಾ ಸ್ವಯಂ ।
ಪಶ್ಯಾಮಿ ಕಿಂ ನ ಪಶ್ಯಾಮಿ ಪಾರ್ವತೀಸುತಮಿತ್ಯಹೋ ।
ಯದಿ ಬಾಲೋ ಮಯಾ ದೃಷ್ಟಸ್ತಸ್ಯ ವಿಘ್ನೋ ಭವೇದ್ಧ್ರುವಂ ॥ ೩ ॥

---

### ಹನ್ನೆರಡನೆಯ ಅಧ್ಯಾಯವು

೧. ನಾರಾಯಣ :— ಪಾರ್ವತೀದೇವಿಯು ಶನೈಶ್ವರನ ಮಾತನ್ನು ಕೇಳಿ ಶ್ರೀಹರಿಯನ್ನು ಸ್ಮರಿಸಿಕೊಂಡಳು. ಮತ್ತು ಸಕಲ ಜಗತ್ತೂ ಈಶ್ವರೇಚ್ಛೆಗೆ ಅಧೀನವಾಗಿರುವುದೆಂದು ಹೇಳಿದಳು.

೨. ಅನಂತರ ಆ ದೇವಿಯು ಕುತೂಹಲದಿಂದ ಶನಿಯನ್ನು ಕುರಿತು 'ಎಲೈ ಶನೀಶ್ವರನೇ, ನೀನು ನನ್ನನ್ನೂ ನನ್ನ ಮಗುವನ್ನೂ ನೋಡು' ಎಂದಳು. ವಿಧಿಯನ್ನು ಯಾರಿಂದಲೂ ತಡೆಯಲಾಗುವುದಿಲ್ಲ.

೩. ಪಾರ್ವತಿಯ ಮಾತನ್ನು ಕೇಳಿದ ಶನಿಯು 'ಪಾರ್ವತೀ ಸುತನನ್ನು ನಾನು ನೋಡಲೋ ಬೇಡವೋ, ನಾನು ಆ ಮಗುವನ್ನು ನೋಡಿದ್ದೇ ಆದರೆ ಅದಕ್ಕೆ ಖಂಡಿತವಾಗಿಯೂ ವಿಘ್ನವುಂಟಾಗುವುದು' ಎಂದು ಮನಸ್ಸಿನಲ್ಲಿಯೇ ಚಿಂತಿಸಲಾರಂಭಿಸಿದನು.

ಅನ್ಯಥಾ ಸುಪ್ರಶಸ್ತಂ ಚ ಪುರತಃ ಸ್ಯಾತ್ಮರಕ್ಷಣಂ ।
ಇತ್ಯೇವಮುಕ್ತ್ವಾ ಧರ್ಮಿಷ್ಠೋ ಧರ್ಮಂ ಕೃತ್ವಾ ತು ಸಾಕ್ಷಿಣಂ ।
ಬಾಲಂ ದ್ರಷ್ಟುಂ ಮನಶ್ಚಕ್ರೇ ನ ತು ತನ್ಮಾತರಂ ಶನಿಃ ॥ ೪ ॥

ವಿಷಣ್ಣಮಾನಸಃ ಪೂರ್ವಂ ಶುಷ್ಕಕಂಠೌಷ್ಠತಾಲುಕಃ ।
ಸವ್ಯಲೋಚನಕೋಣೇನ ದದರ್ಶ ಚ ಶಿಶೋರ್ಮುಖಂ ॥ ೫ ॥

ಶನೇಶ್ಚ ದೃಷ್ಟಿಮಾತ್ರೇಣ ಚಿಚ್ಛಿದೇ ಮಸ್ತಕಂ ಮುನೇ ।
ಚಕ್ಷುರ್ನಿಮೀಲಯಾಮಾಸ ತಸ್ಥೌ ನಮ್ರಾನನಃ ಶನಿಃ ॥ ೬ ॥

ತಸ್ಥೌ ಚ ಪಾರ್ವತೀಕ್ರೋಡೇ ತತ್ಸರ್ವಾಂಗಂ ಸಲೋಹಿತಂ ।
ವಿವೇಶ ಮಸ್ತಕಂ ಕೃಷ್ಣೇ ಗತ್ವಾ ಗೋಲೋಕಮೀಪ್ಸಿತಂ ॥ ೭ ॥

೪. 'ಮತ್ತೊಬ್ಬರ ಎದುರಿನಲ್ಲಿ ಕಾರ್ಯಮಾಡುವುದರಿಂದ ಆತ್ಮರಕ್ಷಣೆಯು ಸುಲಭವಹುದು.' ಧರ್ಮಿಷ್ಠನಾದ ಶನಿಯು ಹೀಗೆ ನುಡಿದು, ಧರ್ಮಪುರುಷನನ್ನು ಸಾಕ್ಷಿಯಾಗಿಟ್ಟುಕೊಂಡು, ಆ ಶಿಶುವನ್ನು ನೋಡಲು ಮನಸ್ಸುಮಾಡಿದನು ಪಾರ್ವತಿಯನ್ನು ನೋಡಲಿಷ್ಟಪಡಲಿಲ್ಲ.

೫. ಮೊದಲು ಶನಿಯು ಮನಸ್ಸು ವ್ಯಥೆಗೊಂಡು ಗಂಟಲು ತುಟಿಗಳೆಲ್ಲ ಒಣಗಿ ಹೋಯಿತು. ಅನಂತರ ಎಡಗಣ್ಣಿನ ಕಟಾಕ್ಷದಿಂದ ಆ ಶಿಶುವಿನ ಮುಖವನ್ನು ನೋಡಿದನು.

೬. ಎಲೈ ನಾರದನೇ, ಇಂತು ಆ ಶನಿಯ ದೃಷ್ಟಿಬಿದ್ದಮಾತ್ರದಿಂದಲೇ ಶಿಶುವಿನ ತಲೆಯು ಕತ್ತರಿಸಿಹೋಯಿತು ಕೂಡಲೆ ಶನಿಯು ತಲೆ ತಗ್ಗಿಸಿಕೊಂಡು ಕಣ್ಣುಗಳನ್ನು ಮುಚ್ಚಿ ನಿಂತನು.

೭ ರುಂಡವಿಲ್ಲದ, ರಕ್ತಮಯವಾದ ಮುಂಡವು ಮಾತ್ರ ಪಾರ್ವತಿಯ ತೊಡೆಯಲ್ಲಿ ಉಳಿಯಿತು. ಆ ತಲೆಯಾದರೋ ಗೋಲೋಕಕ್ಕೆ ಹೋಗಿ ತನಗೆ ಅಭಿಮತವಾದ ಶ್ರೀಕೃಷ್ಣನಲ್ಲಿ ಪ್ರವೇಶಿಸಿತು.

ಮೂರ್ಛಾಂ ಸಂಪ್ರಾಪ ಸಾ ದೇವೀ ವಿಲಪ್ಯ ಚ ಭೃಶಂ ಮುಹುಃ ।
ಮತ್ತೇವ ಚ ಪೃಥಿವ್ಯಾಂ ತು ಕೃತ್ವಾ ವಕ್ಷಸಿ ಬಾಲಕಂ ॥ ೮ ॥

ವಿಸ್ಮಿತಾಸ್ತೇ ಸುರಾಃ ಸರ್ವೇ ಚಿತ್ರಪುತ್ತಲಿಕಾ ಯಥಾ ।
ದೇವ್ಯಶ್ಚ ಶೈಲಗಂಧರ್ವಾಃ ಸರ್ವೇ ಕೈಲಾಸವಾಸಿನಃ ॥ ೯ ॥

ತಾನ್ಸರ್ವಾನ್ಮೂರ್ಛಿತಾನ್ದೃಷ್ಟ್ವಾ ವಾರುಹ್ಯ ಗರುಡಂ ಹರಿಃ ।
ಜಗಾಮ ಪುಷ್ಪಭದ್ರಾಂ ಸ ಚೋತ್ತರಸ್ಯಾಂ ದಿಶಿ ಸ್ಥಿತಾಂ ॥ ೧೦ ॥

ಪುಷ್ಪಭದ್ರಾನದೀತೀರೇ ಹ್ಯಪಶ್ಯತ್ಕಾನನೇ ಸ್ಥಿತಂ ।
ಗಜೇಂದ್ರಂ ನಿದ್ರಿತಂ ತತ್ರ ಶಯಾನಂ ಹಸ್ತಿನೀಯುತಂ ॥ ೧೧ ॥

ತಥೋದಕ್ಛಿರಸಂರಮ್ಯಂ ಮೂರ್ಛಿತಂ ಸುರತಶ್ರಮಾತ್ ।
ಪರಿತಃ ಶಾವಕಾನ್ಕೃತ್ವಾ ಪರಮಾನಂದಮಾನಸಂ ॥ ೧೨ ॥

೮. ಪಾರ್ವತೀದೇವಿಯಾದರೋ, ಆ ಮುಂಡವನ್ನು ಎದೆಗೆ ಅಪ್ಪಿಕೊಂಡು, ಬಹಳಹೊತ್ತು ಅತ್ತು, ಮತ್ತಳಂತೆ ಭೂಮಿಯಮೇಲೆ ಮೂರ್ಛಿತಳಾಗಿ ಬಿದ್ದಳು.

೯. ಆಗ ಆ ಕೈಲಾಸಪರ್ವತದಲ್ಲಿದ್ದ ದೇವದೇವಿಯರೂ, ಶೈಲರು ಮತ್ತು ಗಂಧರ್ವರು ಅತ್ಯಾಶ್ಚರ್ಯಭರಿತರಾಗಿ ಚಿತ್ರದ ಬೊಂಬೆಯಂತೆ ಚಲಿಸದೆ (ನೋಡುತ್ತ) ನಿಂತರು.

೧೦. ಈ ರೀತಿ ಎಲ್ಲರೂ ಮೂರ್ಛೆಗೊಂಡದ್ದನ್ನು ನೋಡಿ ಶ್ರೀಹರಿಯು ಗರುಡವಾಹನನಾಗಿ ಉತ್ತರದಿಕ್ಕಿನಲ್ಲಿರುವ ಪುಷ್ಪಭದ್ರಾನದಿಯ ಸಮೀಪಕ್ಕೆ ಬಂದನು.

೧೧. ಪುಷ್ಪಭದ್ರಾನದಿಯ ತೀರದ ಅರಣ್ಯದಲ್ಲಿ ಹೆಣ್ಣಾನೆಯೊಡನೆ ಮಲಗಿ ನಿದ್ರಿಸುತ್ತಿರುವ ಒಂದು ಗಂಡಾನೆಯನ್ನು ಶ್ರೀಹರಿಯು ನೋಡಿದನು.

೧೨. ರತ್ಯಾಯಾಸದಿಂದ ಮೂರ್ಛಿತವಾಗಿ, ಸುತ್ತಲೂ ತನ್ನ ಮರಿಗಳನ್ನು ಮಲಗಿಸಿಕೊಂಡು ಆ ಆನೆಯು ಪರಮಾನಂದದಿಂದ ಉತ್ತರಕ್ಕೆ ತಲೆಹಾಕಿಕೊಂಡು ಮಲಗಿದ್ದಿತು.

ಶೀಘ್ರಂ ಸುದರ್ಶನೇನೈವ ಚಿಚ್ಛಿದೇ ತಚ್ಛಿರೋ ಮುದಾ ।
ಸ್ಥಾಪಯಾಮಾಸ ಗರುಡೇ ರುಧಿರಾಕ್ತಂ ಮನೋಹರಂ ॥ ೧೩ ॥

ಗಜಚ್ಛಿನ್ನಾಂಗವಿಶ್ಲೇಷಾತ್ಪ್ರಬೋಧಂ ಪ್ರಾಪ್ಯ ಹಸ್ತಿನೀ ।
ಶಾವಕಾನ್ಬೋಧಯಾಮಾಸ ಚಾಶುಭಂ ವದತೀ ತದಾ ।
ರುರೋದ ಶಾವಕೈಃ ಸಾರ್ಧಂ ಸಾ ವಿಲಪ್ಯ ಶುಚಾತುರಾ ॥ ೧೪ ॥

ತುಷ್ಟಾವ ಕಮಲಾಕಾಂತಂ ಶಾಂತಂ ಸಸ್ಮಿತಮೀಶ್ವರಂ ।
ಶಂಖಚಕ್ರಗದಾಪದ್ಮಧರಂ ಪೀತಾಂಬರಂ ಪರಂ ।
ಗರುಡಸ್ಥಂ ಜಗತ್ಕಾಂತಂ ಭ್ರಾಮಯಂತಂ ಸುದರ್ಶನಂ ॥ ೧೫ ॥

ನಿಷೇಕಂ ಖಂಡಿತುಂ ಶಕ್ತಂ ನಿಷೇಕಜನಕಂ ವಿಭುಂ ।
ನಿಷೇಕಭೋಗದಾತಾರಂ ಭೋಗನಿಸ್ತಾರ ಕಾರಣಂ ॥ ೧೬ ॥

೧೩. ಆ ಆನೆಯ ತಲೆಯನ್ನು ಜಾಗ್ರತೆಯಾಗಿ ಸುದರ್ಶನಚಕ್ರದಿಂದ ಕತ್ತರಿಸಿದನು. ರಕ್ತ ಸೋರುತ್ತಿರುವ ಆ ಮನೋಹರವಾದ ತಲೆಯನ್ನು ಗರುಡನ ಮೇಲಿಟ್ಟುಕೊಂಡು ಬಂದನು

೧೪. ಇತ್ತ ತನ್ನ ಪ್ರಿಯನ ಕತ್ತರಿಸಿಹೋದ ಅವಯವಗಳ ಸಂಸ್ಪರ್ಶದಿಂದ ಎಚ್ಚೆತ್ತ ಹೆಣ್ಣಾನೆಯು ದೀನಧ್ವನಿಯಿಂದ ತನ್ನ ಮರಿಗಳನ್ನೆಲ್ಲ ಎಬ್ಬಿಸಿ, ದುಃಖದಿಂದ ಬಹಳಹೊತ್ತು ಮರಿಗಳೊಡನೆ ಗೋಳಾಡಿತು.

೧೫. ಮರಿಗಳೊಡಗೂಡಿದ ಆ ಹೆಣ್ಣಾನೆಯು ಕಮಲಾಕಾಂತನೂ, ಸ್ಮಿತಮುಖನೂ, ಶಂಖಚಕ್ರಗದಾಪದ್ಮಧಾರಿಯೂ, ಪೀತಾಂಬರನೂ ಆಗಿ ಗರುಡನಮೇಲೆ ಕುಳಿತು, ಸುದರ್ಶನಚಕ್ರವನ್ನು ತಿರುಗಿಸುತಿದ್ದ ಜಗದೊಡೆಯನನ್ನು ಸ್ತುತಿಸಲಾರಂಭಿಸಿತು.

೧೬. ಜನ್ಮಾಂತರ ಕರ್ಮವನ್ನು ಖಂಡಿಸಲು ಶಕ್ತನೂ, ಕರ್ಮೋತ್ಪತ್ತಿಗೆ ಕಾರಣನೂ, ಕರ್ಮಫಲದಾಯಕನೂ, ಭೋಗ ಮೋಕ್ಷಗಳನ್ನು ಕೊಡುವವನೂ ಆದ ಪರಮಾತ್ಮನನ್ನು ಸ್ತುತಿಸಿತು.

ಪ್ರಭುಸ್ತತ್ಸ್ತವನಾತ್ತುಷ್ಟಸ್ತಸ್ಯೈ ವಿಪ್ರ ವರಂ ದದೌ ।
ಮುಂಡಾತ್ತುಂಡಂ ಪೃಥಕ್ಕೃತ್ಯ ಯುಯುಜೇಽನ್ಯಗಜಸ್ಯ ಚ || ೧೭ ||

ಜೀವಯಾಮಾಸ ತಂ ತತ್ರ ಬ್ರಹ್ಮಜ್ಞಾನೇನ ಸರ್ವವಿತ್ ।
ಸರ್ವಾಂಗೇ ಯೋಜಯಾಮಾಸ ಗಜಸ್ಯ ಚರಣಾಂಬುಜಂ || ೧೮ ||

ತ್ವಂ ಜೀವಾಕಲ್ಪಪರ್ಯಂತಂ ಪರಿವಾರೈಃ ಸಮಂ ಗಜ ।
ಇತ್ಯುಕ್ತ್ವಾ ಚ ಮನೋಯಾಯೀ ಕೈಲಾಸಂ ಹ್ಯಾಜಗಾಮ ಸಃ || ೧೯ ||

ಆಹೃತ್ಯ ಪಾರ್ವತೀಹಸ್ತಾದ್ಬಾಲಂ ಕೃತ್ವಾ ಸ್ವವಕ್ಷಸಿ ।
ರುಚಿರಂ ತಚ್ಛಿರಃ ಸಮ್ಯಗ್ಯೋಜಯಾಮಾಸ ಬಾಲಕೇ || ೨೦ ||

ಬ್ರಹ್ಮಸ್ವರೂಪೋ ಭಗವಾನ್ಬ್ರಹ್ಮಜ್ಞಾನೇನ ಲೀಲಯಾ ।
ಜೀವಯಾಮಾಸ ತಂ ಶೀಘ್ರಂ ಹುಙ್ಕಾರೋಚ್ಚಾರಣೇನ ಚ || ೨೧ ||

೧೭. ಪರಮಾತ್ಮನು ಆ ಹೆಣ್ಣಾನೆಯು ಸ್ತುತಿಯನ್ನು ಕೇಳಿ, ಅದಕ್ಕೆ ಅಭೀಷ್ಟವಾದ ವರವನ್ನು ಕೊಟ್ಟದ್ದಲ್ಲದೆ, ಬೇರೊಂದು ಆನೆಯ ಕತ್ತನ್ನು ಕತ್ತರಿಸಿ ಅದಕ್ಕೆ ಜೋಡಿಸಿದನು.

೧೮. ಸರ್ವಜ್ಞನಾದ ಪರಮಾತ್ಮನು ತನ್ನ ದಿವ್ಯಶಕ್ತಿಯಿಂದ ಆ ಆನೆಯನ್ನು ಪುನರುಜ್ಜೀವನಗೊಳಿಸಿ, ಅದರ ಕಾಲುಗಳನ್ನೂ ಇತರ ಅವಯವಗಳನ್ನೂ ಸರಿಪಡಿಸಿದನು.

೧೯. "ಎಲೈ ಗಜೇಂದ್ರನೇ, ನೀನು ಪ್ರಳಯದವರೆಗೂ ನಿನ್ನ ಪರಿವಾರದೊಡನೆ ಸುಖವಾಗಿ ಬಾಳು" ಹೀಗೆ ಹೇಳಿ ಮನೋವೇಗದಲ್ಲಿ ಆ ಪರಮಾತ್ಮನು ಕೈಲಾಸ ಪರ್ವತಕ್ಕೆ ಬಂದನು.

೨೦. ಅಲ್ಲಿ ಪಾರ್ವತಿಯ ಕೌಂಕುಳಿಂದ ಮಗುವನ್ನು ತಾನು ಎತ್ತಿಕೊಂಡು ಸುಂದರವಾದ ಆನೆಯ ಶಿರಸ್ಸನ್ನು ಆ ಶಿಶುವಿನ ಮುಂಡಕ್ಕೆ ಸೇರಿಸಿದನು.

೨೧. ಪರಬ್ರಹ್ಮಸ್ವರೂಪನಾದ ಆ ಭಗವಂತನು ಹುಂ ಎಂದು ಉಚ್ಚರಿಸಿ, ಬ್ರಹ್ಮಜ್ಞಾನದ ಮಹಿಮೆಯಿಂದ ಗಣೇಶನನ್ನು ಜಾಗ್ರತೆಯಾಗಿ ಪುನರುಜ್ಜೀವನಗೊಳಿಸಿದನು.

ಪಾರ್ವತೀಂ ಬೋಧಯಿತ್ವಾ ತು ಕೃತ್ವಾ ಕ್ರೋಡೇ ಚ ತಂ ಶಿಶುಂ |
ಬೋಧಯಾಮಾಸ ತಾಂ ಕೃಷ್ಣ ಆಧ್ಯಾತ್ಮಿಕವಿಬೋಧನೈಃ || ೨೨ ||

|| ವಿಷ್ಣುರುವಾಚ ||

ಬ್ರಹ್ಮಾದಿಕೀಟಪರ್ಯಂತಂ ಫಲಂ ಭುಂಕ್ತೇ ಸ್ವಕರ್ಮಣಃ |
ಜಗದ್ಬುದ್ಧಿಸ್ವರೂಪಾಸಿ ತ್ವಂ ನ ಜಾನಾಸಿ ಕಿಂ ಶಿವೇ || ೨೩ ||

ಕಲ್ಪಕೋಟಿಶತಂ ಭೋಗೋ ಜೀವಿನಾಂ ತತ್ಸ್ವಕರ್ಮಣಾ |
ಉಪಸ್ಥಿತೋ ಭವೇನ್ನಿತ್ಯಂ ಪ್ರತಿಯೋನೌ ಶುಭಾಶುಭೈಃ || ೨೪ ||

ಇಂದ್ರಃ ಸ್ವಕರ್ಮಣಾ ಕೀಟಯೋನೌ ಜನ್ಮ ಲಭೇತ್ಸತಿ |
ಕೀಟಶ್ಚಾಪಿ ಭವೇದಿಂದ್ರಃ ಪೂರ್ವಕರ್ಮಫಲೇನ ವೈ || ೨೫ ||

---

೨೨. ಅನಂತರ ಪಾರ್ವತಿಯನ್ನು ಸಮಾಧಾನಗೊಳಿಸಿ, ಶಿಶುವನ್ನು ಆಕೆಯ ಕೈಗೆ ಕೊಟ್ಟು, ಆಧ್ಯಾತ್ಮಿಕ ತತ್ವಗಳನ್ನು ಆಕೆಗೆ ಉಪದೇಶಿಸಿದನು.

೨೩. ವಿಷ್ಣು:—ಚತುರ್ಮುಖ ಬ್ರಹ್ಮನು ಮೊದಲುಗೊಂಡು ಸೂಕ್ಷ್ಮಕ್ರಿಮಿಯವರೆಗಿನ ಸಕಲ ಪ್ರಾಣಿಯೂ ತನ್ನ ಕರ್ಮಫಲವನ್ನು ಅನುಭವಿಸಿಯೇ ತೀರುವುದು. ಜಗತ್ತಿಗೆಲ್ಲ ಬುದ್ಧಿರೂಪಿಣಿಯಾದ ನೀನು ಇದನ್ನು ಅರಿಯೆಯಾ?

೨೪. ಜೀವಿಗಳಿಗೆ ಅವರವರ ಶುಭಾಶುಭಕರ್ಮಗಳಿಗನುಗುಣವಾಗಿ ಅದರ ಫಲಭೋಗವೂ ಕೋಟಿಕಲ್ಪಗಳಾದರೂ ಪ್ರತಿಜನ್ಮದಲ್ಲೂ ನಿಶ್ಚಿತವಾಗಿಯೂ ಉಪಸ್ಥಿತವಾಗುವುದು.

೨೫. ಎಲೌ ಸತೀದೇವಿಯೇ, ದೇವೇಂದ್ರನು ಕೂಡ ಕರ್ಮಾನುಗುಣವಾಗಿ ಕ್ರಿಮಿಯ ಜನ್ಮವೆತ್ತಿದರೂ ಎತ್ತಬಹುದು. ಅಂತೆಯೇ ಪೂರ್ವಕರ್ಮದ ಬಲದಿಂದ ಕ್ರಿಮಿಯು ದೇವೇಂದ್ರನಾದರೂ ಆಗಬಹುದು.

ಸಿಂಹೋಽಪಿ ಮಕ್ಷಿಕಾಂ ಹಂತುಮಕ್ಷಮಃ ಪ್ರಾಕ್ತನಂ ವಿನಾ ।
ಮಶಕೋ ಹಸ್ತಿನಂ ಹಂತುಂ ಕ್ಷಮಃ ಸ್ವಪ್ರಾಕ್ತನೇನ ಚ ॥ ೨೬ ॥

ಸುಖಂ ದುಃಖಂ ಭಯಂ ಶೋಕಮಾನಂದಂ ಕರ್ಮಣಃ ಫಲಂ ।
ಸುಕರ್ಮಣಃ ಸುಖಂ ಹರ್ಷಮಿತರೇ ಪಾಪಕರ್ಮಣಃ ॥ ೨೭ ॥

ಇಹೈವ ಕರ್ಮಣೋ ಭೋಗಃ ಪರತ್ರ ಚ ಶುಭಾಶುಭೈಃ ।
ಕರ್ಮೋಪಾರ್ಜನಯೋಗ್ಯಂ ಚ ಪುಣ್ಯಕ್ಷೇತ್ರಂ ಚ ಭಾರತಂ ॥ ೨೮ ॥

ಕರ್ಮಣಃ ಫಲದಾತಾ ಚ ವಿಧಾತಾ ಚ ವಿಧೇರಪಿ ।
ಮೃತ್ಯೋರ್ಮೃತ್ಯುಃ ಕಾಲಕಾಲೋ ನಿಷೇಕಸ್ಯ ನಿಷೇಕಕೃತ್ ॥ ೨೯ ॥

ಸಂಹರ್ತುರಪಿ ಸಂಹರ್ತಾ ಪಾತುಃ ಪಾತಾ ಪರಾತ್ಪರಃ ।
ಗೋಲೋಕನಾಥಃ ಶ್ರೀಕೃಷ್ಣಃ ಪರಿಪೂರ್ಣತಮಃ ಸ್ವಯಂ ॥ ೩೦ ॥

---

೨೬. ಜನ್ಮಾಂತರ ಸಂಸ್ಕಾರವಿಲ್ಲದಿದ್ದರೆ ಮೃಗರಾಜನಾದ ಸಿಂಹವು, ಒಂದು ನೊಣವನ್ನೂ ಸಂಹರಿಸಲಾರದು. ಅಂತೆಯೇ ಜನ್ಮಾಂತರದ ಬಲವಿರುವ ಒಂದು ಸೊಳ್ಳೆಯಾದರೂ ಆನೆಯನ್ನು ಸಂಹರಿಸಲು ಶಕ್ತವಾಗುವುದು

೨೭. ಸುಖದುಃಖಗಳೂ, ಭಯಶೋಕಗಳೂ, ಆನಂದವೂ ಕರ್ಮಾನುಗುಣವಾಗಿ ಲಭಿಸುವುದು. ಅದರಲ್ಲಿ ಸುಖಸಂತೋಷಗಳು ಸತ್ಕರ್ಮದಫಲಗಳು, ಉಳಿದವು ಪಾಪಕರ್ಮದ ಫಲಗಳು.

೨೮. ಶುಭಾಶುಭಕರ್ಮಗಳ ಫಲವು ಇಹಪರಗಳೆರಡರಲ್ಲಿಯೂ ದೊರೆಯುವುದು. ಪುಣ್ಯಕ್ಷೇತ್ರವಾದ ಭಾರತವು ಕರ್ಮಮಾಡಲು ಅರ್ಹವಾದ ಕ್ಷೇತ್ರವು.

೨೯-೩೦. ಕರ್ಮಫಲದಾತೃವೂ, ವಿಧಿಯ ವಿಧಾತನೂ, ಮೃತ್ಯುವಿನ ಮೃತ್ಯುವೂ, ಕಾಲಕಾಲನೂ, ಕಾರಣಕ್ಕೆ ಕಾರಣನೂ, ಸಂಹರ್ತೃವಿನ ಸಂಹಾರಕನೂ, ರಕ್ಷಕನ ರಕ್ಷಕನೂ, ಪರಾತ್ಪರನೂ ಆದ ಶ್ರೀಕೃಷ್ಣಪರಮಾತ್ಮನು ಗೋಲೋಕನಾಥನೂ, ಪರಿಪೂರ್ಣತಮನೂ ಆಗಿದ್ದಾನೆ.

ಷಯಂ ಯಸ್ಯ ಕಲಾಃ ಪುಂಸೋ ಬ್ರಹ್ಮವಿಷ್ಣುಮಹೇಶ್ವರಾಃ ।
ಮಹಾವಿರಾಡ್ಯದಂಶಶ್ಚ ಯಲ್ಲೋಮ ವಿವರೇ ಜಗತ್ ॥ ೩೧ ॥

ಕಲಾಂಶಾಃ ಕೇಽಪಿ ತದ್ಧರ್ಮೇ ಕಲಾಂಶಾಂಶಾಶ್ಚ ಕೇಚನ ।
ಚರಾಚರಂ ಜಗತ್ಸರ್ವಂ ತತ್ರ ತಸ್ಥೌ ವಿನಾಯಕಃ ॥ ೩೨ ॥

ಶ್ರೀ ವಿಷ್ಣೋರ್ವಚನಂ ಶ್ರುತ್ವಾ ಪರಿತುಷ್ಟಾ ಚ ಪಾರ್ವತೀ ।
ಸ್ತನಂ ದದೌ ಚ ಶಿಶವೇ ತಂ ಪ್ರಣಮ್ಯ ಗದಾಧರಂ ॥ ೩೩ ॥

ತುಷ್ಟಾವ ಪಾರ್ವತೀ ತುಷ್ಟಾ ಪ್ರೇರಿತಾ ಶಂಕರೇಣ ಚ ।
ಕೃತಾಂಜಲಿಪುಟಾ ಭಕ್ತ್ಯಾ ವಿಷ್ಣುಂ ತಂ ಕಮಲಾಪತಿಂ ॥ ೩೪ ॥

ಆಶಿಷಂ ಯುಯುಜೇ ವಿಷ್ಣುಃ ಶಿಶುಂ ಚ ಶಿಶುಮಾತರಂ ।
ದದೌ ಗಲೇ ಬಾಲಕಸ್ಯ ಕೌಸ್ತುಭಂ ಚ ಸ್ವಭೂಷಣಂ ॥ ೩೫ ॥

---

೩೧. ಬ್ರಹ್ಮ ವಿಷ್ಣು ಮಹೇಶ್ವರರೆಲ್ಲರೂ ಆ ಪರಮಪುರುಷನ ಕಲೆಯಿಂದವತರಿಸಿರುವರು. ಯಾರ ರೋಮಕೂಪಗಳಲ್ಲಿ ನಿಖಿಲ ಜಗತ್ತೂ ಅಡಗಿರುವುದೋ ಆ ಮಹಾವಿರಾಟ್ಪುರುಷನೂ ಕೂಡ ಆ ಪರಮಾತ್ಮನ ಷೋಡಶಾಂಶದಿಂದ ಅವತರಿಸಿರುವನು.

೩೨. ಉಳಿದ ಧರ್ಮಾದಿದೇವತೆಗಳಲ್ಲಿ ಕೆಲವರು ಆ ಪರಮಾತ್ಮನ ಕಲಾಂಶದಿಂದಲೂ, ಮತ್ತೆ ಕೆಲವರು ಕಲೆಯ ಅಂಶಾಂಶದಿಂದಲೂ ಜನಿಸಿರುವರು. ಚರಾಚರ ಜಗತ್ತಿಗೆಲ್ಲವೂ ವಿನಾಯಕನು ನಾಯಕನಾಗುವನು.

೩೩. ವಿಷ್ಣುವಿನ ಉಪದೇಶವನ್ನು ಕೇಳಿ ಸಂತುಷ್ಟಳಾದ ಪಾರ್ವತಿಯು ಗದಾಧಾರಿಯಾದ ಆತನಿಗೆ ವಂದಿಸಿ ಶಿಶುವಿಗೆ ಸ್ತನ್ಯಪಾನ ಮಾಡಿಸಿದಳು.

೩೪. ಸಂತುಷ್ಟಳಾದ ಪಾರ್ವತಿಯು ಶಂಕರನಿಂದ ಪ್ರೇರಿತಳಾಗಿ, ಭಕ್ತಿಯಿಂದ ಕೈಗಳನ್ನು ಜೋಡಿಸಿಕೊಂಡು, ಲಕ್ಷ್ಮೀಪತಿಯಾದ ಆ ವಿಷ್ಣುವನ್ನು ಸ್ತುತಿಸಿದಳು.

೩೫. ಆಗ ವಿಷ್ಣುವು ಶಿಶುವಿಗೂ, ಅವರ ಮಾತೆಯಾದ ಪಾರ್ವತಿಗೂ, ಆಶೀರ್ವಾದಮಾಡಿ ಆ ಬಾಲಕನ ಕಂಠದಲ್ಲಿ ತನ್ನ ಭೂಷಣವಾದ ಕೌಸ್ತುಭಮಣಿಯನ್ನು ಕಟ್ಟಿದನು.

ಬ್ರಹ್ಮಾ ದದೌ ಸ್ವಮುಕುಟಂ ಧರ್ಮೋ ವೈ ರತ್ನಭೂಷಣಂ ।
ಕ್ರಮೇಣ ದೇವ್ಯೋ ರತ್ನಾನಿ ದದುಃ ಸರ್ವೇ ಯಥೋಚಿತಂ ॥ ೩೬ ॥

ತುಷ್ಟಾವ ತಂ ಮಹಾದೇವಶ್ಚಾತ್ಯಂತಂ ಹೃಷ್ಟಮಾನಸಃ ।
ದೇವಾಶ್ಚ ಮುನಯಃ ಶೈಲಾ ಗಂಧರ್ವಾಃ ಸರ್ವಯೋಷಿತಃ ॥ ೩೭ ॥

ದೃಷ್ಟ್ವಾ ಶಿವಃ ಶಿವಾ ಚೈವ ಬಾಲಕಂ ಮೃತಜೀವಿತಂ ।
ಬ್ರಾಹ್ಮಣೇಭ್ಯೋ ದದೌ ತತ್ರ ಕೋಟಿರತ್ನಾನಿ ನಾರದ ॥ ೩೮ ॥

ಅಶ್ವಾನಾಂ ಚ ಗಜಾನಾಂ ಚ ಸಹಸ್ರಾಣಿ ಶತಾನಿ ಚ ।
ಬಂದಿಭ್ಯಃ ಪ್ರದದೌ ತತ್ರ ಬಾಲಕೇ ಮೃತಜೀವಿತೇ ॥ ೩೯ ॥

ಹಿಮಾಲಯಶ್ಚ ಸಂಹೃಷ್ಟೋ ಹೃಷ್ಟಾ ದೇವಾಶ್ಚ ತತ್ರ ವೈ ।
ದದುರ್ದಾನಾನಿ ವಿಪ್ರೇಭ್ಯೋ ಬಂದಿಭ್ಯಃ ಸರ್ವಯೋಷಿತಃ ॥ ೪೦ ॥

---

೩೬. ಬ್ರಹ್ಮನು ತನ್ನ ಕಿರೀಟವನ್ನೂ, ಧರ್ಮಪುರುಷನು ರತ್ನಾಭರಣವನ್ನೂ, ಸಕಲ ದೇವಿಯರೂ ಯಥೋಚಿತವಾಗಿ ರತ್ನಭೂಷಣಗಳನ್ನೂ ಆ ಶಿಶುವಿಗೆ ಆಶೀರ್ವದಿಸಿ ಕೊಟ್ಟರು

೩೭. ಆಗ ಸಂತುಷ್ಟಾಂತರಂಗನಾದ ಮಹಾದೇವನೂ, ದೇವತೆಗಳೂ, ಮುನಿಗಳೂ, ಶೈಲಗಂಧರ್ವಾದಿಗಳೂ, ಸಕಲ ದೇವಿಯರೂ ಆ ಪರಮಾತ್ಮನನ್ನು ಸ್ತುತಿಸಿದರು.

೩೮. ಎಲೈ ನಾರದನೇ. ಇಂತು ಸತ್ತು ಬದುಕಿದ ತಮ್ಮ ಶಿಶುವನ್ನು ನೋಡಿ ಶಿವಪಾರ್ವತಿಯರು ಬ್ರಾಹ್ಮಣರಿಗೆ ಅಸಂಖ್ಯ ರತ್ನಗಳನ್ನು ದಾನಮಾಡಿದರು.

೩೯. ಆ ಬಾಲಕನು ಪುನರ್ಜೀವಿತನಾದಾಗ ಸಾವಿರ ಕುದುರೆಗಳನ್ನೂ, ನೂರು ಆನೆಗಳನ್ನೂ ವಂದಿಮಾಗಧರಿಗೆ ಸಂತೋಷದಿಂದ ದಾನವಾಗಿ ಕೊಟ್ಟರು.

೪೦. ಇತ್ತ ಹಿಮವಂತನೂ, ಸಕಲ ದೇವತೆಗಳೂ ಮತ್ತು ದೇವತಾಸ್ತ್ರೀಯರೂ ಕೂಡ ಸಂತೋಷಗೊಂಡು, ಬ್ರಾಹ್ಮಣರಿಗೂ, ವಂದಿಮಾಗಧರಿಗೂ ವಿವಿಧ ದ್ರವ್ಯಗಳನ್ನೂ ದಾನಮಾಡಿದರು.

ಬ್ರಾಹ್ಮಣಾನ್ಭೋಜಯಾಮಾಸ ಕಾರಯಾಮಾಸ ಮಂಗಲಂ ।
ವೇದಾಂಶ್ಚ ಪಾಠಯಾಮಾಸ ಪುರಾಣಾನಿ ರಮಾಪತಿಃ ॥ ೪೧ ॥

ಶನಿಂ ಸಂಲಜ್ಜಿತಂ ದೃಷ್ಟ್ವಾ ಪಾರ್ವತೀ ಕೋಪಶಾಲಿನೀ ।
ಶಶಾಪ ಚ ಸಭಾಮಧ್ಯೇಽಪ್ಯಂಗಹೀನೋ ಭವೇತಿ ಚ ॥ ೪೨ ॥

ದೃಷ್ಟ್ವಾ ಶಪ್ತಂ ಶನಿಂ ಸೂರ್ಯಃ ಕಶ್ಯಪಶ್ಚ ಯಮಸ್ತಥಾ ।
ತೇಽತಿರುಷ್ಟಾಃ ಸಮುತ್ತಸ್ಥುರ್ಗಾಮುಕಾಃ ಶಂಕರಾಲಯಾತ್ ॥ ೪೩ ॥

ರಕ್ತಾಕ್ಷಾಸ್ತೇ ರಕ್ತಮುಖಾಃ ಕೋಪಪ್ರಸ್ಫುರಿತಾಧರಾಃ ।
ತಾಂ ಧರ್ಮಂ ಸಾಕ್ಷಿಣಂ ಕೃತ್ವಾ ವಿಷ್ಣುಂ ಸಂಶಪ್ತುಮುದ್ಯತಾಃ ॥ ೪೪ ॥

ಬ್ರಹ್ಮಾ ತಾನ್ಬೋಧಯಾಮಾಸ ವಿಷ್ಣುನಾ ಪ್ರೇರಿತಃ ಸುರೈಃ ।
ರಕ್ತಾಸ್ಯಾಂ ಪಾರ್ವತೀಂ ಚೈವ ಕೋಪಪ್ರಸ್ಫುರಿತಾಧರಾಂ ॥ ೪೫ ॥

---

೪೧, ರಮಾಕಾಂತನಾದ ಶ್ರೀಮನ್ನಾರಾಯಣನೂ ಕೂಡ ಬ್ರಾಹ್ಮಣ ಸಂತರ್ಪಣೆ ಮಾಡಿಸಿ, ವೇದ ಪುರಾಣಗಳ ಪಠನಮಾಡಿಸಿ, ಮಂಗಳಕಾರ್ಯಗಳನ್ನು ನೆರವೇರಿಸಿದನು

೪೨ ಲಜ್ಜೆಯಿಂದ ಅವನತಮುಖನಾದ ಶನಿಯನ್ನು ನೋಡಿ ಕುಪಿತಳಾದ ಪಾರ್ವತಿಯು ಸಭಿಕರೆಲ್ಲರ ಎದುರಿನಲ್ಲಿ 'ನೀನು ಅಂಗಹೀನನಾಗು' ಎಂದು ಶಪಿಸಿದಳು

೪೩. ಶನಿಯು ಶಾಪಗ್ರಸ್ತನಾದುದನ್ನು ಕೇಳಿ ಸೂರ್ಯ, ಕಶ್ಯಪ, ಯಮ ಮುಂತಾದವರೆಲ್ಲರೂ ಕುಪಿತರಾಗಿ, ಶಂಕರನ ಮಂದಿರದಿಂದ ಹೊರಗೆ ಹೊರಡಲು ಸಿದ್ಧರಾದರು.

೪೪. ಕೋಪದಿಂದ ಕೆಂಪೇರಿದ ಮುಖ ಮತ್ತು ಕಣ್ಣುಗಳುಳ್ಳವರಾಗಿ ಕೆಳ ತುಟಿಯು ನಡುಗುತ್ತಿರಲು, ಧರ್ಮಪುರುಷನ ಎದುರಿನಲ್ಲಿಯೇ ಪಾರ್ವತಿಯನ್ನೂ ವಿಷ್ಣುವನ್ನೂ ಶಪಿಸಲುದ್ಯುಕ್ತರಾದರು.

೪೫. ಆಗ ವಿಷ್ಣುವಿನಿಂದಲೂ, ದೇವತೆಗಳಿಂದಲೂ ಪ್ರೇರಿತನಾದ ಬ್ರಹ್ಮನು ಸೂರ್ಯ, ಕಶ್ಯಪಾದಿಗಳನ್ನೂ, ಕೋಪದಿಂದ ಕೆಂಪೇರಿದ ಮುಖವುಳ್ಳ ಪಾರ್ವತಿಯನ್ನೂ ಸಮಾಧಾನಗೊಳಿಸಿದನು.

ಬ್ರಹ್ಮಾಣಮೂಚುಸ್ತೇ ತತ್ರ ಕ್ರಮೇಣ ಸಮಯೋಚಿತಂ ।
ಭೀರವೋ ದೇವತಾಃ ಸರ್ವೇ ಮುನಯಃ ಪರ್ವತಾಸ್ತಥಾ ॥ ೪೬ ॥

॥ ಕಶ್ಯಪ ಉವಾಚ ॥

ಮದ್ಗ್ರಹೋsಯಂ ಪ್ರಾಕ್ತನೇನ ಪತ್ನೀಶಾಪೇನ ಸರ್ವದಾ ।
ಬಾಲಂ ದದರ್ಶ ಯತ್ನೇನ ತಸ್ಯ ವೈ ಮಾತುರಾಜ್ಞಯಾ ॥ ೪೭ ॥

॥ ಶ್ರೀ ಸೂರ್ಯ ಉವಾಚ ॥

ತಂ ಧರ್ಮಂ ಸಾಕ್ಷಿಣಂ ಕೃತ್ವಾ ಸೂನೋರ್ವೈ ಮಾತುರಾಜ್ಞಯಾ ।
ಮತ್ಪುತ್ರೋsತಿಪ್ರಯತ್ನೇನ ಹ್ಯಪಶ್ಯತ್ಪಾರ್ವತೀ ಸುತಂ ॥ ೪೮ ॥

ಯಥಾ ನಿರಪರಾಧೇನ ಮತ್ಪುತ್ರಂ ಸಾ ಶಶಾಪ ಹ ।
ತತ್ಪುತ್ರಸ್ಯಾಂಗಭಂಗಶ್ಚ ಭವಿಷ್ಯತಿ ನ ಸಂಶಯಃ ॥ ೪೯ ॥

---

೪೬. ಆಗ ಭಯಗ್ರಸ್ತರಾದ ದೇವತೆಗಳು, ಮುನಿಗಳು ಮತ್ತು ಪರ್ವತಾದಿಗಳು ಬ್ರಹ್ಮನನ್ನು ಕುರಿತು ಕ್ರಮವಾಗಿ ಸಮಯೋಚಿತವಾದ ನುಡಿಗಳನ್ನಾಡಿದರು.

೪೭. ಕಶ್ಯಪ:—ಈ ಶನಿರಾಯನು ಜನ್ಮಾಂತರದ ಕರ್ಮಾನುಗುಣವಾಗಿ ತನ್ನ ಪತ್ನಿಯ ಶಾಪಕ್ಕೊಳಗಾಗಿ, ಯಾರನ್ನೂ ನೋಡಲು ಅನರ್ಹನಾದನು. ಆದರೆ ಈಗ ಪಾರ್ವತಿಯ ಅಪ್ಪಣೆಯಂತ ಈ ಶಿಶುವನ್ನು ನೋಡಿದನು.

೪೮. ಸೂರ್ಯ:—ನನ್ನ ಮಗನಾದ ಶನಿಯು ಧರ್ಮವನ್ನು ಸಾಕ್ಷಿಯಾಗಿ ಮಾಡಿಕೊಂಡು, ಪಾರ್ವತಿಯ ಅನುಜ್ಞೆ ಪಡೆದು ಬಹಳ ಕಷ್ಟದಿಂದ ಗಣೇಶನ ಮುಖವನ್ನು ನೋಡಿದನು.

೪೯. ಆದರೂ ನಿರಪರಾಧಿಯಾದ ನನ್ನ ಮಗನನ್ನು ಪಾರ್ವತಿಯು ಶಪಿಸಿದುದರಿಂದ ಅವಳ ಮಗನಿಗೂ ಅಂಗವಿಕಾರವಾಗುವುದರಲ್ಲಿ ಸಂಶಯವಿಲ್ಲ

|| ಯಮ ಉವಾಚ ||

ಪ್ರದಾಯ ಸ್ವಯಮಾಜ್ಞಾಂ ಚ ಶಶಾಪೇಯಂ ಸ್ವಯಂ ಕಥಂ |
ವಯಂ ಶಪಾಮ ಕೋಽತ್ರಧರ್ಮೋ ಜಿಘಾಂಸೋಶ್ಚ ವಿಹಿಂಸನೇ || ೩೦ ||

|| ಬ್ರಹ್ಮೋವಾಚ ||

ಶಶಾಪ ಪಾರ್ವತೀ ರುಷ್ಟಾ ಸ್ತ್ರೀ ಸ್ವಭಾವಾಚ್ಚ ಚಾಪಲಾತ್ |
ಸರ್ವೇಷಾಂ ವಚನೇನೈವಕ್ಷಂತುಮರ್ಹಂತು ಸಾಧವಃ || ೩೧ ||

ದುರ್ಗೇ ದತ್ವಾ ತ್ವಮಾಜ್ಞಾಂ ಚ ಪುತ್ರದರ್ಶನಹೇತವೇ |
ಕಥಂ ಶಪಸಿ ನಿರ್ದೋಷಮತಿಥಿಂ ತ್ವದ್ಗೃಹಾಗತಂ || ೩೨ ||

ಇತ್ಯುಕ್ತ್ವಾ ಶನಿಮಾದಾಯ ಬೋಧಯಿತ್ವಾ ಚ ಪಾರ್ವತೀಂ |
ತಾಂ ತಂ ಸಮರ್ಪಣಂ ಚಕ್ರೇ ಶಾಪಮೋಚನಹೇತವೇ || ೩೩ ||

---

೩೦. ಯಮ:-ಪಾರ್ವತಿಯು ತಾನಾಗಿಯೇ ಪುತ್ರಮುಖಾವಲೋಕನಕ್ಕೆ ಶನಿಗೆ ಅವಕಾಶಕೊಟ್ಟು ಹೀಗೆ ಶಪಿಸುವುದೆಂದರೇನು? ಹಿಂಸಕರನ್ನು ಹಿಂಸೆಗೊಳಿಸುವುದರಿಂದ ಯಾವ ಅಧರ್ಮವೂ ಇಲ್ಲದುದರಿಂದ ನಾವೂ ಶಪಿಸೋಣ.

೩೧. ಬ್ರಹ್ಮ:-ಸ್ತ್ರೀ ಸ್ವಭಾವವು ಅತ್ಯಂತ ಚಂಚಲವಾದುದರಿಂದ ಕುಪಿತಳಾದ ಪಾರ್ವತಿಯು ಶಾಪಕೊಟ್ಟುಬಿಟ್ಟಳು. ಆದುದರಿಂದ ನೀವೆಲ್ಲರೂ ಆಕೆಯ ಚರ್ಯೆಯನ್ನು ಕ್ಷಮಿಸುವುದು ಯುಕ್ತವಾಗಿದೆ.

೩೨. ಎಲೌ ಪಾರ್ವತಿಯೇ, ನೀನೇ ನಿನ್ನ ಮಗನನ್ನು ನೋಡಲು ಶನಿಗೆ ಅಪ್ಪಣೆ ಕೊಟ್ಟು ನಿರ್ದೋಷಿಯೂ ಅತಿಥಿಯೂ ಆದ ಅವನನ್ನು ಶಪಿಸುವುದು ನ್ಯಾಯವೇ?

೩೩. ಹೀಗೆ ಹೇಳಿ, ಪಾರ್ವತಿಯನ್ನು ಸಮಾಧಾನಗೊಳಿಸಿ, ಶಾಪವಿಮೋಚನೆಗಾಗಿ ಶನಿಯನ್ನು ಆಕೆಗೆ ಸಮರ್ಪಿಸಿದನು.

ಬಭೂವ ಪಾರ್ವತೀ ತುಷ್ಟಾ ಬ್ರಹ್ಮಣೋ ವಚನಾನ್ಮುನೇ ।
ಶಾಂತಾ ಬಭೂವುಸ್ತೇ ತತ್ರ ದಿನೇಶಯಮಕಶ್ಯಪಾಃ ॥ ೫೪ ॥

ಉವಾಚ ಪಾರ್ವತೀ ತತ್ರ ಸಂತುಷ್ಟಾ ತಂ ಶನೈಶ್ಚರಂ ।
ಪ್ರಸಾದಿತಾ ಶಿವೇನೈವ ಬ್ರಹ್ಮಣಾ ಪರಿಸೇವಿತಾ ॥ ೫೫ ॥

॥ ಪಾರ್ವತ್ಯುವಾಚ ॥

ಗ್ರಹರಾಜೋ ಭವ ಶನೇ ಮದ್ವರೇಣ ಹರಿಪ್ರಿಯಃ ।
ಚಿರಜೀವೀ ಚ ಯೋಗೀಂದ್ರೋ ಹರಿಭಕ್ತಸ್ಯ ಕಾ ವಿಪತ್ ॥ ೫೬ ॥

ಅದ್ಯ ಪ್ರಭೃತಿ ನಿರ್ವಿಘ್ನಾ ಹರೌ ಭಕ್ತಿರ್ದೃಢಾಸ್ತು ತೇ ।
ಶಾಪೋಽಮೋಘಸ್ತತೋ ಮೇಽದ್ಯ ಕಿಂಚಿತ್ಖಂಜೋ ಭವಿಷ್ಯಸಿ ॥ ೫೭ ॥

ಇತ್ಯುಕ್ತ್ವಾ ಪಾರ್ವತೀ ತುಷ್ಟಾ ಬಾಲಂ ಧೃತ್ವಾ ಚ ವಕ್ಷಸಿ ।
ಉವಾಸ ಯೋಷಿತಾಂ ಮಧ್ಯೇ ತಸ್ಮೈ ದತ್ವಾ ಶುಭಾಶಿಷಃ ॥ ೫೮ ॥

---

೫೪. ಎಲೈ ನಾರದಮುನಿಯೇ ಬ್ರಹ್ಮನ ಮಾತನ್ನು ಕೇಳಿ ಪಾರ್ವತಿಯು ಸಂತುಷ್ಟಳಾದಳು. ಅನಂತರ ಸೂರ್ಯ, ಯಮ, ಕಶ್ಯಪಾದಿಗಳೂ ಶಾಂತರಾದರು

೫೫. ಬ್ರಹ್ಮನಿಂದಲೂ ಶಿವನಿಂದಲೂ ಸಾಂತ್ವನಗೊಳಿಸಲ್ಪಟ್ಟ ಪಾರ್ವತಿಯು ಸಂತುಷ್ಟಳಾಗಿ, ಶನಿಯನ್ನು ಕುರಿತು ಇಂತು ನುಡಿದಳು.

೫೬. ವಾರ್ವತಿ :— ಎಲೈ ಶನೀಶ್ವರನೇ, ನನ್ನ ವರದಿಂದ ಗ್ರಹಗಳ ರಾಜನೂ, ಶ್ರೀಹರಿಯ ಪ್ರಿಯನೂ, ಚಿರಜೀವಿಯೂ, ಯೋಗಿಶ್ರೇಷ್ಠನೂ ಆಗು. ಹರಿಭಕ್ತನಾದ ನಿನಗೆ ಯಾವ ವಿಪತ್ತೂ ಬರದಿರಲಿ.

೫೭. ಇಂದು ಮೊದಲುಗೊಂಡು ಶ್ರೀಹರಿಯಲ್ಲಿ ನಿನಗೆ ದೃಢವಾದ ಭಕ್ತಿಯುಂಟಾಗಲಿ. ಆದರೆ ನನ್ನ ಶಾಪವು ಮಾತ್ರ ವ್ಯರ್ಥವಾಗದುದರಿಂದ ಕೊಂಚ ಕುಂಟನಾಗುವೆ.

೫೮. ಸಂತುಷ್ಟಳಾದ ಪಾರ್ವತಿಯು ಇಂತು ನುಡಿದು ಶನಿಗೆ ಆಶೀರ್ವಾದ ಮಾಡಿ ಶಿಶುವನ್ನು ಎತ್ತಿಕೊಂಡು ಸ್ತ್ರೀಯರ ಮಧ್ಯದಲ್ಲಿ ಹೋಗಿ ಕುಳಿತಳು.

ಶನಿರ್ಜಗಾಮ ದೇವಾನಾಂ ಸಮೀಪಂ ಹೃಷ್ಟಮಾನಸಃ ।
ಪ್ರಣಮ್ಯ ಭಕ್ತ್ಯಾ ತಾಂ ಬ್ರಹ್ಮನ್ನಂಬಿಕಾಂ ಜಗದಂಬಿಕಾಂ ॥ ೫೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ಶನಿಕೃತ ಗಣೇಶದರ್ಶನತಜ್ಞಾತ
ಗಣೇಶ ಶಿರಃಪತನ ವಿಷ್ಣುಕೃತ ಗಣೇಶಶಿರೋಯೋಜನ
ಶನಿಶಾಪಾದಿಕಥನಂ ನಾಮ

ದ್ವಾದಶೋಽಧ್ಯಾಯಃ

---

೫೯. ಇತ್ತ ಶನಿಯೂ ಕೂಡ ಸಂತುಷ್ಟಾಂತರಂಗನಾಗಿ, ಜಗದಂಬಿಕೆಯಾದ ಆ ಪಾರ್ವತಿಯನ್ನು ಭಕ್ತಿಯಿಂದ ನಮಸ್ಕರಿಸಿ ದೇವತೆಗಳ ಸಮೀಪಕ್ಕೆ ಹೋದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದ ನಾರದನಾರಾಯಣ
ಸಂವಾದದಲ್ಲಿ 'ಶನಿಯು ಗಣೇಶನ ದರ್ಶನ ಮಾಡಿದುದು, ಗಣೇಶನ ಶಿರಸ್ಸು
ಪತನವಾದುದು, ವಿಷ್ಣುವು ಆನೆಯ ತಲೆಯನ್ನು ಜೋಡಿಸಿದುದು,
ಶನಿಗೆ ಶಾಪ ಬಂದು ವಿಮೋಚನೆಯಾದುದು'
ಮುಂತಾದವುಗಳನ್ನು ತಿಳಿಸುವ

ಹನ್ನೆರಡನೆಯ ಅಧ್ಯಾಯವು ಮುಗಿದುದು.

## ಹನ್ನೆರಡನೆಯ ಅಧ್ಯಾಯದ ಸಾರಾಂಶ

ಪಾರ್ವತೀದೇವಿಯು ಶನೈಶ್ಚರನ ಮಾತನ್ನು ಕೇಳಿ ಈಶ್ವರೇಚ್ಛೆಯಿದ್ದಂತೆ ಆಗಲೆಂದು ತನ್ನನ್ನೂ ಶಿಶುವನ್ನೂ ನೋಡಲು ಶನಿಗೆ ಅನುಮತಿಯಿತ್ತಳು. ಚಿಂತಾ ಕ್ರಾಂತನಾದ ಶನಿಯು ಧರ್ಮಪುರುಷನ ಎದುರಿನಲ್ಲಿ ಎಡಗಣ್ಣಿನಿಂದ ಆ ಶಿಶುವನ್ನು ನೋಡಲು ಕೂಡಲೇ ಅದರ ರುಂಡವು ಮುಂಡದಿಂದ ಕತ್ತರಿಸಿ ಬಿದ್ದಿತು. ಆಗ ಪಾರ್ವತಿಯೇ ಮುಂತಾದ ದೇವಿಯರೆಲ್ಲರೂ ದುಃಖಿತರಾಗಲು, ಗರುಡವಾಹನನಾದ ಶ್ರೀಹರಿಯು ಪುಷ್ಪಭದ್ರಾನದಿಯ ತೀರದಲ್ಲಿ ಹೆಣ್ಣಾನೆ ಮತ್ತು ಮರಿಗಳೊಡನೆ ಉತ್ತರದಿಕ್ಕಿಗೆ ತಲೆ ಹಾಕಿಕೊಂಡು ಮಲಗಿದ್ದ ಒಂದು ಗಂಡಾನೆಯ ತಲೆಯನ್ನು ಕತ್ತರಿಸಿ ತಂದು, ಪಾರ್ವತಿಯ ಶಿಶುವಿನ ಮುಂಡಕ್ಕೆ ಸ್ಸಿಸೆ ಪುನರುಜ್ಜೀವನಗೊಳಿಸಿ ದನು. ಮತ್ತು ಪಾರ್ವತಿಗೆ ಆತ್ಮತತ್ವವನ್ನುಪದೇಶಮಾಡಿದನು. ಸಂತುಷ್ಟರಾದ ಬ್ರಹ್ಮಾದಿ ಸಕಲ ದೇವತೆಗಳೂ ಆ ಶಿಶುವಿಗೆ ವಿವಿಧಾಭರಣಗಳನ್ನು ಕೊಟ್ಟು ಆಶೀರ್ವದಿಸಿದರು

ಅನಂತರ ಪಾರ್ವತಿಯು ಲಜ್ಜೆಯಿಂದ ನಮ್ರಮುಖನಾಗಿ ನಿಂತಿದ್ದ ಶನಿಗೆ ಅಂಗಹೀನನಾಗುವಂತೆ ಶಪಿಸಲು, ಸೂರ್ಯಾದಿ ದೇವತೆಗಳು ಕುಪಿತರಾಗಿ ಪ್ರತಿ ಶಾಪ ಕೊಡಲುದ್ಯುಕ್ತರಾದರು. ಆಗ ವಿಷ್ಣುವಿನ ಪ್ರೇರಣೆಯಂತೆ ಬ್ರಹ್ಮನು ಎಲ್ಲರನ್ನೂ ಸಮಾಧಾನಗೊಳಿಸಿದನು. ಆದರೂ ಸೂರ್ಯನು ನಿರಪರಾಧಿಯಾದ ಶನಿಯನ್ನು ಶಪಿಸಿದುದರ ಫಲವಾಗಿ ಪಾರ್ವತಿಯ ಮಗನೂ ಅಂಗಹೀನನಾಗಲೆಂದು ಶಪಿಸಿದನು. ಆಗ ಬ್ರಹ್ಮನು ಪಾರ್ವತಿಯ ತಪ್ಪನ್ನು ಮನಗಾಣಿಸಿ ಶನಿಯ ಶಾಪ ಪರಿಹಾರಮಾಡಲು ಹೇಳಿದನು. ಆದರೆ ಪಾರ್ವತಿಯು ತನ್ನ ಶಾಪವು ಅಮೋಘ ವಾದುದರಿಂದ ಶನಿಯ ಒಂದು ಕಾಲು ಮಾತ್ರ ಕುಂಟಾಗುವುದೆಂದು ಹೇಳಿ, ಅವನಿಗೆ ಅನಂತಾಶೀರ್ವಾದಗಳನ್ನು ಮಾಡಿದಳು. ಶನಿಯೂ ಕೂಡ ಜಗದಂಬಿಕೆಗೆ ವಂದಿಸಿ ಸಂತೋಷದಿಂದ ತೆರಳಿದನು.



|| ಓಂ ||

-|| ಶ್ರೀ ಗಣೇಶಾಯ ನಮಃ ||-

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ತ್ರಯೋದಶೋಽಧ್ಯಾಯಃ ||

|| ನಾರಾಯಣ ಉವಾಚ ||

ಅಥ ವಿಷ್ಣುಃ ಶುಭೇ ಕಾಲೇ ದೇವೈಶ್ಚ ಮುನಿಭಿಃ ಸಹ |
ಪೂಜಯಾಮಾಸ ತಂ ಬಾಲಮುಪಹಾರೈರನುತ್ತಮೈಃ || ೧ ||

ಸರ್ವಾಗ್ರೇ ತವ ಪೂಜಾ ಚ ಮಯಾ ದತ್ತಾ ಸುರೋತ್ತಮ |
ಸರ್ವಪೂಜ್ಯಶ್ಚ ಯೋಗೀಂದ್ರೋ ಭವ ವತ್ಸೇತ್ಯುವಾಚ ತಂ || ೨ ||

ವನಮಾಲಾಂ ದದೌ ತಸ್ಮೈ ಬ್ರಹ್ಮಜ್ಞಾನಂ ಚ ಮುಕ್ತಿದಂ |
ಸರ್ವಸಿದ್ಧಿಂ ಪ್ರದಾಯೈವ ಚಕಾರಾತ್ಮಸಮಂ ಹರಿಃ || ೩ ||

### ಹದಿಮೂರನೆಯ ಅಧ್ಯಾಯವು

೧. ನಾರಾಯಣ:—ಅನಂತರ ವಿಷ್ಣುವು ಮಂಗಳಮುಹೂರ್ತದಲ್ಲಿ. ದೇವ ಮುನಿಗಳೊಡಗೂಡಿ. ಉತ್ತಮವಾದ ಪೂಜಾದ್ರವ್ಯಗಳಿಂದ ಬಾಲಕನಾದ ಗಣೇಶನನ್ನು ಪೂಜಿಸಿದನು.

೨. ವಿಷ್ಣು :—ಎಲೈ ಸುರೋತ್ತಮನಾದ ಗಣಪತಿಯೇ ಎಲ್ಲ ದೇವತೆಗಿಂತ ಮೊದಲು ನಾನು ನಿನಗೆ ಪೂಜಿಸಿದುದರಿಂದ ನೀನು ಸರ್ವಪೂಜ್ಯನೂ, ಯೋಗಿಶ್ರೇಷ್ಠನೂ ಎನಿಸುವೆ.

೩. ಇಂತು ಶ್ರೀಹರಿಯು ಅವನಿಗೆ ವನಮಾಲೆಯೊಂದನ್ನು ಕೊಟ್ಟು ಮುಕ್ತಿಪ್ರದವಾದ ಬ್ರಹ್ಮಜ್ಞಾನವನ್ನು ಉಪದೇಶಿಸಿ ಸಕಲಸಿದ್ಧಿಯನ್ನೂ ಅನುಗ್ರಹಿಸಿ ತನಗೆ ಸಮಾನನಾಗಿ ಮಾಡಿದನು.

ದದೌ ದ್ರವ್ಯಾಣಿ ಚಾರೂಣಿ ಚೋಪಚಾರಾಂಶ್ಚ ಷೋಡಶ ।
ನಾಮಭಿಃ ಸ್ತವನಂ ಚಕ್ರೇ ಮುನಿಭಿಶ್ಚ ಸಮಂ ಸುರೈಃ ॥ ೪ ॥

ವಿಘ್ನೇಶಶ್ಚ ಗಣೇಶಶ್ಚ ಹೇರಂಬಶ್ಚ ಗಜಾನನಃ ।
ಲಂಬೋದರಶ್ಚೈಕದಂತಃ ಶೂರ್ಪಕರ್ಣೋ ವಿನಾಯಕಃ ॥ ೫ ॥

ಏತಾನ್ಯಷ್ಟ ಚ ನಾಮಾನಿ ಸರ್ವಸಿದ್ಧಿಪ್ರದಾನಿ ಚ ।
ಆಶಿಷಂ ದಾಪಯಾಮಾಸ ಚಾನಯಾಮಾಸ ತಾನ್ಮುನೀನ್ ॥ ೬ ॥

ಸಿದ್ಧಾಸನಂ ದದೌ ಧರ್ಮಸ್ತಸ್ಮೈ ಬ್ರಹ್ಮಾ ಕಮಂಡಲುಂ ।
ಶಂಕರೋ ಯೋಗಪಟ್ಟಂ ಚ ತತ್ವಜ್ಞಾನಂ ಸುದುರ್ಲಭಂ ॥ ೭ ॥

ರತ್ನಸಿಂಹಾಸನಂ ಶಕ್ರಃ ಸೂರ್ಯಶ್ಚ ಮಣಿಕುಂಡಲೇ ।
ಮಾಣಿಕ್ಯಮಾಲಾಂ ಚಂದ್ರಶ್ಚ ಕುಬೇರಶ್ಚ ಕಿರೀಟಕಂ ॥ ೮ ॥

೪. ಮನೋಹರವಾದ ದ್ರವ್ಯಗಳನ್ನೂ ಷೋಡಶೋಪಚಾರಗಳನ್ನೂ ಗಣಪತಿಗೆ ಸಮರ್ಪಿಸಿ ದೇವತೆ ಮತ್ತು ಮುನಿಗಳೊಡನೆ ಅವನ ದಿವ್ಯನಾಮಸಂಕೀರ್ತನೆ ಮಾಡಿದನು.

೫-೬. ವಿಘ್ನೇಶ, ಗಣೇಶ, ಹೇರಂಬ, ಗಜಾನನ, ಲಂಬೋದರ, ಏಕದಂತ, ಶೂರ್ಪಕರ್ಣ, ವಿನಾಯಕ ಎಂಬ ಸರ್ವಸಿದ್ಧಿದಾಯಕವಾದ ಎಂಟು ದಿವ್ಯನಾಮಗಳನ್ನು ಸಂಕೀರ್ತನೆಮಾಡಿ, ಮಹರ್ಷಿಗಳನ್ನು ಕರೆಸಿ ಆಶೀರ್ವಾದ ಮಾಡಿಸಿದನು.

೭. ಅನಂತರ ಧರ್ಮಪುರುಷನು ಸಿದ್ಧಾಸನವನ್ನೂ, ಬ್ರಹ್ಮನು ಕಮಂಡಲುವನ್ನೂ ಶಂಕರನು ಯೋಗಪಟ್ಟಿಕೆಯನ್ನೂ ದುರ್ಲಭವಾದ ತತ್ವಜ್ಞಾನವನ್ನೂ ಗಣೇಶನಿಗೆ ದಯಪಾಲಿಸಿದರು.

೮ ಇಂದ್ರನು ರತ್ನಸಿಂಹಾಸನವನ್ನೂ, ಸೂರ್ಯನು ರತ್ನಕುಂಡಲವನ್ನೂ, ಚಂದ್ರನು ಮಾಣಿಕ್ಯಮಾಲೆಯನ್ನೂ, ಕುಬೇರನು ಕಿರೀಟವನ್ನೂ ಗಣೇಶನಿಗೆ ಬಹುಮಾನವಾಗಿ ಕೊಟ್ಟರು.

ವಹ್ನಿಶುದ್ಧಂ ಚ ವಸನಂ ದದೌ ತಸ್ಮೈ ಹುತಾಶನಃ ।
ರತ್ನಛತ್ರಂ ಚ ವರುಣೋ ವಾಯೂ ರತ್ನಾಂಗುಲೀಯಕಂ ॥ ೯ ॥

ಕ್ಷೀರೋದೋದ್ಭವಸದ್ರತ್ನರಚಿತಂ ವಲಯಂ ವರಂ ।
ಮಂಜೀರಂ ಚಾಪಿ ಕೇಯೂರಂ ದದೌ ಪದ್ಮಾಲಯಾ ಮುನೇ ॥ ೧೦ ॥

ಕಂಠಭೂಷಾಂ ಚ ಸಾವಿತ್ರೀ ಭಾರತೀ ಹಾರಮುಜ್ವಲಂ ।
ಕ್ರಮೇಣ ಸರ್ವದೇವಾಶ್ಚ ದೇವ್ಯಶ್ಚ ಭೂಷಣಂ ದದುಃ ॥ ೧೧ ॥

ಮುನಯಃ ಪರ್ವತಾಶ್ಚೈವ ರತ್ನಾನಿ ವಿವಿಧಾನಿ ಚ ।
ವಸುಂಧರಾ ದದೌ ತಸ್ಮೈ ವಾಹನಾಯ ಚ ಮೂಷಕಂ ॥ ೧೨ ॥

೯. ಅಗ್ನಿದೇವನು ತನ್ನಂತೆಯೇ ಪರಿಶುದ್ಧವಾದ ವಸ್ತ್ರವನ್ನು ಅವನಿಗೆ ದಯಪಾಲಿಸಿದನು. ವರುಣನು ರತ್ನನಿರ್ಮಿತವಾದ ಛತ್ರವನ್ನೂ, ವಾಯುದೇವನು ರತ್ನದ ಉಂಗುರವನ್ನೂ ಗಣೇಶನಿಗೆ ಇತ್ತರು.

೧೦. ಎಲೈ ನಾರದನೇ, ಆಗ ಲೋಕಮಾತೆಯಾದ ಲಕ್ಷ್ಮೀದೇವಿಯು ಕ್ಷೀರಸಮುದ್ರದಲ್ಲಿ ಉತ್ಪನ್ನವಾದ ಶ್ರೇಷ್ಠರತ್ನಗಳನ್ನು ಪೆಟ್ಟಿರುವ ದಿವ್ಯಕಂಕಣವನ್ನೂ, ವಡ್ಯಾಣ ಮತ್ತು ಭುಜಕೀರ್ತಿಗಳನ್ನೂ ಗಣೇಶನಿಗೆ ಕೊಟ್ಟಳು.

೧೧. ಸಾವಿತ್ರೀದೇವಿಯು ದಿವ್ಯವಾದ ಕಂಠಾಭರಣವನ್ನೂ, ಸರಸ್ವತಿಯು ಮನೋಹರವಾದ ಹಾರವನ್ನೂ, ಇದೇ ಕ್ರಮದಲ್ಲಿ ಸಕಲ ದೇವದೇವಿಯರು ವಿವಿಧ ಒಳುವಳಿಗಳನ್ನೂ ಆತನಿಗೆ ಅನುಗ್ರಹಿಸಿದರು.

೧೨. ಮುನಿಗಳೂ, ಪರ್ವತಶ್ರೇಷ್ಠರೂ ವಿವಿಧರತ್ನಗಳನ್ನು ಸಮರ್ಪಿಸಿದರು. ವಸುಂಧರಾದೇವಿಯು. ಆ ಶಿಶುವಿಗೆ ವಾಹನಕ್ಕಾಗಿ ಮೂಷಿಕ ( ಇಲಿ) ವನ್ನಿತ್ತಳು.

ಕ್ರಮೇಣ ದೇವಾ ದೇವ್ಯಶ್ಚ ಮುನಯಃ ಪರ್ವತಾದಯಃ ।
ಗಂಧರ್ವಾಃ ಕಿನ್ನರಾ ಯಕ್ಷಾ ಮನವೋ ಮಾನವಾಸ್ತಥಾ ॥ ೧೩ ॥

ನಾನಾವಿಧಾನಿ ದ್ರವ್ಯಾಣಿ ಸ್ವಾದೂನಿ ಮಧುರಾಣಿ ಚ ।
ಪೂಜಾಂ ಚಕ್ರುಶ್ಚ ತೇ ಸರ್ವೇ ಕ್ರಮಾದ್ವೈ ಭಕ್ತಿಪೂರ್ವಕಂ ॥ ೧೪ ॥

ಪಾರ್ವತೀ ಜಗತಾಂ ಮಾತಾ ಸ್ಮೇರಾನನಸರೋರುಹಾ ।
ರತ್ನಸಿಂಹಾಸನೇ ಪುತ್ರಂ ವಾಸಯಾಮಾಸ ನಾರದ ॥ ೧೫ ॥

ಸರ್ವತೀರ್ಥೋದಕೈ ರತ್ನಕಲಶಾವರ್ಜಿತೈ ಸ್ತುತೈಃ ।
ಸ್ನಾಪಯಾಮಾಸ ವೇದೋಕ್ತಮಂತ್ರೇಣ ಮುನಿಭಿಸ್ತದಾ ।
ಅಗ್ನಿಶುದ್ಧೇ ಚ ವಸನೇ ದದೌ ತಸ್ಮೈ ಸತೀ ಮುದಾ ॥ ೧೬ ॥

ಗೋದಾವರ್ಯುದಕೈಃ ಪಾದ್ಯಮರ್ಘ್ಯಂ ಗಂಗೋದಕೇನ ಚ ।
ದೂರ್ವಾಭಿರಕ್ಷತಾಪುಷ್ಪೈಶ್ಚಂದನೇನ ಸಮನ್ವಿತಂ ॥ ೧೭ ॥

೧೩-೧೪ ಅನಂತರ ದೇವದೇವಿಯರೂ, ಮುನಿಪರ್ವತಾದಿಗಳೂ, ಯಕ್ಷ ಗಂಧರ್ವ ಕಿನ್ನರರೂ, ಮನುಮಾನವರೂ ಕ್ರಮವಾಗಿ ಅತ್ಯಂತ ಮಧುರವಾದ ದ್ರವ್ಯಗಳನ್ನು ಸಮರ್ಪಿಸಿ, ಎಲ್ಲರೂ ಭಕ್ತಿಪೂರ್ವಕವಾಗಿ ಪೂಜೆ ಮಾಡಿದರು.

೧೫. ನಾರದಮಹರ್ಷಿಯೇ, ಆಗ ಜಗನ್ಮಾತೆಯಾದ ಪಾರ್ವತಿಯು ಮಂದಸ್ಮಿತಯುತವಾದ ಮುಖಾರವಿಂದವುಳ್ಳವಳಾಗಿ ಮಗನನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದಳು.

೧೬. ಮತ್ತು ರತ್ನಕಲಶದಲ್ಲಿ ತುಂಬಿರುವ ಸಕಲ ಪುಣ್ಯತೀರ್ಥೋದಕಗಳಿಂದ ವೇದೋಕ್ತವಾಗಿ ಮಹರ್ಷಿಗಳ ಕೈಯಿಂದ ಸ್ನಾನಮಾಡಿಸಿ ಅಗ್ನಿಯಂತೆ ಪರಿಶುದ್ಧವಾದ ಎರಡು ವಸ್ತ್ರಗಳನ್ನು ಪಾರ್ವತಿಯು ಮಗನಿಗೆ ಸಂತೋಷದಿಂದ ಕೊಟ್ಟಳು.

೧೭. ದೂರ್ವಾಕ್ಷತೆಗಳಿಂದಲೂ, ಚಂದನಪುಷ್ಪಗಳಿಂದಲೂ ಮಿಶ್ರಿತವಾದ ಗೋದಾವರಿಯ ತೀರ್ಥದಿಂದ ಪಾದ್ಯವನ್ನೂ, ಗಂಗೆಯ ಉದಕದಿಂದ ಅರ್ಘ್ಯವನ್ನೂ ಎಲ್ಲ ದೇವತೆಗಳೂ ಸಮರ್ಪಿಸಿದರು.

ಪುಷ್ಕರೋದಕಮಾನೀಯ ಪುನರಾಚಮನೀಯಕಂ ।
ಮಧುಪರ್ಕಂ ರತ್ನಪಾತ್ರೈರಾಸವಂ ಶರ್ಕರಾನ್ವಿತಂ ॥ ೧೮ ॥

ಸ್ನಾನೀಯಂ ವಿಷ್ಣುತೈಲಂ ಚ ಸ್ವರ್ವೈದ್ಯಾಭ್ಯಾಂ ವಿನಿರ್ಮಿತಂ ।
ಅಮೂಲ್ಯರತ್ನರಚಿತ ಚಾರುಭೂಷಾ ಕದಂಬಕಂ ॥ ೧೯ ॥

ಪಾರಿಜಾತಪ್ರಸೂನಾನಾಮನ್ಯೇಷಾಂ ಶತಕಾನಿ ಚ ।
ಮಾಲತೀ ಚಂಪಕಾದೀನಾಂ ಪುಷ್ಪಾಣಿ ವಿವಿಧಾನಿ ಚ ।
ಪೂಜಾರ್ಹಾಣಿ ಚ ಪತ್ರಾಣಿ ತುಲಸೀ ಸಹಿತಾನಿ ಚ ॥ ೨೦ ॥

ಚಂದನಾಗರುಕಸ್ತೂರೀಕುಂಕುಮಾನಿ ಚ ಸಾದರಂ ।
ರತ್ನಪ್ರದೀಪನಿಕರಂ ಧೂಪಂ ಚ ಪರಿತೋ ದದೌ ॥ ೨೧ ॥

ನೈವೇದ್ಯಂ ತತ್ಪ್ರಿಯಂ ಚೈವ ತಿಲಲಡ್ಡುಕಪರ್ವತಾನ್ ।
ಯವಗೋಧೂಮಚೂರ್ಣಾನಾಂ ಲಡ್ಡುಕಾನಾಂ ಚ ಪರ್ವತಾನ್ ॥ ೨೨ ॥

೧೮. ಪುಷ್ಕರೋದಕದಿಂದ ಪುನರಾಚಮನವನ್ನೂ, ರತ್ನಪಾತ್ರದಲ್ಲಿ ಶರ್ಕರಾ ಸಹಿತವಾದ ಮಧುಪರ್ಕವನ್ನೂ ಭಕ್ತಿಯಿಂದರ್ಪಿಸಿದರು.

೧೯. ದೇವವೈದ್ಯರಿಂದ ನಿರ್ಮಿತವಾದ ಸ್ನಾನಾನುಗುಣವಾದ ವಿಷ್ಣುತೈಲವನ್ನೂ, ಅಮೂಲ್ಯ ರತ್ನಖಚಿತವಾದ ದಿವ್ಯಾಭರಣಗಳನ್ನೂ ಗಣಪತಿಗಿತ್ತರು.

೨೦. ಪಾರಿಜಾತ, ಜಾಜಿ, ಸಂಪಿಗೆ ಮುಂತಾದ ಅನೇಕ ಸುಗಂಧಕುಸುಮಗಳನ್ನೂ, ಪೂಜೆಗೆ ಯೋಗ್ಯವಾದ ತುಲಸೀ ಮುಂತಾದ ಪತ್ರಗಳನ್ನೂ ಭಕ್ತಿಯಿಂದ ಪೂಜಿಸಿದರು.

೨೧. ಚಂದನ, ಅಗುರು, ಕಸ್ತೂರಿ, ಕುಂಕುಮಕೇಸರಿ ಮುಂತಾದ ಸುಗಂಧ ದ್ರವ್ಯಗಳನ್ನೂ, ಸುವಾಸಿತವಾದ ಧೂಪಗಳನ್ನೂ ರತ್ನದೀಪಗಳನ್ನೂ ಸಮರ್ಪಿಸಿದರು.

೨೨. ಅನಂತರ ಗಣಪತಿಗೆ ಬಹಳ ಪ್ರಿಯವಾದ ಎಳ್ಳು, ಅಕ್ಕಿ ಮತ್ತು ಗೋಧಿ ಹಿಟ್ಟಿನಿಂದ ಮಾಡಿದ ಲಡ್ಡುಗಳನ್ನು ನಿವೇದಿಸಿದರು.

ಪಕ್ವಾನ್ನಾನಾಂ ಪರ್ವತಾಂಶ್ಚ ಸುಸ್ವಾದು ಸುಮನೋಹರಾನ್ ।
ಪರ್ವತಾಂಸ್ಸ್ವಸ್ತಿಕಾನಾಂ ಚ ಸುಸ್ವಾದು ಶರ್ಕರಾನ್ವಿತಾನ್ ॥ ೨೩ ॥

ಗುಡಾಕ್ತಾನಾಂ ಚ ಲಾಜಾನಾಂ ಪೃಥುಕಾನಾಂ ಚ ಪರ್ವತಾನ್ ।
ಶಾಲ್ಯನ್ನಾನಾಂ ಪಿಷ್ಟಕಾನಾಂ ಪರ್ವತಾನ್ವ್ಯಂಜನೈಃ ಸಹ ।
ಪಯೋ ಭೃತ್ಕಲಶಾನಾಂ ಚ ಲಕ್ಷಾಣಿ ಪ್ರದದೌ ಮುದಾ ॥ ೨೪ ॥

ಲಕ್ಷಾಣಿ ದಧಿಪೂರ್ಣಾನಾಂ ಕಲಶಾನಾಂ ಚ ಪೂಜನೇ ।
ಮಧುಭೃತ್ಕಲಶಾನಾಂ ಚ ತ್ರಿಲಕ್ಷಾಣಿ ಚ ಸುಂದರೀ ॥ ೨೫ ॥

ಸರ್ಪಿಸ್ಸುವರ್ಣಕುಂಭಾನಾಂ ಪಂಚಲಕ್ಷಾಣಿ ಸಾದರಂ ।
ದಾಡಿಮಾನಾಂ ಶ್ರೀಫಲಾನಾಮಸಂಖ್ಯಾನಿ ಫಲಾನಿ ಚ ॥ ೨೬ ॥

ಖರ್ಜೂರಾಣಾಂ ಕಪಿತ್ಥಾನಾಂ ಜಂಬೂನಾಂ ವಿವಿಧಾನಿ ಚ ।
ಆಮ್ರಾಣಾಂ ಪನಸಾನಾಂ ಚ ಕದಲೀನಾಂ ಚ ನಾರದ ।
ಫಲಾನಿ ನಾರಿಕೇಲಾನಾಮಸಂಖ್ಯಾನಿ ದದೌ ಮುದಾ ॥ ೨೭ ॥

೨೩. ಅತ್ಯಂತ ರುಚಿಯೂ, ಮನೋಹರವೂ ಆದ ಪಕ್ವಾನ್ನಗಳ ರಾಶಿಯನ್ನೂ, ಸಕ್ಕರೆಯಿಂದ ಮಾಡಿ ಬಹಳ ರುಚಿಯಾಗಿರುವ ಸ್ವಸ್ತಿಕ ವಾಯನಗಳನ್ನೂ ಅಸಂಖ್ಯವಾಗಿ ಅರ್ಪಿಸಿದರು.

೨೪. ಬೆಲ್ಲದಲ್ಲಿ ಕಲಸಿರುವ ಅರಳು ಮತ್ತು ಅವಲಕ್ಕಿಯನ್ನೂ, ಸಕಲ ಪರಿಕರದೊಡಗೂಡಿದ ಶಾಲ್ಯನ್ನ ಮತ್ತು ತಂಬಿಟ್ಟುಗಳ ರಾಶಿಯನ್ನೂ, ಹಾಲು ತುಂಬಿದ ಲಕ್ಷಕಲಶಗಳನ್ನೂ ಬಹಳ ಸಂತೋಷದಿಂದ ಸಮರ್ಪಿಸಿದರು.

೨೫. ಮೊಸರು ತುಂಬಿದ ಲಕ್ಷಕಲಶಗಳನ್ನೂ, ಜೇನುತುಂಬಿದ ಮೂರುಲಕ್ಷ ಕಲಶಗಳನ್ನೂ ಸುಂದರಿಯಾದ ಪಾರ್ವತಿಯು ಗಣೇಶನಿಗೆ ಸಮರ್ಪಿಸಿದಳು.

೨೬. ಘೃತಪೂರಿತವಾದ ಐದುಲಕ್ಷ ಸುವರ್ಣ ಕುಂಭಗಳನ್ನೂ, ದಾಳಿಂಬೆ, ಬಿಲ್ವ ಮುಂತಾದ ಅಸಂಖ್ಯ ಫಲಗಳನ್ನೂ ಸಮರ್ಪಿಸಿದಳು.

೨೭. ಎಲೈ ನಾರದನೇ, ಖರ್ಜೂರ, ಬೇಲ, ನೇರಳೆ, ಮಾವು, ಹಲಸು, ಬಾಳೆ, ನಾರಿಕೇಳ ಮುಂತಾದ ಅನೇಕ ಫಲಗಳನ್ನು ಸಂತೋಷದಿಂದ ಪಾರ್ವತಿಯು ಸಮರ್ಪಿಸಿದಳು.

ಅನ್ಯಾನಿ ಪರಿಪಕ್ವಾನಿ ಕಾಲದೇಶೋದ್ಭವಾನಿ ಚ ।
ದದೌ ತಾನಿ ಮಹಾಭಾಗ ಸ್ವಾದೂನಿ ಮಧುರಾಣಿ ಚ ॥ ೨೮ ॥

ಸ್ವಚ್ಛಂ ಸುನಿರ್ಮಲಂ ಚೈವ ಕರ್ಪೂರಾದಿಸುವಾಸಿತಂ ।
ಗಂಗಾಜಲಂ ಚ ಪಾನಾರ್ಥಂ ಪುನರಾಚಮನೀಯಕಂ ॥ ೨೯ ॥

ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿ ಸುವಾಸಿತಂ ।
ಸುವರ್ಣಪಾತ್ರಶತಕಂ ಭಕ್ಷ್ಯ ಪೂರ್ಣಂ ಚ ನಾರದ ॥ ೩೦ ॥

ಶೈಲೇಶ್ವರೀ ಶೈಲರಾಜಃ ಶೈಲಜಃ ಶೈಲರಾಜಜಃ ।
ಶೈಲರಾಜಪ್ರಿಯಾಮಾತ್ಯಾಃ ಪುಪೂಜುಃ ಶೈಲಮಾತ್ಮಜಂ ॥ ೩೧ ॥

ಓಂ ಶ್ರೀಂ ಹ್ರೀಂ ಕ್ಲೀಂ ಗಣೇಶ್ವರಾಯ ಬ್ರಹ್ಮರೂಪಾಯ ಚಾರವೇ ।
ಸರ್ವಸಿದ್ಧಿಪ್ರದೇಶಾಯ ವಿಘ್ನೇಶಾಯ ನಮೋ ನಮಃ ॥ ೩೨ ॥

೨೮. ಅಂತೆಯೇ ಕಾಲದೇಶಾನುಗುಣವಾಗಿ ದೊರೆಯುವ ಅತ್ಯಂತ ಮಧುರವೂ, ರುಚಿಕರವೂ ಆದ ಅನೇಕ ಪಕ್ವಫಲಗಳನ್ನು ಪಾರ್ವತಿಯು ಸಂತೋಷದಿಂದ ಸಮರ್ಪಿಸಿದಳು

೨೯. ಅನಂತರ ಪಾನೀಯ ಮತ್ತು ಪುನರಾಚಮನಕ್ಕಾಗಿ ಪಚ್ಚಕರ್ಪೂರಾದಿಗಳಿಂದ ಸುವಾಸಿತವಾಗಿ ನಿರ್ಮಲವಾದ ಗಂಗೋದಕವನ್ನು ಸಮರ್ಪಿಸಿದಳು.

೩೦. ಏಲಕ್ಕಿ, ಪಚ್ಚಕರ್ಪೂರಾದಿ ಪರಿಕರಗಳಿಂದ ಪರಿಮಳವಾಗಿರುವ ತಾಂಬೂಲವನ್ನೂ, ವಿವಿಧ ಭಕ್ಷ್ಯಗಳಿಂದ ಪರಿಪೂರ್ಣವಾದ ನೂರಾರು ಚಿನ್ನದ ತಟ್ಟೆಗಳನ್ನೂ ಗಣೇಶನಿಗೆ ಅರ್ಪಿಸಿದಳು.

೩೧. ಈ ರೀತಿಯಾಗಿ ಪಾರ್ವತಿ ಮೇನಕೆಯರೂ, ಹಿಮವಂತ ಮೈನಾಕರೂ ಶಿಶುವಾದ ಗಣಪತಿಯನ್ನು ಭಕ್ತಿಪೂರ್ವಕವಾಗಿ ಪೂಜಿಸಿದರು.

೩೨–೩೩. 'ಓಂ ಶ್ರೀಂ ಹ್ರೀಂ ಕ್ಲೀಂ' ಎಂಬ ಬೀಜಾಕ್ಷರಗಳನ್ನುಚ್ಚರಿಸಿ, 'ಪರಬ್ರಹ್ಮಸ್ವರೂಪನೂ, ಸರ್ವಸಿದ್ಧಿಪ್ರದನೂ, ವಿಘ್ನನಾಶಕನೂ ಆದ ಮಹಾಗಣಪತಿಗೆ ನಮಸ್ಕಾರ' ಎಂಬ ಅರ್ಥವನ್ನು ಕೊಡುವ ಈ ಮಂತ್ರವನ್ನು ಪಠಿಸಿ,

ಇತ್ಯನೇನೈವ ಮಂತ್ರೇಣ ದತ್ವಾ ದ್ರವ್ಯಾಣಿ ಭಕ್ತಿತಃ |
ಸರ್ವೇ ಪ್ರಮುದಿತಾಸ್ತತ್ರ ಬ್ರಹ್ಮವಿಷ್ಣುಶಿವಾದಯಃ || ೩೩ ||

ದ್ವಾತ್ರಿಂಶದಕ್ಷರೋ ಮಾಲಾ ಮಂತ್ರೋಽಯಂ ಸರ್ವಕಾಮದಃ |
ಧರ್ಮಾರ್ಥಕಾಮಮೋಕ್ಷಾಣಾಂ ಫಲದಃ ಸರ್ವಸಿದ್ಧಿದಃ || ೩೪ ||

ಪಂಚಲಕ್ಷಜಪೇನೈವ ಮಂತ್ರಸಿದ್ಧಿಸ್ತು ಮಂತ್ರಿಣಃ |
ಮಂತ್ರಸಿದ್ಧಿರ್ಭವೇದ್ಯಸ್ಯ ಸ ಚ ವಿಷ್ಣುಶ್ಚ ಭಾರತೇ || ೩೫ ||

ವಿಘ್ನಾನಿ ಚ ಪಲಾಯಂತೇ ತನ್ನಾಮಸ್ಮರಣೇನ ಚ |
ಮಹಾವಾಗ್ಮೀ ಮಹಾಸಿದ್ಧಃ ಸರ್ವಸಿದ್ಧಿಸಮನ್ವಿತಃ || ೩೬ ||

ವಾಕ್ಪತಿರ್ಗುರುತಾಂ ಯಾತಿ ತಸ್ಯ ಸಾಕ್ಷಾತ್ಸುನಿಶ್ಚಿತಾ |
ಮಹಾಕವೀಂದ್ರೋ ಗುಣವಾನ್ವಿದುಷಾಂ ಚ ಗುರೋರ್ಗುರುಃ || ೩೭ ||

---

ಬ್ರಹ್ಮ ವಿಷ್ಣು ಮಹೇಶ್ವರಾದಿ ಸಕಲ ದೇವತೆಗಳೂ ಬಹಳ ಸಂತೋಷದಿಂದ ಗಣಪತಿಗೆ ಸಕಲ ದ್ರವ್ಯಗಳನ್ನೂ ಸಮರ್ಪಣೆಮಾಡಿದರು.

೩೪. 'ಶ್ರೀಂ ಹ್ರೀಂ ಕ್ಲೀಂ ಗಣೇಶ್ವರಾಯ ಬ್ರಹ್ಮರೂಪಾಯ ಚಾರವೇ | ಸರ್ವಸಿದ್ಧಿಪ್ರದೇಶಾಯ ವಿಘ್ನೇಶಾಯ ನಮೋ ನಮಃ ||' ಎಂಬ ಮೂವತ್ತೆರಡಕ್ಷರದ ಈ ಮಂತ್ರವು ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ, ಸಕಲ ಸಿದ್ಧಿಯನ್ನೂ ಕೊಡಲು ಸಮರ್ಥವಾದುದು

೩೫. ಈ ಮಂತ್ರೋಪದೇಶ ಪಡೆದು ಐದುಲಕ್ಷಾವರ್ತಿ ಜಪಿಸುವುದರಿಂದ ಮಂತ್ರಸಿದ್ಧಿಯುಂಟಾಗುವುದು. ಭರತಖಂಡದಲ್ಲಿ ಈ ಮಂತ್ರಸಿದ್ಧಿಯನ್ನು ಪಡೆದವನು ಸಾಕ್ಷಾತ್ ವಿಷ್ಣುವೆನಿಸುವನು.

೩೬. ಅವನ ನಾಮಸ್ಮರಣಮಾತ್ರದಿಂದ ಸಕಲ ವಿಘ್ನಗಳೂ ಪರಿಹಾರವಾಗುವುದು. ಅವನು ಒಳ್ಳೆಯ ವಾಗ್ಮಿಯೂ, ಸಕಲೇಷ್ಟಾರ್ಥಸಿದ್ಧಿಯನ್ನು ಪಡೆದವನೂ ಆಗುವನು.

೩೭. ಈ ಮಂತ್ರಸಿದ್ಧಿಯನ್ನು ಪಡೆದವನಿಗೆ ಮಹಾಕವಿಶ್ರೇಷ್ಠನೂ, ಗುಣವಂತನೂ, ವಿದ್ವಾಂಸನೂ, ಗುರುಗಳಿಗೆಲ್ಲ ಆದಿಗುರುವೂ ಆದ ಸಾಕ್ಷಾತ್ ಬೃಹಸ್ಪತ್ಯಾಚಾರ್ಯನೇ ನಿಶ್ಚಯವಾಗಿಯೂ ಗುರುವಾಗುವನು

ಸಂಪೂಜ್ಯಾನೇನ ಮಂತ್ರೇಣ ದೇವಾ ಆನಂದಸಂಪ್ಲುತಾಃ ।
ನಾನಾವಿಧಾನಿ ವಾದ್ಯಾನಿ ವಾದಯಾಮಾಸುರುತ್ಸವೇ ॥ ೩೮ ॥

ಬ್ರಾಹ್ಮಣಾನ್ಭೋಜಯಾಮಾಸುಃ ಕಾರಯಾಮಾಸುರುತ್ಸವಂ ।
ದದುರ್ದಾನಾನಿ ತೇಭ್ಯಶ್ಚ ಬಂದಿಭ್ಯಶ್ಚ ವಿಶೇಷತಃ ॥ ೩೯ ॥

॥ ನಾರಾಯಣ ಉವಾಚ ॥

ಅಥ ವಿಷ್ಣುಃ ಸಭಾಮಧ್ಯೇ ತಂ ಸಂಪೂಜ್ಯ ಗಣೇಶ್ವರಂ ।
ತುಷ್ಟಾವ ಪರಯಾಭಕ್ತ್ಯಾ ಸರ್ವವಿಘ್ನವಿನಾಶಕಂ ॥ ೪೦ ॥

ಈಶ ತ್ವಾಂ ಸ್ತೋತುಮಿಚ್ಛಾಮಿ ಬ್ರಹ್ಮಜ್ಯೋತಿಃ ಸನಾತನಂ ।
ನೈವ ವರ್ಣಯಿತುಂ ಶಕ್ತೋಽಸ್ಮ್ಯನುರೂಪಮನೀಹಕಂ ॥ ೪೧ ॥

ಪ್ರವರಂ ಸರ್ವದೇವಾನಾಂ ಸಿದ್ಧಾನಾಂ ಯೋಗಿನಾಂ ಗುರುಂ ।
ಸರ್ವಸ್ವರೂಪಂ ಸರ್ವೇಶಂ ಜ್ಞಾನರಾಶಿಸ್ವರೂಪಿಣಂ ॥ ೪೨ ॥

---

೩೮. ಈ ಮಂತ್ರೋಚ್ಚಾರಣಪೂರ್ವಕವಾಗಿ ಗಣಪತಿಯನ್ನು ನಮಸ್ಕರಿಸಿ, ದೇವತೆಗಳೆಲ್ಲ ಆನಂದತುಂದಿಲರಾಗಿ, ನಾನಾವಿಧವಾದ ವಾದ್ಯಗಳನ್ನು ಮೊಳಗಿಸಿದರು.

೩೯. ಬ್ರಾಹ್ಮಣರಿಗೆಲ್ಲ ಮಿಷ್ಟಭೋಜನವಮಾಡಿಸಿ, ಅವರಿಗೂ ವಂದಿಮಾಗಧರಿಗೂ ವಿಶೇಷ ದಾನಗಳನ್ನು ಕೊಡಿಸಿ, ಆ ಮಹೋತ್ಸವವನ್ನು ಪರಿಸಮಾಪ್ತಿಗೊಳಿಸಿದರು.

೪೦. ನಾರಾಯಣ :—ಅನಂತರ ವಿಷ್ಣುವು, ಆ ದೇವತೆಗಳ ಸಭೆಯಲ್ಲಿ ಸರ್ವವಿಘ್ನಪರಿಹಾರಕನಾದ ಆ ಗಣೇಶನನ್ನು ಪರಮಭಕ್ತಿಯಿಂದ ಪೂಜಿಸಿ ಸ್ತುತಿಸಿದನು.

೪೧. ಎಲೈ ಜಗದೀಶನಾದ ಗಣಪತಿಯೇ, ಬ್ರಹ್ಮಜ್ಯೋತಿಃಸ್ವರೂಪನೂ ಸನಾತನನೂ ಆದ ನಿನ್ನನ್ನು ಸ್ತುತಿಸಬಯಸುತ್ತೇನೆ. ಆದರೆ ನಿರೀಹನಾದ ನಿನಗೆ ಅನುಗುಣವಾಗಿ ಸ್ತುತಿಸಲಶಕ್ತನಾಗಿರುವೆನು.

೪೨. ವೇದಸ್ತುತ್ಯನೂ, ಸಿದ್ಧಯೋಗಿಗಳ ಗುರುವೂ, ಜ್ಞಾನರಾಶಿರೂಪನೂ ಸರ್ವೇಶ್ವರನೂ ಆದ ನೀನು ಸರ್ವಸ್ವರೂಪನೂ ಸ್ವರಾಂತರ್ಯಾಮಿಯೂ, ಆಗಿರುವೆ.

ಅವ್ಯಕ್ತಮಕ್ಷರಂ ನಿತ್ಯಂ ಸತ್ಯಮಾತ್ಮಸ್ವರೂಪಿಣಂ ।
ವಾಯುತುಲ್ಯಂ ಚ ನಿರ್ಲಿಪ್ತಂ ಚಾಕ್ಷತಂ ಸರ್ವಸಾಕ್ಷಿಣಂ ॥ ೪೩ ॥

ಸಂಸಾರಾರ್ಣವಪಾರೇ ಚ ಮಾಯಾಪೋತೇ ಸುದುರ್ಲಭೇ ।
ಕರ್ಣಧಾರಸ್ವರೂಪಂ ಚ ಭಕ್ತಾನುಗ್ರಹಕಾರಕಂ ॥ ೪೪ ॥

ವರಂ ವರೇಣ್ಯಂ ವರದಂ ವರದಾನಾಮಪೀಶ್ವರಂ ।
ಸಿದ್ಧಂ ಸಿದ್ಧಿಸ್ವರೂಪಂ ಚ ಸಿದ್ಧಿದಂ ಸಿದ್ಧಿಸಾಧನಂ ॥ ೪೫ ॥

ಧ್ಯಾನಾತಿರಿಕ್ತಂ ಧ್ಯೇಯಂ ಚ ಧ್ಯಾನಾಸಾಧ್ಯಂ ಚ ಧಾರ್ಮಿಕಂ ।
ಧರ್ಮಸ್ವರೂಪಂ ಧರ್ಮಜ್ಞಂ ಧರ್ಮಾಧರ್ಮಫಲಪ್ರದಂ ॥ ೪೬ ॥

ಬೀಜಂ ಸಂಸಾರವೃಕ್ಷಾಣಾಮಂಕುರಂ ಚ ತದಾಶ್ರಯಂ ।
ಸ್ತ್ರೀಪುಂನಪುಂಸಕಾನಾಂ ಚ ರೂಪಮೇತದತೀಂದ್ರಿಯಂ ॥ ೪೭ ॥

---

೪೩. ನಾಶರಹಿತನಾದುದರಿಂದ ನಿತ್ಯನೂ, ಅವ್ಯಕ್ತನಾದುದರಿಂದ ಸತ್ಯಸ್ವರೂಪನೂ, ವಾಯುವಿನಂತೆ ನಿರ್ಲಿಪ್ತನೂ, ಸರ್ವಸಾಕ್ಷಿಯೂ ಆದ ಪರಮಾತ್ಮಸ್ವರೂಪನೇ ನೀನಾಗಿರುವೆ.

೪೪. ಭಕ್ತಾನುಗ್ರಹದಾಯಕನಾದ ನೀನು ಸಂಸಾರವೆಂಬ ಸಮುದ್ರವನ್ನು ಮಾಯೆಯೆಂಬ ದೋಣಿಯಿಂದ ದಾಟಿಸಲು ನಾವಿಕರೂಪನಾಗಿರುವೆ.

೪೫. ಸರ್ವಶ್ರೇಷ್ಠನಾದ ನೀನು ಭಕ್ತರಿಗೆ ಬೇಕಾದ ವರಗಳನ್ನು ಕೊಡುವವನೂ, ವರದಾನಿಗಳಲ್ಲಿ ಅಗ್ರಗಣ್ಯನೂ ಎನಿಸಿರುವೆ. ಸ್ವಯಂಸಿದ್ಧಸ್ವರೂಪನಾದ ನೀನು, ಸಕಲಸಿದ್ಧಿಗಳುಳ್ಳ ಸಾಧನವನ್ನೂ, ತನ್ಮೂಲಕ ಸಕಲ ಸಿದ್ಧಿಯನ್ನೂ ಅನುಗ್ರಹಿಸುವೆ.

೪೬. ಧರ್ಮಸ್ವರೂಪನೂ, ಧರ್ಮಜ್ಞನೂ, ಧರ್ಮಾಧರ್ಮಫಲಪ್ರದನೂ ಆದ ನೀನು ಧ್ಯಾನಕ್ಕೆ ಸಿಲುಕದವನೂ ಆದರೆ ಪರಮಧ್ಯೇಯನೂ ಆಗಿರುವೆ.

೪೭. ಸಂಸಾರವೆಂಬ ವೃಕ್ಷಕ್ಕೆ ಬೀಜಸ್ವರೂಪನೂ, ಅಂಕುರಸ್ವರೂಪನೂ, ಅದಕ್ಕೆ ಆಶ್ರಯನೂ ನೀನೇ ಆಗಿರುವುದರಿಂದ ಸ್ತ್ರೀ ಪುಂ ನಪುಂಸಕ ಭೇದವಿಲ್ಲದೆ, ಸರ್ವವ್ಯಾಪಿಯಾದರೂ ಅತೀಂದ್ರಿಯನಾಗಿರುವೆ.

ಸರ್ವಾದ್ಯಮಗ್ರಪೂಜ್ಯಂ ಚ ಸರ್ವಪೂಜ್ಯಂ ಗುಣಾರ್ಣವಂ ।
ಸ್ವೇಚ್ಛಯಾ ಸಗುಣಂ ಬ್ರಹ್ಮ ನಿರ್ಗುಣಂ ಸ್ವೇಚ್ಛಯಾ ಪುನಃ ॥ ೪೮ ॥

ಸ್ವಯಂ ಪ್ರಕೃತಿರೂಪಂ ಚ ಪ್ರಾಕೃತಂ ಪ್ರಕೃತೇಃ ಪರಂ ।
ತ್ವಾಂ ಸ್ತೋತುಮಕ್ಷಮೋಽನಂತಃ ಸಹಸ್ರವದನೈರಪಿ ॥ ೪೯ ॥

ನ ಕ್ಷಮಃ ಪಂಚವಕ್ತ್ರಶ್ಚ ನ ಕ್ಷಮಶ್ಚತುರಾನನಃ ।
ಸರಸ್ವತೀ ನ ಶಕ್ತಾ ಚ ನ ಶಕ್ತೋಽಹಂ ತವ ಸ್ತುತೌ ।
ನ ಶಕ್ತಾಶ್ಚ ಚತುರ್ವೇದಾಃ ಕೇ ವಾ ತೇ ವೇದವಾದಿನಃ ॥ ೫೦ ॥

ಇತ್ಯೇವಂ ಸ್ತವನಂ ಕೃತ್ವಾ ಮುನೀಶ ಸುರಸಂಸದಿ ।
ಸುರೇಶಶ್ಚ ಸುರೈಃ ಸಾರ್ಧಂ ವಿರರಾಮ ರಮಾಪತಿಃ ॥ ೫೧ ॥

---

೪೮. ಎಲ್ಲರಿಗಿಂತ ಮೊದಲು ಪೂಜೆಗೊಳ್ಳುವವನೂ, ಎಲ್ಲರಿಂದ ಪೂಜ್ಯನೂ, ಗುಣಗಣಿಯೂ, ಆದ ನೀನು ಸ್ವೇಚ್ಛಾಮಯಿಯಾದುದರಿಂದ ಸಗುಣನಾಗಿ ಕಂಡರೂ ವಸ್ತುತಃ ನಿರ್ಗುಣನಾಗಿರುವೆ.

೪೯. ಪ್ರಕೃತಿಸ್ವರೂಪನೂ, ಪ್ರಾಕೃತನೂ, ಪ್ರಕೃತಿಗಿಂತ ಪರನೂ ಆದ ನಿನ್ನನ್ನು ಆದಿಶೇಷನು ತನ್ನ ಸಾವಿರ ಬಾಯಿಗಳಿಂದಲೂ ಸ್ತುತಿಸಲಾರನು.

೫೦. ಐದುಮುಖವುಳ್ಳ ಈಶ್ವರನಾಗಲೀ, ಚತುರ್ಮುಖಬ್ರಹ್ಮನಾಗಲೀ, ವಾಗಧಿದೇವತೆಯಾದ ಸರಸ್ವತಿಯಾಗಲೀ, ಸರ್ವಾಂತರ್ಯಾಮಿಯಾದ ನಾನಾಗಲೀ, ಚತುರ್ವೇದಗಳಾಗಲೀ, ನಿನ್ನನ್ನು ಸ್ತುತಿಸಲಾಗದಿರುವಾಗ, ಕೇವಲ ವೇದವಾದಿಗಳೆನಿಸಿರುವ ಇತರರ ಪಾಡೇನು ?

೫೧. ಲಕ್ಷ್ಮೀರಮಣನಾದ ವಿಷ್ಣುವು ಆ ದೇವಮುನಿಗಳ ಸಭೆಯಲ್ಲಿ ಗಣೇಶನನ್ನು ಈ ರೀತಿಯಾಗಿ ಸ್ತುತಿಸಿ ಸಕಲ ದೇವತೆಗಳೊಡನೆ ಸುಮ್ಮನೆ ಕುಳಿತನು.

ಇದಂ ವಿಷ್ಣುಕೃತಂ ಸ್ತೋತ್ರಂ ಗಣೇಶಸ್ಯ ಚ ಯಃ ಪಠೇತ್ ।
ಸಾಯಂಪ್ರಾತಶ್ಚ ಮಧ್ಯಾಹ್ನೇ ಭಕ್ತಿಯುಕ್ತಃ ಸಮಾಹಿತಃ ॥ ೫೨ ॥

ತದ್ವಿಘ್ನನಾಶಂ ಕುರುತೇ ವಿಘ್ನೇಶಃ ಸತತಂ ಮುನೇ ।
ವರ್ಧತೇ ಸರ್ವಕಲ್ಯಾಣಂ ಕಲ್ಯಾಣಜನಕಃ ಸದಾ ॥ ೫೩ ॥

ಯಾತ್ರಾಕಾಲೇ ಪಠಿತ್ವಾ ಯೋ ಯಾತಿ ತದ್ಭಕ್ತಿಪೂರ್ವಕಂ ।
ತಸ್ಯ ಸರ್ವಾಭೀಷ್ಟಸಿದ್ಧಿರ್ಭವತ್ಯೇವ ನ ಸಂಶಯಃ ॥ ೫೪ ॥

ತೇನ ದೃಷ್ಟಂ ಚ ದುಸ್ಸ್ವಪ್ನಂ ಸುಸ್ವಪ್ನಮುಪಜಾಯತೇ ।
ಕದಾಪಿ ನ ಭವೇತ್ತಸ್ಯ ಗ್ರಹಪೀಡಾ ಚ ದಾರುಣಾ ॥ ೫೫ ॥

ಭವೇದ್ವಿನಾಶಃ ಶತ್ರೂಣಾಂ ಬಂಧೂನಾಂ ಚಾಪಿ ವರ್ಧನಂ ।
ಶಶ್ವದ್ವಿಘ್ನವಿನಾಶಶ್ಚ ಶಶ್ವತ್ಸಮ್ಪದ್ವಿವರ್ಧನಂ ॥ ೫೬ ॥

---

೫೨–೫೩. ವಿಷ್ಣುಕೃತವಾದ ಗಣೇಶನ ಈ ಸ್ತೋತ್ರವನ್ನು ಯಾರು ಪ್ರಾತಃಕಾಲ, ಮಧ್ಯಾಹ್ನ, ಮತ್ತು ಸಾಯಂಕಾಲಗಳಲ್ಲಿ ಶುಚಿರ್ಭೂತರಾಗಿ ಭಕ್ತಿಯಿಂದ ಸ್ತುತಿಸುವರೋ ಅವರ ಸಕಲ ವಿಘ್ನಗಳನ್ನೂ ವಿಘ್ನೇಶ್ವರನು ಪರಿಹರಿಸಿ, ಸಮಸ್ತ ಮಂಗಳಗಳನ್ನೂ ಅಭಿವೃದ್ಧಿಗೊಳಿಸುವನು.

೫೪. ಪ್ರಯಾಣಕಾಲದಲ್ಲಿ ಈ ಸೋತ್ರವನ್ನು ಭಕ್ತಿಪೂರ್ವಕವಾಗಿ ಭಜಿಸುವವರಿಗೆ ಸಕಲ ಇಷ್ಟಾರ್ಥಸಿದ್ಧಿಯೂ ಉಂಟಾಗುವುದರಲ್ಲಿ ಸಂಶಯವಿಲ್ಲ

೫೫. ಈ ಸೋತ್ರವನ್ನು ಪಠಿಸುವವನು ಕಂಡ ದುಃಸ್ವಪ್ನವೆಲ್ಲವೂ ಸುಸ್ವಪ್ನವಾಗಿ ಪರಿಣಮಿಸುವುದು. ಅವನಿಗೆ ಯಾವಾಗಲೂ ದಾರುಣವಾದ ಗ್ರಹಪೀಡೆಯುಂಟಾಗುವುದಿಲ್ಲ.

೫೬. ಅವನ ಶತ್ರುಗಳ ವಿನಾಶವೂ ಬಂಧುಗಳ ಅಭಿವೃದ್ಧಿಯೂ ಉಂಟಾಗುವುದಲ್ಲದೆ ‘ ಸಕಲವಿಘ್ನಗಳೂ ಪರಿಹಾರವಾಗಿ ಸರ್ವತೋಮುಖವಾದ ಅಭಿವೃದ್ಧಿಯುಂಟಾಗುವುದು.

ಸ್ಥಿರಾ ಭವೇದ್ಗೃಹೇ ಲಕ್ಷ್ಮೀಃ ಪುತ್ರಪೌತ್ರವಿವರ್ಧನಂ ।
ಸರ್ವೈಶ್ವರ್ಯಮಿಹ ಪ್ರಾಪ್ಯ ಹ್ಯಂತೇ ವಿಷ್ಣುಪದಂ ಲಭೇತ್ ॥ ೫೭ ॥

ಫಲಂ ಚಾಪಿ ಚ ತೀರ್ಥಾನಾಂ ಯಜ್ಞಾನಾಂ ಯದ್ಭವೇದ್ಧ್ರುವಂ ।
ಮಹತಾಂ ಸರ್ವದಾನಾನಾಂ ತದ್ಗಣೇಶಪ್ರಸಾದತಃ ॥ ೫೮ ॥

॥ ನಾರದ ಉವಾಚ ॥

ಶ್ರುತಂ ಸ್ತೋತ್ರಂ ಗಣೇಶಸ್ಯ ಪೂಜನಂ ಚ ಮನೋಹರಂ ।
ಕವಚಂ ಶ್ರೋತುಮಿಚ್ಛಾಮಿ ಸಾಂಪ್ರತಂ ಭವತಾರಣಂ ॥ ೫೯ ॥

॥ ನಾರಾಯಣ ಉವಾಚ ॥

ಪೂಜಾಯಾಂ ಸುನಿವೃತ್ತಾಯಾಂ ಸಭಾಮಧ್ಯೇ ಶನೈಶ್ಚರಃ ।
ಉವಾಚ ವಿಷ್ಣುಂ ಸರ್ವೇಷಾಂ ತಾರಕಂ ಜಗತಾಂ ಗುರುಂ ॥ ೬೦ ॥

೫೭. ಅವನ ಮನೆಯಲ್ಲಿ ಲಕ್ಷ್ಮಿಯು ಸರ್ವದಾ ನಲೆಸಿರುವಳಲ್ಲದೆ ಅವನಿಗೆ ಪುತ್ರ ಪೌತ್ರಾದಿಗಳೂ, ಸಕಲ ಸೌಭಾಗ್ಯ ಸಂಪತ್ತುಗಳೂ, ಇಹದಲ್ಲಿ ದೊರೆತು ದೇಹಾವಸಾನದಲ್ಲಿ ಮುಕ್ತಿಯು ದೊರೆಯುವುದು

೫೮. ಸಕಲ ತೀರ್ಥಯಾತ್ರೆಗಳಿಂದಲೂ, ಸಕಲ ಯಜ್ಞಾಚರಣೆಯಿಂದಲೂ, ಸರ್ವಸ್ವದಾನದಿಂದಲೂ ಮಹಾತ್ಮರಿಗೆ ಯಾವ ಸತ್ಫಲವು ಲಭಿಸುವುದೋ ಅವೆಲ್ಲವೂ ಗಣೇಶನ ಅನುಗ್ರಹದಿಂದ ಲಭಿಸುವುದು.

೫೯. ನಾರದ :—ಎಲೈ ನಾರಾಯಣ ಮಹರ್ಷಿಯೇ, ನಿನ್ನ ಅನುಗ್ರಹದಿಂದ ಗಣೇಶನ ಪೂಜಾಕ್ರಮವನ್ನೂ, ಸ್ತೋತ್ರವನ್ನೂ ಕೇಳಿ ತಿಳಿದುಕೊಂಡೆನು. ಈಗ ಸಂಸಾರತಾರಕವಾದ ಗಣೇಶಕವಚವನ್ನು ಕೇಳಬಯಸುತ್ತೇನೆ.

೬೦. ನಾರಾಯಣ :—ಮೇಲೆ ಹೇಳಿದ ಕ್ರಮದಲ್ಲಿ ಗಣೇಶನ ಪೂಜೆಯು ಸಾಂಗವಾಗಿ ನೆರವೇರಲು, ಸಭಾಮಧ್ಯದಲ್ಲಿದ್ದ ಶನೀಶ್ವರನು ಜಗದ್ಗುರುವೂ, ಸರ್ವೋದ್ಧಾರಕನೂ ಆದ ವಿಷ್ಣುವನ್ನು ಕುರಿತಿಂತೆಂದನು.

॥ ಶನೈಶ್ಚರ ಉವಾಚ ॥

ಸರ್ವದುಃಖವಿನಾಶಾಯ ಪಾಪಪ್ರಶಮನಾಯ ಚ ।
ಕವಚಂ ವಿಘ್ನನಿಘ್ನಸ್ಯ ವದ ವೇದವಿದಾಂ ವರ ॥ ೬೧ ॥

ಬಭೂವ ನೋ ವಿವಾದಶ್ಚ ಶಕ್ತ್ಯಾ ವೈ ಮಾಯಯಾ ಸಹ ।
ತದ್ವಿಘ್ನಪ್ರಶಮಾರ್ಥಂ ಚ ಕವಚಂ ಧಾರಯಾಮ್ಯಹಂ ॥ ೬೨ ॥

॥ ಶ್ರೀ ವಿಷ್ಣುರುವಾಚ ॥

ವಿನಾಯಕಸ್ಯ ಕವಚಂ ತ್ರಿಷು ಲೋಕೇಷು ದುರ್ಲಭಂ ।
ಸುಗೋಪ್ಯಂ ಚ ಪುರಾಣೇಷು ದುರ್ಲಭಂ ಚಾಗಮೇಷು ಚ ॥ ೬೩ ॥

ಉಕ್ತಂ ಕೌಥುಮಶಾಖಾಯಾಂ ಸಾಮವೇದೇ ಮನೋಹರಂ ।
ಕವಚಂ ವಿಘ್ನನಾಥಸ್ಯ ಸರ್ವವಿಘ್ನಹರಂ ಪರಂ ॥ ೬೪ ॥

೬೧. ಶನೈಶ್ಚರ :—ಎಲೈ ವೇದಜ್ಞಾನಿಗಳಲ್ಲಿ ಶ್ರೇಷ್ಠನಾದ ವಿಷ್ಣುವೇ, ಸಕಲದು:ಖನಾಶಕ್ಕೂ, ಪಾಪಪರಿಹಾರಕ್ಕೂ ಕಾರಣವಾದ ವಿಘ್ನೇಶ್ವರನ ಕವಚವನ್ನು ದಯವಿಟ್ಟು ಹೇಳು.

೬೨. ಮಾಯಾಶಕ್ತಿಗೂ ನನಗೂ ಅನೇಕ ವಾದವಿವಾದವುಂಟಾಯಿತು. ಆಕೆಯಿಂದ ನನಗುಂಟಾಗಬಹುದಾದ ವಿಘ್ನಪರಿಹಾರಕ್ಕಾಗಿ ನಾನು ವಿಘ್ನೇಶನ ಕವಚವನ್ನು ಧಾರಣೆಮಾಡುವೆನು.

೬೩. ಶ್ರೀವಿಷ್ಣು :—ಎಲೈ ಶನೀಶ್ವರನೇ ಕೇಳು. ವಿನಾಯಕನ ಕವಚವು ತ್ರಿಲೋಕದಲ್ಲಿಯೂ ಸುಲಭವಾಗಿ ದೊರೆಯದು. ಪುರಾಣಗಳಲ್ಲೂ ಅತ್ಯಂತ ಗೋಪ್ಯವಾಗಿರುವುದು.

೬೪. ವಿಘ್ನೇಶ್ವರನ ಸಕಲರ ವಿಘ್ನನಾಶಕವಾದ ಈ ಕವಚವು ಸಾಮವೇದದ ಕೌಥಮಶಾಖೆಯಲ್ಲಿ ಮನೋಹರವಾಗಿ ಉಕ್ತವಾಗಿದೆ.

ರಾಜ್ಯಂ ದೇಯಂ ಶಿರೋ ದೇಯಂ ಪ್ರಾಣಾ ದೇಯಾಶ್ಚ ಸೂರ್ಯಜ ।
ಏವಂ ಭೂತಂ ಚ ಕವಚಂ ನ ದೇಯಂ ಪ್ರಾಣಸಂಕಟೇ ॥ ೬೫ ॥

ಆವಿರ್ಭಾವಸ್ತಿರೋಭಾವಃ ಸ್ವೇಚ್ಛಯಾ ಯಸ್ಯ ಮಾಯಯಾ ।
ನಿತ್ಯೋಽಯಮೇಕದಂತಶ್ಚ ಕವಚಂ ಚಾಸ್ಯ ವತ್ಸಕ ॥ ೬೬ ॥

ಪೂಜಾಽಸ್ಯ ನಿತ್ಯಾ ಸ್ತೋತ್ರಂ ಚ ಕಲ್ಪೇ ಕಲ್ಪೇಽಸ್ತಿ ಸಂತತಂ ।
ಅಸ್ಯ ವೈ ಜನ್ಮನಃ ಪೂರ್ವಂ ಮುನಯಶ್ಚ ಸಿಷೇವಿರೇ ॥ ೬೭ ॥

ಯಥಾ ಮದವತಾರೇಷು ಜನ್ಮವಿಗ್ರಹಧಾರಣಂ ।
ತಥಾ ಗಣೇಶ್ವರಸ್ಯಾಪಿ ಜನ್ಮ ಶೈಲಸುತೋದರೇ ॥ ೬೮ ॥

ಯದ್ಧೃತ್ವಾ ಮುನಯಃ ಸರ್ವೇ ಜೀವನ್ಮುಕ್ತಾಶ್ಚ ಭಾರತೇ ।
ನಿಶ್ಶಂಕಾಶ್ಚ ಸುರಾಃ ಸರ್ವೇ ಶತ್ರುಪಕ್ಷವಿಮರ್ದಕಾಃ ॥ ೬೯ ॥

೬೫ ಎಲೈ ಸೂರ್ಯಪುತ್ರನಾದ ಶನೀಶ್ವರನೇ, ರಾಜ್ಯವನ್ನಾಗಲೀ ತನ್ನ ತಲೆಯನ್ನಾಗಲಿ, ಪ್ರಾಣಗಳನ್ನಾಗಲೀ ಮತ್ತೊಬ್ಬರಿಗೆ ಕೊಡಬಹುದು. ಆದರೆ ಈ ರೀತಿಯಾದ ಕವಚವನ್ನು ಪ್ರಾಣಸಂಕಟ ಕಾಲದಲ್ಲಿಯೂ ಮತ್ತೊಬ್ಬರಿಗೆ ಉಪದೇಶಿಸಕೂಡದು.

೬೬. ಯಾರ ಮಾಯಾಮಹಿಮೆಯಿಂದ ಸ್ವೇಚ್ಛೆಯಾಗಿ ಹುಟ್ಟುಸಾವುಗಳುಂಟಾಗುವುವೋ, ಆ ಏಕದಂತನೂ, ಅವನ ಕವಚವೂ ನಿತ್ಯವಾದುದು.

೬೭. ಈ ಗಣಪತಿಯ ಪೂಜಾಸ್ತೋತ್ರಗಳು ಪ್ರತಿ ಕಲ್ಪದಲ್ಲಿಯೂ ನಿತ್ಯವಾಗಿರುವುದು. ಪ್ರತಿ ಜನ್ಮದಲ್ಲಿಯೂ ಈ ಗಣಪತಿಯನ್ನು ಮುನಿಗಳು ಸೇವಿಸುತ್ತಲೇ ಇರುವರು.

೬೮. ನಾನು ಮಾನುಷಾದಿ ಜನ್ಮವೆತ್ತಿ ಶರೀರಧಾರಣೆ ಮಾಡುವಂತೆಯೇ ಗಣಪತಿಯೂ ಕೂಡ ಪಾರ್ವತಿಯ ಉದರದಲ್ಲಿ ಅವತರಿಸಿ ವಿಗ್ರಹವನ್ನು ಧರಿಸಿರುವನು.

೬೯. ಯಾವ ಗಣಪತಿಯ ಕವಚವನ್ನು ಧಾರಣೆಮಾಡಿದ ಭರತಖಂಡದಲ್ಲಿರುವ ಸಕಲ ಮುನಿಗಳೂ ಜೀವನ್ಮುಕ್ತರಾಗವರು. ದೇವತೆಗಳೂ ಕೂಡ ಈ ಕವಚ ಧಾರಣೆಮಾಡಿ ನಿರ್ಭೀತರಾಗಿ ಶತ್ರುಗಳಾದ ರಾಕ್ಷಸರನ್ನು ಸಂಹರಿಸಿದರು.

ಕವಚಂ ಬಿಭ್ರತಾಂ ಮೃತ್ಯುರ್ನ ಭಿಯೋ ಯಾತಿ ಸನ್ನಿಧಿಂ ।
ನಾಯುರ್ವ್ಯಯೋ ನಾಶುಭಂ ಚ ಬ್ರಹ್ಮಾಂಡೇ ನ ಪರಾಜಯಃ ॥ ೨೦ ॥

ದಶಲಕ್ಷಜಪೇನೈವ ಸಿದ್ಧಂ ತು ಕವಚಂ ಭವೇತ್ ।
ಯೋ ಭವೇತ್ಸಿದ್ಧಕವಚೋ ಮೃತ್ಯುಂ ಜೇತುಂ ಸ ಚ ಕ್ಷಮಃ ॥ ೨೧ ॥

ಸುಸಿದ್ಧಕವಚೋ ವಾಗ್ಮೀ ಚಿರಂಜೀವೀ ಮಹೀತಲೇ ।
ಸರ್ವತ್ರ ವಿಜಯೀ ಪೂಜ್ಯೋ ಭವೇದ್ಗ್ರಹಣಮಾತ್ರತಃ ॥ ೨೨ ॥

ಮಾಲಾಮಂತ್ರಮಿಮಂ ಪುಣ್ಯಂ ಕವಚಂ ಮಂಗಲಂ ಶುಭಂ ।
ಬಿಭ್ರತಾಂ ಸರ್ವಪಾಪಾನಿ ಪ್ರಣಶ್ಯಂತಿ ಸುನಿಶ್ಚಿತಂ ॥ ೨೩ ॥

ಭೂತಪ್ರೇತಪಿಶಾಚಾಶ್ಚ ಕೂಷ್ಮಾಂಡಾ ಬ್ರಹ್ಮರಾಕ್ಷಸಾಃ ।
ಡಾಕಿನೀ ಯೋಗಿನೀ ಯಕ್ಷವೇತಾಲಾಭ್ಯೈರವಾದಯಃ ॥ ೨೪ ॥

---

೨೦ ಈ ಕವಚಧಾರಣೆಮಾಡಿದವರ ಸಮೀಪಕ್ಕೆ ಮೃತ್ಯುವು ಸುಳಿಯುವುದೂ ಇಲ್ಲ. ಅಷ್ಟೇಕೆ ಅವರಿಗೆ ಅಮಂಗಳಗಳಾಗಲೀ, ಆಯುಃಕ್ಷೀಣತೆಯಾಗಲೀ ಉಂಟಾಗುವುದಿಲ್ಲ. ಬ್ರಹ್ಮಾಂಡವೂ ಅವರನ್ನು ಎದುರಿಸಲಾರದು.

೨೧. ಹತ್ತು ಲಕ್ಷಾವರ್ತಿ ಜಪಿಸುವುದರಿಂದ ಈ ಕವಚವು ಸಿದ್ಧಿಸುವುದು. ಈ ಕವಚಸಿದ್ಧಿಯನ್ನು ಪಡೆದವರು ಮೃತ್ಯುವನ್ನೂ ಜಯಿಸಬಲ್ಲರು.

೨೨ ಚೆನ್ನಾಗಿ ಕವಚಸಿದ್ಧಿಯನ್ನು ಪಡೆದವನು ಭೂಮಂಡಲದಲ್ಲಿ ಚಿರಂಜೀವಿಯೂ, ಒಳ್ಳೆಯ ವಾಗ್ಮಿಯೂ ಆಗುವನು. ಈ ಕವಚೋಪದೇಶವನ್ನು ಸ್ವೀಕರಿಸಿದ ಮಾತ್ರದಿಂದಲೇ, ಎಲ್ಲೆಲ್ಲೂ ಪೂಜ್ಯನೂ ಜಯಶಾಲಿಯೂ ಆಗುವನು

೨೩. ಪುಣ್ಯಕರವೂ, ಮಂಗಳದಾಯಕವೂ ಆದ ಈ ಗಣೇಶಕವಚವನ್ನೂ ಮೂವತ್ತೆರಡಕ್ಷರದ ಮಾಲಾಮಂತ್ರವನ್ನೂ ಧರಿಸಿರುವವರ ಸಕಲ ಪಾಪಗಳೂ ನಿಶ್ಚಿತವಾಗಿಯೂ ಪರಿಹಾರವಾಗುವುವು.

೨೪–೨೫. ಗಣೇಶಕವಚದ ಹೆಸರನ್ನು ಕೇಳಿದ ಮಾತ್ರದಿಂದಲೇ, ಭೂತಪ್ರೇತಪಿಶಾಚಾದಿಗಳೂ, ಕೂಷ್ಮಾಂಡ ಬ್ರಹ್ಮರಾಕ್ಷಸರೂ, ಡಾಕಿನಿಯೋಗಿನಿಯರೂ,

ಬಾಲಗ್ರಹಾ ಗ್ರಹಾಶ್ಚೈವ ಕ್ಷೇತ್ರಪಾಲಾದಯಸ್ತಥಾ ।
ಸರ್ವೇ ಶಬ್ದಮಾತ್ರೇಣ ಪಲಾಯಂತೇ ಚ ಭೀರವಃ ॥ ೭೫ ॥

ಆಧಯೋ ವ್ಯಾಧಯಶ್ಚೈವ ಶೋಕಾಶ್ಚೈವ ಭಯಾವಹಾಃ ।
ನ ಯಾಂತಿ ಸನ್ನಿಧಿಂ ತೇಷಾಂ ಗರುಡಸ್ಯ ಯಥೋರಗಾಃ ॥ ೭೬ ॥

ಋಜವೇ ಗುರುಭಕ್ತಾಯ ಸ್ವಶಿಷ್ಯಾಯ ಪ್ರಕಾಶಯೇತ್ ।
ಖಲಾಯ ಪರಶಿಷ್ಯಾಯ ದತ್ವಾ ಮೃತ್ಯುಮವಾಪ್ನುಯಾತ್ ॥ ೭೭ ॥

ಸಂಸಾರಮೋಹಕಸ್ಯಾಸ್ಯ ಕವಚಸ್ಯ ಪ್ರಜಾಪತಿಃ ।
ಋಷಿಶ್ಛಂದಶ್ಚ ಬೃಹತೀ ದೇವೋ ಲಂಬೋದರಃ ಸ್ವಯಂ ।
ಧರ್ಮಾರ್ಥಕಾಮಮೋಕ್ಷೇಷು ವಿನಿಯೋಗಃ ಪ್ರಕೀರ್ತಿತಃ ॥ ೭೮ ॥

---

ಯಕ್ಷವೇತಾಲ ಭೈರವಾದಿಗಳೂ, ಬಾಲಗ್ರಹ, ನವಗ್ರಹ ಮತ್ತು ಕ್ಷೇತ್ರಪಾಲಾದಿಗಳೂ ಭಯಗೊಂಡು ಓಡುವರು.

೭೬. ಗರುಡನ ಸಮೀಪಕ್ಕೆ ಸರ್ಪಗಳು ಬಾರದಿರುವಂತೆ, ಈ ಕವಚ ಧಾರಣೆಮಾಡಿರುವವನ ಸಮೀಪಕ್ಕೆ ಮನೋರೋಗ ಮತ್ತು ಶಾರೀರಕ ರೋಗಗಳೂ ಭಯಂಕರವಾದ ಕಷ್ಟಗಳೂ ಬಾರವು.

೭೭. ಈ ಕವಚವನ್ನು ಸನ್ಮಾರ್ಗಗಾಮಿಯೂ, ಅಂತರಂಗದಲ್ಲಿ ಗುರುಭಕ್ತಿಯುಳ್ಳವನೂ ಆದ ಪ್ರಿಯಶಿಷ್ಯನಿಗೆ ಮಾತ್ರ ಉಪದೇಶಿಸಬೇಕು. ದುಷ್ಟನೂ ಇತರರ ಶಿಷ್ಯನೂ ಆದವನಿಗೆ ಉಪದೇಶಿಸುವುದರಿಂದ ತನಗೆ ಮರಣ ಸಂಭವಿಸುವುದು.

೭೮. ಸಂಸಾರವನ್ನೆಲ್ಲ ಮೋಹಗೊಳಿಸುವ ಈ ಗಣೇಶಕವಚಕ್ಕೆ ಪ್ರಜಾಪತಿಯೇ ಋಷಿಯು, ಬೃಹಸ್ಪತಿಯೇ ಛಂದಸ್ಸು. ಸ್ವಯಂ ಲಂಬೋದರನೇ ದೇವತೆಯು. ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ ಈ ಕವಚದ ವಿನಿಯೋಗವು.

ಸರ್ವೇಷಾಂ ಕವಚಾನಾಂ ಚ ಸಾರಭೂತಮಿದಂ ಮುನೇ।
ಓಂ ಗಂ ಹುಂ ಶ್ರೀ ಗಣೇಶಾಯ ಸ್ವಾಹಾ ಮೇ ಪಾತು ಮಸ್ತಕಂ।
ದ್ವಾತ್ರಿಂಶದಕ್ಷರೋ ಮಂತ್ರೋ ಲಲಾಟಂ ಮೇ ಸದಾವತು ॥ ೭೯ ॥

ಓಂ ಹ್ರೀಂ ಕ್ಲೀಂ ಶ್ರೀಂ ಗಮಿತಿ ವೈ ಸಂತತಂ ಪಾತು ಲೋಚನಂ।
ತಾಲುಕಂ ಪಾತು ವಿಘ್ನೇಶಃ ಸತತಂ ಧರಣೀತಲೇ ॥ ೮೦ ॥

ಓಂ ಹ್ರೀಂ ಶ್ರೀಂ ಕ್ಲೀಮಿತಿ ಪರಂ ಸಂತತಂ ಪಾತು ನಾಸಿಕಾಂ।
ಓಂ ಗೌಂ ಗಂ ಶೂರ್ಪಕರ್ಣಾಯ ಸ್ವಾಹಾ ಪಾತ್ವಧರಂ ಮಮ।
ದಂತಾಂಶ್ಚ ತಾಲುಕಾಂ ಜಿಹ್ವಾಂ ಪಾತು ಮೇ ಷೋಡಶಾಕ್ಷರಃ ॥ ೮೧ ॥

ಓಂ ಲಂ ಶ್ರೀಂ ಲಂಬೋದರಾಯೇತಿ ಸ್ವಾಹಾ ಗಂಡಂ ಸದಾವತು।
ಓಂ ಕ್ಲೀಂ ಹ್ರೀಂ ವಿಘ್ನನಾಶಾಯ ಸ್ವಾಹಾ ಕರ್ಣಂ ಸದಾವತು ॥ ೮೨ ॥

---

೭೯. ಎಲೈ ನಾರದನೇ, ಎಲ್ಲ ಕವಚಗಳಿಗಿಂತಲೂ ಇದು ಅತ್ಯಂತ ಸಾರಭೂತವಾದುದು. 'ಓಂ ಗಂ, ಹುಂ, ಶ್ರೀ ಗಣೇಶಾಯ ಸ್ವಾಹಾ' ಎಂಬ ಈ ದಶಾಕ್ಷರ ಮಂತ್ರವು ನನ್ನ ತಲೆಯನ್ನೂ (ಹಿಂದೆ ಹೇಳಿದ ಮುವ್ವತ್ತೆರಡಕ್ಷರದ ಮಂತ್ರವು ನನ್ನ ಹಣೆಯನ್ನೂ) ರಕ್ಷಿಸಲಿ

೮೦. 'ಓಂ, ಹ್ರೀಂ, ಕ್ಲೀಂ, ಶ್ರೀಂ, ಗಂ' ಎಂಬ ಪಂಚಾಕ್ಷರೀ ಮಂತ್ರವು ನನ್ನ ಕಣ್ಣುಗಳನ್ನು ಕಾಪಾಡಲಿ. ವಿಘ್ನೇಶನು ನನ್ನ ತಾಲು (ಅಂಗಳು) ಗಳನ್ನು ಭೂಮಂಡಲದಲ್ಲಿರುವವರೆಗೂ ರಕ್ಷಿಸಲಿ.

೮೧. 'ಓಂ, ಶ್ರೀಂ, ಹ್ರೀಂ, ಕ್ಲೀಂ' ಎಂಬ ಬೀಜಾಕ್ಷರಮಂತ್ರವು ನನ್ನ ಮೂಗನ್ನೂ, 'ಓಂ, ಗೌಂ, ಗಂ, ಶೂರ್ಪಕರ್ಣಾಯ ಸ್ವಾಹಾ' ಎಂಬ ಮಂತ್ರವು ಕೆಳತುಟಿಯನ್ನೂ, ಮಾಲಾಮಂತ್ರಾರ್ಧವಾದ ಹದಿನಾರಕ್ಷರದ ಮಂತ್ರವು, ಹಲ್ಲು. ತಾಲು, ಮತ್ತು ನಾಲಗೆಗಳನ್ನೂ ಕಾಪಾಡಲಿ.

೮೨. 'ಓಂ, ಲಂ, ಶ್ರೀಂ, ಲಂಬೋದರಾಯ ಸ್ವಾಹಾ' ಎಂಬ ಮಂತ್ರವು ಕಪೋಲಗಳನ್ನೂ, ಓಂ ಕ್ಲೀಂ ಹ್ರೀಂ ವಿಘ್ನನಾಶಾಯ ಸ್ವಾಹಾ, ಎಂಬ ಮಂತ್ರವು ಕಿವಿಗಳನ್ನೂ ಸರ್ವದಾ ಕಾಪಾಡಲಿ.

ಓಂ ಶ್ರೀಂ ಗಂ ಗಜಾನನಾಯೇತಿ ಸ್ವಾಹಾ ಸ್ಕಂಧಂ ಸದಾವತು ।
ಓಂ ಹ್ರೀಂ ವಿನಾಯಕಾಯೇತಿ ಸ್ವಾಹಾ ಪೃಷ್ಠಂ ಸದಾವತು ॥ ೮೩ ॥

ಓಂ ಕ್ಲೀಂ ಹ್ರೀಮಿತಿ ಕಂಕಾಲಂ ಪಾತು ವಕ್ಷಃ ಸ್ಥಲಂ ಪರಂ ।
ಕರೌ ಪಾದೌ ಸದಾ ಪಾತು ಸರ್ವಾಂಗಂ ವಿಘ್ನನಾಶಕೃತ್ ॥ ೮೪ ॥

ಪ್ರಾಚ್ಯಾಂ ಲಂಬೋದರಃ ಪಾತು ಚಾಗ್ನೇಯ್ಯಾಂ ವಿಘ್ನನಾಯಕಃ ।
ದಕ್ಷಿಣೇ ಪಾತು ವಿಘ್ನೇಶೋ ನೈರ್ಋತ್ಯಾಂ ತು ಗಜಾನನಃ ॥ ೮೫ ॥

ಪಶ್ಚಿಮೇ ಪಾರ್ವತೀಪುತ್ರೋ ವಾಯವ್ಯಾಂ ಶಂಕರಾತ್ಮಜಃ ।
ಕೃಷ್ಣಸ್ಯಾಂಶಶ್ಚೋತ್ತರೇ ಚ ಪರಿಪೂರ್ಣತಮಸ್ಯ ಚ ॥ ೮೬ ॥

ಐಶಾನ್ಯಾಮೇಕದಂತಶ್ಚ ಹೇರಂಬಃ ಪಾತು ಚೋರ್ಧ್ವತಃ ।
ಅಧೋ ಗಣಾಧಿಪಃ ಪಾತು ಸರ್ವಪೂಜ್ಯಶ್ಚ ಸರ್ವತಃ ।
ಸ್ವಪ್ನೇ ಜಾಗರಣೇ ಚೈವ ಪಾತು ಮಾಂ ಯೋಗಿನಾಂ ಗುರುಃ ॥ ೮೭ ॥

---

೮೩. 'ಓಂ, ಶ್ರೀಂ, ಗಂ, ಗಜಾನನಾಯ ಸ್ವಾಹಾ' ಎಂಬ ಮಂತ್ರವು ಹೆಗಲುಗಳನ್ನೂ 'ಓಂ, ಹ್ರೀಂ, ವಿನಾಯಕಾಯ ಸ್ವಾಹಾ' ಎಂಬ ಮಂತ್ರವು ಪೃಷ್ಠ ಭಾಗವನ್ನೂ ಸರ್ವದಾ ರಕ್ಷಿಸಲಿ.

೮೪. 'ಓಂ, ಕ್ಲೀಂ, ಹ್ರೀಂ, ಎಂಬ ಮಂತ್ರವು ಮೂಳೆಗಳನ್ನೂ ವಕ್ಷಃ ಸ್ಥಳವನ್ನೂ ಕಾಪಾಡಲಿ. ವಿಘ್ನನಾಶಕನು ಕೈಕಾಲುಗಳನ್ನೂ ಸಕಲಾಂಗಗಳನ್ನೂ ಸರ್ವದಾ ಕಾಪಾಡಲಿ.

೮೫-೮೭. ಪೂರ್ವದಿಕ್ಕಿದಲ್ಲಿ ಲಂಬೋದರನೂ, ಆಗ್ನೇಯದಲ್ಲಿ ವಿಘ್ನ ನಾಯಕನೂ ದಕ್ಷಿಣದಲ್ಲಿ ವಿಘ್ನೇಶನೂ, ನೈಋತ್ಯದಲ್ಲಿ ಗಜಾನನನೂ, ಪಶ್ಚಿಮದಲ್ಲಿ ಪಾರ್ವತಿಯ ಪುತ್ರನೂ, ವಾಯವ್ಯದಲ್ಲಿ ಶಂಕರಾತ್ಮಜನೂ, ಉತ್ತರದಲ್ಲಿ ಪರಿಪೂರ್ಣ ತಮನಾದ ಶ್ರೀಕೃಷ್ಣಪರಮಾತ್ಮನ ಅಂಶಜನೂ, ಐಶಾನ್ಯದಲ್ಲಿ ಏಕದಂತನೂ, ಊರ್ಧ್ವಭಾಗದಲ್ಲಿ ಹೇರಂಬನೂ, ಅಧೋಭಾಗದಲ್ಲಿ ಗಣಾಧಿಪನೂ, ಸರ್ವದಿಕ್ಕಿನಲ್ಲಿ ಸರ್ವಪೂಜ್ಯನೂ, ಜಾಗ್ರತ್ಸ್ವಪ್ನಸುಷುಪ್ತಿಗಳಲ್ಲಿ ಯೋಗಿಗಳ ಗುರುವೂ ನನ್ನನ್ನು ಸರ್ವದಾ ಕಾಪಾಡಲಿ.

ಇತಿ ತೇ ಕಥಿತಂ ವತ್ಸ ಸರ್ವಮಂತ್ರೌಘವಿಗ್ರಹಂ ।
ಸಂಸಾರಮೋಹನಂ ನಾಮ ಕವಚಂ ಪರಮಾದ್ಭುತಂ ॥ ೮೮ ॥

ಶ್ರೀ ಕೃಷ್ಣೇನ ಪುರಾ ದತ್ತಂ ಗೋಲೋಕೇ ರಾಸಮಂಡಲೇ ।
ವೃಂದಾವನೇ ವಿನೀತಾಯ ಮಹ್ಯಂ ದಿನಕರಾತ್ಮಜ ॥ ೮೯ ॥

ಮಯಾ ದತ್ತಂ ಚ ತುಭ್ಯಂ ಚ ಯಸ್ಮೈ ಕಸ್ಮೈ ನ ದಾಸ್ಯಸಿ ।
ಪರಂ ವರಂ ಸರ್ವಪೂಜ್ಯಂ ಸರ್ವಸಂಕಟತಾರಣಂ ॥ ೯೦ ॥

ಗುರುಮಭ್ಯರ್ಚ್ಯ ವಿಧಿವತ್ಕವಚಂ ಧಾರಯೇತ್ತು ಯಃ ।
ಕಂಠೇ ವಾ ದಕ್ಷಿಣೇ ಬಾಹೌ ಸೋಽಪಿ ವಿಷ್ಣುರ್ನ ಸಂಶಯಃ ॥ ೯೧ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಗ್ರಹೇಂದ್ರ ಕವಚಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೯೨ ॥

---

೮೮. ಎಲೈ ವತ್ಸ ಶನೀಶ್ವರನೇ, ಈ ರೀತಿಯಾಗಿ ಮಂತ್ರಗಳಲ್ಲೆಲ್ಲ ಶ್ರೇಷ್ಠವಾದ ಗಣಪತಿಯ ಮಾಲಾಮಂತ್ರವನ್ನೂ, ಅತ್ಯದ್ಭುತವಾದ ಸಂಸಾರ-ಮೋಹಕವೆಂಬ ಗಣೇಶಕವಚವನ್ನೂ ನನಗೆ ವಿಸ್ತರಿಸಿ ಹೇಳಿರುವೆನು.

೮೯. ಎಲೈ ಸೂರ್ಯಪುತ್ರನೇ, ಈ ಮಂತ್ರ ಮತ್ತು ಕವಚಗಳನ್ನು ಪೂರ್ವದಲ್ಲಿ ಶ್ರೀಕೃಷ್ಣಪರಮಾತ್ಮನು ಗೋಲೋಕದ ರಾಸಮಂಡಲದಲ್ಲಿ ವಿನೀತನಾಗಿ ಮುಂದೆ ಕುಳಿತ್ತಿದ್ದ ನನಗೆ ಉಪದೇಶಿಸಿದನು

೯೦ ಸರ್ವಶ್ರೇಷ್ಠವೂ, ಸರ್ವಪೂಜ್ಯವೂ, ಸರ್ವಸಂಕಟತಾರಕವೂ ಆದ ಈ ಮಂತ್ರಕವಚಗಳನ್ನು ನಾನು ನಿನಗೆ ಉಪದೇಶಿಸಿರುವೆನು. ಇದನ್ನು ಅಪವಿತ್ರರಿಗೆ ಉಪದೇಶಿಸಬೇಡ.

೯೧. ವಿಧಿಪೂರ್ವಕವಾಗಿ ತನ್ನ ಗುರುವನ್ನು ಭಕ್ತಿಯಿಂದ ಪೂಜಿಸಿ ಯಾರು ಈ ಕವಚವನ್ನು ಕಂಠದಲ್ಲಾಗಲೀ ದಕ್ಷಿಣ ಬಾಹುವಿನಲ್ಲಾಗಲೀ ಧರಿಸುವರೋ ಅವರೂ ಸಾಕ್ಷಾದ್ವಿಷ್ಣುವೆನಿಸುವುದರಲ್ಲಿ ಸಂಶಯವಿಲ್ಲ.

೯೨. ಎಲೈ ಗ್ರಹರಾಜನೇ, ಸಾವಿರ ಅಶ್ವಮೇಧಯಾಗಗಳೂ, ನೂರು ವಾಜಪೇಯ ಯಾಗಗಳೂ ಕೂಡ, ಈ ಕವಚದ ಹದಿನಾರನೆಯ ಒಂದು ಭಾಗ ಫಲವನ್ನೂ ಕೊಡಲು ಶಕ್ತವಾಗುವುದಿಲ್ಲ.

ಇದಂ ಕವಚಮಜ್ಞಾತ್ವಾ ಯೋ ಭಜೇಚ್ಛಂಕರಾತ್ಮಜಂ ।
ಶತಲಕ್ಷಪ್ರಜಪ್ತೋಽಪಿ ನ ಮಂತ್ರಃ ಸಿದ್ಧಿದಾಯಕಃ ॥ ೯೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಸಂಸಾರಮೋಹನಂ ನಾಮಕವಚಂ ।
ವತ್ವೇದಂ ಸೂರ್ಯಪುತ್ರಾಯ ವಿರರಾಮ ಸುರೇಶ್ವರಃ ।
ಪರಮಾನಂದಸಂಯುಕ್ತಾ ದೇವಾಸ್ತಸ್ಥುಃ ಸಮೀಪತಃ ॥ ೯೪ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ಗಣೇಶಪೂಜಾಸ್ತವಕವಚಕಥನಂ
ನಾಮ ತ್ರಯೋದಶೋಽಧ್ಯಾಯಃ

---

೯೩. ಈ ಕವಚದ ಮಹಿಮೆಯನ್ನರಿಯದೆ ಯಾರು ಶಂಕರಪುತ್ರನಾದ ಗಣೇಶನನ್ನು ಸ್ತುತಿಸುವರೋ, ಅವರು ನೂರು ಲಕ್ಷಾವರ್ತಿ ಗಣೇಶ ಮಂತ್ರವನ್ನು ಜಪಿಸಿದರೂ ಮಂತ್ರಸಿದ್ಧಿಯುಂಟಾಗುವುದಿಲ್ಲ.

ಬ್ರಹ್ಮವೈವರ್ತದಲ್ಲಿ ಸಂಸಾರಮೋಹನವೆಂಬ ಕವಚದ ಮಹಿಮೆಯ ವರ್ಣನೆಯು ಇಲ್ಲಿಗೆ ಮುಗಿದುದು.

೯೪. ವಿಷ್ಣುವು ಸೂರ್ಯಪುತ್ರನಾದ ಶನಿಗೆ ಈ ಕವಚವನ್ನುಪದೇಶಿಸಿ ಸುಮ್ಮನಾದನು. ಆಗ ದೇವತೆಗಳೆಲ್ಲ ಪರಮಾನಂದತುಂದಿಲರಾಗಿ ವಿಷ್ಣುವಿನ ಸಮೀಪದಲ್ಲಿ ನಿಂತರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದ ನಾರದನಾರಾಯಣ
ಸಂವಾದದಲ್ಲಿ ಗಣೇಶಪೂಜೆ, ಸ್ತೋತ್ರ ಮತ್ತು ಕವಚಗಳ ಕಥನರೂಪವಾದ
ಹದಿಮೂರನೆಯ ಅಧ್ಯಾಯವು ಮುಗಿದುದು.



## ಹದಿಮೂರನೆಯ ಅಧ್ಯಾಯದ ಸಾರಾಂಶ

ಇತ್ತ ವಿಷ್ಣುವು ಸುಮುಹೂರ್ತದಲ್ಲಿ ದೇವತೆಗಳೊಡನೆ ಗಣಪತಿಯನ್ನು ಪೂಜಿಸಿ, ಮಹರ್ಷಿಗಳಿಂದ ಆಶೀರ್ವಾದ ಮಾಡಿಸಿದನು ಅನಂತರ ಬ್ರಹ್ಮಾದಿ ಸಕಲ ದೇವತೆಗಳೂ, ಲಕ್ಷ್ಮಿ ಮುಂತಾದ ಸಕಲ ದೇವಿಯರೂ ಗಣೇಶನನ್ನು ಭಕ್ತಿಯಿಂದ ಪೂಜಿಸಿ ಅಭೀಷ್ಟಕಾಣಿಕೆಯನ್ನಿತ್ತರು ಪಾರ್ವತೀದೇವಿಯಾದರೋ ಎಲ್ಲರೊಡನೆ ಗಣೇಶನಿಗೆ ಷೋಡಶೋಪಚಾರಗಳನ್ನು ಸಮರ್ಪಿಸಿ ತೃಪ್ತಿಪಡಿಸಿದಳು. ಮತ್ತು ಸಕಲಾಭೀಷ್ಟಪ್ರದವಾದ ಮಾಲಾಮಂತ್ರವನ್ನು ಜಪಿಸಿ, ಬ್ರಾಹ್ಮಣರಿಗೆ ಮಿಷ್ಟಭೋಜನ ಮಾಡಿಸಿ ಮಹೋತ್ಸವವನ್ನು ಸಾಂಗಗೊಳಿಸಿದಳು.

ಅನಂತರ ವಿಷ್ಣುವು ಸರ್ವಾದಿಯೂ, ಸರ್ವಾಂತರ್ಯಾಮಿಯೂ, ಸರ್ವಶಕ್ತನೂ, ನಿರ್ಲಿಪ್ತನೂ ಆದ ಗಣಪತಿಯನ್ನು ಮನಸ್ತೃಪ್ತಿಗಾಗಿ ಸ್ತುತಿಸಿದನು. ವಿಷ್ಣುಕೃತವಾದ ಈ ಗಣೇಶಸ್ತೋತ್ರವನ್ನು ಭಕ್ತಿಯಿಂದ ಕೇಳಿ ಹೇಳುವುದರಿಂದ ಅನಂತ ಪುಣ್ಯಫಲಗಳು ದೊರೆಯುವುವು.

ಅನಂತರ ಶನೀಶ್ವರನ ಪ್ರಾರ್ಥನೆಯಂತೆ ವಿಷ್ಣುವು ಗಣೇಶಕವಚವನ್ನುಪದೇಶಿಸಿ, ಅದರ ಮಹಿಮೆಯನ್ನು ಕೊಂಡಾಡಿ, ಶುಚಿರ್ಭೂತರಾಗಿ ಆ ಕವಚಧಾರಣೆ ಮಾಡಿದವರು ನಿಖಿಲವಿಶ್ವದಲ್ಲೂ ಅಜೇಯರಾಗುವರೆಂದು ನುಡಿದು ಸುಮ್ಮನಾದನು. ಆಗ ದೇವತೆಗಳೆಲ್ಲರೂ ಪರಮಾನಂದತುಂದಿಲರಾದರು.



—|| ಓಂ ||—

—|| ಶ್ರೀ ಗಣೇಶಾಯ ನಮಃ ||—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ಚತುರ್ದಶೋಽಧ್ಯಾಯಃ ||

|| ನಾರಾಯಣ ಉವಾಚ ||

**ದೇವಾಸ್ತಸ್ಯಾಂ ಸಭಾಯಾಂ ತೇ ಸರ್ವೇ ಸಂಹೃಷ್ಟಮಾನಸಾಃ |**
**ಗಂಧರ್ವಾ ಮುನಯಃ ಶೈಲಾಃ ಪಶ್ಯಂತಃ ಸುಮಹೋತ್ಸವಂ || ೧ ||**

**ಏತಸ್ಮಿನ್ನಂತರೇ ದುರ್ಗಾ ಸ್ಮೇರಾನನಸರೋರುಹಾ |**
**ಉವಾಚ ವಿಷ್ಣುಂ ಪ್ರಣತಾ ದೇವೇಶಂ ತತ್ರ ಸಂಸದಿ || ೨ ||**

|| ಪಾರ್ವತ್ಯುವಾಚ ||

**ತ್ವಂ ಪಾತಾ ಸರ್ವಜಗತಾಂ ನಾಥ ನಾಹಂ ಜಗದ್ಬಹಿಃ |**
**ಕಥಂ ಮತ್ಸ್ವಾಮಿನೋ ವೀರ್ಯಮಮೋಘಂ ರಕ್ಷಿತಂ ಪ್ರಭೋ || ೩ ||**

### ಹದಿನಾಲ್ಕನೆಯ ಅಧ್ಯಾಯವು

೧. ನಾರಾಯಣ :— ಆಗ ಆ ಸಭೆಯಲ್ಲಿ ದೇವತೆಗಳು, ಗಂಧರ್ವರು, ಶೈಲರು ಮತ್ತು ಮುನಿಗಳು ಆ ಮಹೋತ್ಸವವನ್ನು ನೋಡಿ ಸಂತುಷ್ಟಮನಸ್ಕರಾಗಿ ಕುಳಿತಿದ್ದರು.

೨. ಈಮಧ್ಯೆ ದುರ್ಗಾದೇವಿಯು ವದನಾರವಿಂದದಲ್ಲಿ ಮಂದಹಾಸವನ್ನು ಬೀರುತ್ತ, ಆ ಸಭೆಯ ಮಧ್ಯದಲ್ಲಿ ದೇವದೇವನಾದ ವಿಷ್ಣುವನ್ನು ಕುರಿತಿಂತೆಂದಳು.

೩. ಪಾರ್ವತಿ :—ಎಲೈ ಜಗನ್ನಾಥನೇ, ನೀನು ಸಕಲ ಜಗತ್ತನ್ನೂ ಸಂರಕ್ಷಿಸುವೆ. ನಾನೇನೂ ನಿನ್ನ ಜಗತ್ತಿಗೆ ಬಹಿರ್ಭೂತಳಲ್ಲ. ಹೀಗಿರುವಾಗ ನನ್ನ ಪತಿಯ ಅಮೋಘವಾದ ವೀರ್ಯವನ್ನು ನೀನೆಂತು ಸಂರಕ್ಷಿಸಿರುವೆ ಎಂಬುದನ್ನು ನನಗೆ ತಿಳಿಸು.

ರತಿಭಂಗೇ ಕೃತೇ ದೇವೈರ್ಬ್ರಹ್ಮಣಾ ಪ್ರೇರಿತೈಸ್ತ್ವಯಾ ।
ಭೂಮೌ ನಿಪತಿತಂ ವೀರ್ಯಂ ಕೇನ ದೇವೇನ ವೈ ಹೃತಂ ॥ ೪ ॥

ಸರ್ವೇ ದೇವಾಸ್ತ್ವತ್ಪುರತಸ್ತದನ್ವಿಷ್ಯಂತು ಸಾದರಂ ।
ಅರಾಜಕಂ ಕಥಮಿದಂ ತಿಷ್ಠತಿ ತ್ವಯಿ ರಾಜನಿ ॥ ೫ ॥

ಪಾರ್ವತೀವಚನಂ ಶ್ರುತ್ವಾ ಪ್ರಹಸ್ಯ ಜಗದೀಶ್ವರಃ ।
ಉವಾಚ ದೇವವರ್ಗೇ ಚ ಮುನಿವರ್ಗೇ ಚ ತಿಷ್ಠತಿ ॥ ೬ ॥

॥ ಶ್ರೀ ವಿಷ್ಣುರುವಾಚ ॥

ದೇವಾಃ ಶ್ರುಣುತ ಮದ್ವಾಕ್ಯಂ ಪಾರ್ವತೀ ವಚನಂ ಶ್ರುತಂ ।
ಶಿವಸ್ಯಾಮೋಘವೀರ್ಯಂ ಚ ಯತ್ಪುರಾ ಕೇನ ನಿರ್ಹೃತಂ ॥ ೭ ॥

ಸಭಾಮಾನಯತ ಕ್ಷಿಪ್ರಂ ನ ಚೇದ್ದಂಡಮಿಹಾರ್ಹಥ ।
ಸ ಕೋ ರಾಜಾ ನ ಶಾಸ್ತಾ ಯಃ ಪ್ರಜಾಬಾಧ್ಯಶ್ಚ ಸಾಕ್ಷಿಕಃ ॥ ೮ ॥

---

೪ ಹಿಂದೆ ನಿನ್ನಿಂದಲೂ ಬ್ರಹ್ಮನಿಂದಲೂ ಪ್ರೇರಿತರಾದ ದೇವತೆಗಳು ಬಂದು, ನನ್ನ ಪತಿಯ ರತಿಸುಖವನ್ನು ಭಂಗಗೊಳಿಸಿದಾಗ ಕೆಳಗೆ ಬಿದ್ದ ವೀರ್ಯವನ್ನು ಅಪಹರಿಸಿದ ದೇವನಾರು ?

೫ ಎಲ್ಲ ದೇವತೆಗಳೂ ನಿನ್ನೆದುರಿನಲ್ಲಿಯೇ ಇರುವರು ಎಲ್ಲರೂ ಆಸಕ್ತಿವಹಿಸಿ ಆ ವೀರ್ಯವನ್ನು ಹುಡುಕಲಿ. ಸರ್ವೇಶ್ವರನಾದ ನೀನಿರುವಾಗಲೂ ಹೀಗೆ ಅರಾಜಕವಾಗಿರುವುದು ನ್ಯಾಯವೇ ?

೬. ಪಾರ್ವತಿಯಾಡಿದ ಮಾತನ್ನು ಕೇಳಿ ಜಗದೀಶ್ವರನಾದ ವಿಷ್ಣುವು ನಸುನಕ್ಕು, ಆ ಸಭೆಯಲ್ಲಿದ್ದ ದೇವತೆಗಳನ್ನೂ ಮತ್ತು ಮುನಿಗಳನ್ನೂ ಕುರಿತಿಂತೆಂದನು.

೭. ಶ್ರೀವಿಷ್ಣು :—ಎಲೈ ದೇವತೆಗಳೇ, ನನ್ನ ಮಾತನ್ನು ಕೇಳಿರಿ. ಪಾರ್ವತಿಯಾಡಿದಂತೆ ಶಿವನ ಅಮೋಘವಾದ ವೀರ್ಯವನ್ನು ಹಿಂದೆ ಅಪಹರಿಸಿದವರಾರು ?

೮ ಆ ಅಪರಾಧಿಯನ್ನು ಜಾಗ್ರತೆಯಾಗಿ ಈ ಸಭೆಗೆ ಕರೆತನ್ನಿ. ಇಲ್ಲವಾದರೆ ನಿಮಗೆಲ್ಲರಿಗೂ ಶಿಕ್ಷೆ ವಿಧಿಸುವೆನು. ಪ್ರಜೆಗಳಿಂದ ಬಾಧಿತನಾಗಿ ಅವರಿಗೆ ತಕ್ಕ ಶಿಕ್ಷೆ ವಿಧಿಸದೆ ಪಕ್ಷಪಾತ ತೋರುವವನು ಹೇಗೆ ರಾಜನಾದಾನು ?

ವಿಷ್ಣೋಸ್ತದ್ವಚನಂ ಶ್ರುತ್ವಾ ಸಮಾಲೋಚ್ಯ ಪರಸ್ಪರಂ ।
ಊಚುಃ ಸರ್ವೇ ಶಿವಾವಾಕ್ಯೈಸ್ತ್ರಾಸಿತಾಃ ಪುರತೋ ಹರೇಃ ॥ ೯ ॥

॥ ಬ್ರಹ್ಮೋವಾಚ ॥

ತದ್ವೀರ್ಯಂ ನಿರ್ಹೃತಂ ಯೇನ ಪುಣ್ಯಭೂಮೌ ಚ ಭಾರತೇ ।
ಸ ವಂಚಿತೋ ಭವತ್ವತ್ರ ಪುಣ್ಯಾಹೇ ಪುಣ್ಯಕರ್ಮಣಿ ॥ ೧೦ ॥

॥ ಶ್ರೀ ಮಹಾದೇವ ಉವಾಚ ॥

ಮದ್ವೀರ್ಯಂ ನಿರ್ಹೃತಂ ಯೇನ ಪುಣ್ಯಭೂಮೌ ಚ ಭಾರತೇ ।
ಸ ವಂಚಿತೋ ಭವತ್ವತ್ರ ಸೇವನೇ ಪೂಜನೇ ತವ ॥ ೧೧ ॥

॥ ಯಮ ಉವಾಚ ॥

ಸ ವಂಚಿತೋ ಭವತ್ವತ್ರ ಶರಣಾಗತರಕ್ಷಣೇ ।
ಏಕಾದಶೀವ್ರತೇ ಚೈವ ತದ್ವೀರ್ಯಂ ಯೇನ ನಿರ್ಹೃತಂ ॥ ೧೨ ॥

---

೯. ವಿಷ್ಣುವಾಡಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ಅನ್ಯೋನ್ಯವಾಗಿ ಯೋಚಿಸಿ, ಪಾರ್ವತಿಯ ನುಡಿಗೆ ಹೆದರಿ, ವಿಷ್ಣುವನ್ನು ಕುರಿತಿಂತೆಂದರು.

೧೦. ಬ್ರಹ್ಮ:—ಪುಣ್ಯಭೂಮಿಯಾದ ಭರತಖಂಡದಲ್ಲಿ ಶಿವನ ವೀರ್ಯಾಪಹಾರಮಾಡಿದವನು, ಪುಣ್ಯದಿನಗಳಲ್ಲಿ ಮಾಡಿದ ಪುಣ್ಯಕರ್ಮಗಳ ಸತ್ಫಲದಿಂದ ವಂಚಿತನಾಗುವನು.

೧೧. ಮಹಾದೇವ:—ನನ್ನ ವೀರ್ಯವನ್ನು ಪುಣ್ಯಭೂಮಿಯಾದ ಭರತಖಂಡದಲ್ಲಿ ಅಪಹಾರಮಾಡಿದವನು ನಿನ್ನ ಪೂಜೆ ಮತ್ತು ಸೇವೆಗಳಿಂದ ವಂಚಿತನಾಗಲಿ.

೧೨. ಯಮ:—ಶಿವನ ವೀರ್ಯಾಪಹಾರಿಯು ಶರಣಾಗತರನ್ನು ರಕ್ಷಣೆ ಮಾಡಲಾಗದವನೂ, ಏಕಾದಶೀವ್ರತವಿಹೀನನೂ ಆಗುವನು.

॥ ಇಂದ್ರ ಉವಾಚ ॥

ತದ್ವೀರ್ಯಂ ನಿರ್ಹೃತಂ ಯೇನ ಪಾಪಿನಾಂ ಪಾಪಮೋಚನೇ ।
ಭವತ್ವತ್ರ ಯಶೋ ಲುಪ್ತಂ ತತ್ಪುಣ್ಯಂ ಕರ್ಮಸಂತತಂ ॥ ೧೩ ॥

॥ ವರುಣ ಉವಾಚ ॥

ಭವತ್ವತ್ರ ಕಲೌ ಜನ್ಮ ವರ್ಷೇ ಸ್ಯಾದ್ಭಾರತೇ ಹರೇ ।
ಶೂದ್ರಯಾಜಕಪತ್ನ್ಯಶ್ಚ ಗರ್ಭೇ ತದ್ಯೇನ ನಿರ್ಹೃತಂ ॥ ೧೪ ॥

॥ ಕುಬೇರ ಉವಾಚ ॥

ನ್ಯಾಸಹಾರೀ ಸ ಭವತು ವಿಶ್ವಾಸಘ್ನಶ್ಚ ಮಿತ್ರಹಾ ।
ಸತ್ಯಘ್ನಶ್ಚ ಕೃತಘ್ನಶ್ಚ ತದ್ವೀರ್ಯಂ ಯೇನ ನಿರ್ಹೃತಂ ॥ ೧೫ ॥

॥ ಈಶಾನ ಉವಾಚ ॥

ಪರದ್ರವ್ಯಾಪಹಾರೀ ಚ ಸ ಭವತ್ವತ್ರ ಭಾರತೇ ।
ನರಘಾತೀ ಗುರುದ್ರೋಹೀ ತದ್ವೀರ್ಯಂ ಯೇನ ನಿರ್ಹೃತಂ ॥ ೧೬ ॥

---

೧೩. ಇಂದ್ರ:— ಯಾರು ಶಿವನ ವೀರ್ಯವನ್ನು ಅಪಹರಿಸಿರುವರೋ, ಅವರು ಗಳಿಸಿರುವ ಕೀರ್ತಿಯೂ, ಪುಣ್ಯಕರ್ಮಗಳೂ, ಪಾಪಿಗಳ ಪಾಪವಿಮೋಚನೆಯಲ್ಲಿ ನಶಿಸಿಹೋಗಲಿ.

೧೪ ವರುಣ :—ಶಿವನ ವೀರ್ಯಾಪಹಾರಿಯು ಈ ಕಲಿಯುಗದಲ್ಲಿ ಭರತ ಖಂಡದಲ್ಲಿ ಶೂದ್ರನಿಗೆ ಯಾಗ ಮಾಡಿಸುವ ಬ್ರಾಹ್ಮಣನ ಪತ್ನಿಯಲ್ಲಿ ಜನ್ಮವೆತ್ತಲಿ.

೧೫ ಕುಬೇರ :—ಈಶ್ವರನ ವೀರ್ಯವನ್ನು ಅಪಹರಿಸಿದವನು ನಿಕ್ಷೇಪ ಹಾರಿಯೂ, ವಿಶ್ವಾಸಘಾತುಕನೂ, ಮಿತ್ರಹಿಂಸಕನೂ, ಅಸತ್ಯವಾದಿಯೂ, ಕೃತಘ್ನನೂ ಆಗುವನು.

೧೬. ಈಶಾನ :—ಈಶ್ವರನ ವೀರ್ಯಾಪಹಾರಮಾಡಿದವನು ಭರತಖಂಡದಲ್ಲಿ ಪರದ್ರವ್ಯಾಪಹರಣ, ನರಹಿಂಸೆ ಮತ್ತು ಗುರುದ್ರೋಹದಿಂದುಂಟಾಗುವ ಪಾಪಕ್ಕೆ ಗುರಿಯಾಗುವನು.

|| ರುದ್ರಾ ಊಚುಃ ||

ತೇ ಮಿಥ್ಯಾವಾದಿನಃ ಸಂತು ಭಾರತೇ ಪಾರದಾರಿಕಾಃ ।
ಗುರುನಿಂದಾರತಾಃ ಶಶ್ವತ್ತದ್ವೀರ್ಯಂ ಯೈಶ್ಚ ನಿರ್ಹೃತಂ || ೧೭ ||

|| ಕಾಮದೇವ ಉವಾಚ ||

ಕೃತ್ವಾ ಪ್ರತಿಜ್ಞಾಂ ಯೋ ಮೂಢೋ ನ ಸಂಪಾಲಯತೇ ಭ್ರಮಾತ್ ।
ಭಾಜನಂ ತಸ್ಯ ಪಾಪಸ್ಯ ಸ ಭವೇದ್ಯೇನ ತದ್ಧೃತಂ || ೧೮ ||

|| ಸ್ವರ್ವೈದ್ಯಾವೂಚತುಃ ||

ಮಾತುಃ ಪಿತುರ್ಗುರೋಶ್ಚೈವ ಸ್ತ್ರೀಪುತ್ರಾಣಾಂ ಚ ಪೋಷಣೇ ।
ಭವೇತಾಂ ವಂಚಿತೌ ತೌ ಚ ಯಾಭ್ಯಾಂ ವೀರ್ಯಂ ಚ ತದ್ಧೃತಂ || ೧೯ ||

|| ಸರ್ವೇ ದೇವಾ ಊಚುಃ ||

ಮಿಥ್ಯಾಸಾಕ್ಷ್ಯ ಪ್ರದಾತಾರೋ ಭವಂತ್ವತ್ರ ಚ ಭಾರತೇ ।
ಅಪುತ್ರಿಣೋ ದರಿದ್ರಾಶ್ಚ ಯೈಶ್ಚ ವೀರ್ಯಂ ಹಿ ತದ್ಧೃತಂ || ೨೦ ||

೧೭. ಏಕಾದಶರುದ್ರರು :—ಯಾರು ಶಿವನ ವೀರ್ಯವನ್ನು ಅಪಹರಿಸಿರುವರೋ, ಅವರು ಭರತಖಂಡದಲ್ಲಿ ಮಿಥ್ಯಾವಾದಿಗಳೂ, ಪರಸ್ತ್ರೀಗಾಮಿಗಳೂ, ಗುರುನಿಂದಕರೂ ಆಗುವರು.

೧೮. ಕಾಮದೇವ.—ತಾನು ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸಿಕೊಳ್ಳದವನು ಪಡೆಯುವ ಪಾಪವನ್ನು ಶಿವನ ವೀರ್ಯಾಪಹಾರಿಯು ಪಡೆಯಲಿ

೧೯. ದೇವವೈದ್ಯರು :—ಮಾತಾಪಿತೃಗಳನ್ನೂ, ಗುರುವನ್ನೂ, ಪತ್ನೀಪುತ್ರರನ್ನೂ ಪೋಷಿಸುವುದರಿಂದ ದೊರೆಯುವ ಪುಣ್ಯವು ವೀರ್ಯಾಪಹಾರಿಗಳಿಗೆ ದೊರೆಯದಿರಲಿ.

೨೦. ಸಕಲ ದೇವತೆಗಳು :—ಈಶ್ವರನ ವೀರ್ಯವನ್ನು ಅಪಹರಿಸಿದವರು ಈ ಭರತಖಂಡದಲ್ಲಿ ಸುಳ್ಳುಸಾಕ್ಷಿಗಳಾಗಿ, ಅಪುತ್ರರೂ ದರಿದ್ರರೂ ಆಗುವರು.

ಈಶ್ವರಸ್ಯ ವಚಃ ಶ್ರುತ್ವಾ ಸಭಾಯಾಂ ಕಂಪಿತಾಶ್ಚ ತೇ ।
ಪರಸ್ಪರಂ ಸಮಾಲೋಚ್ಯ ಕ್ರಮೇಣೋಚುಃ ಪುರೋ ಹರೇಃ ॥ ೨೬ ।

॥ ಶ್ರೀ ಧರ್ಮ ಉವಾಚ ॥

ರತೇರುತ್ತಿಷ್ಠತೋ ವೀರ್ಯಂ ಪಪಾತ ವಸುಧಾತಲೇ ।
ಮಯಾ ಜ್ಞಾತಮಮೋಘಂ ತಚ್ಛಂಕರಸ್ಯ ಪ್ರಕೋಪತಃ ॥ ೨೭

॥ ಕ್ಷಿತಿರುವಾಚ ॥

ವೀರ್ಯಂವೋಢುಮಶಕ್ತಾಹಂ ತದ್ವಹ್ನೌ ನ್ಯಕ್ಷಿಪಂ ಪುರಾ ।
ಅತೀವ ದುರ್ವಹಂ ಬ್ರಹ್ಮನ್ನಬಲಾಂ ಕ್ಷಂತು ಮರ್ಹಸಿ ॥ ೨೮ ।

॥ ಅಗ್ನಿರುವಾಚ ॥

ವೀರ್ಯಂ ವೋಢುಮಶಕ್ತೋಽಹಂ ನ್ಯಕ್ಷಿಪಂ ಶರಕಾನನೇ ।
ದುರ್ಬಲಸ್ಯ ಜಗನ್ನಾಥ ಕಿಂ ಯಶಃ ಕಿಂ ಚ ಪೌರುಷಂ ॥ ೨೯ ।

೨೬. ವಿಷ್ಣುವಿನ ಈ ಮಾತುಗಳನ್ನು ಕೇಳಿ ಸಭೆಯಲ್ಲಿ ಭಯಭೀತರಾ ಧರ್ಮಾದಿ ದೇವತೆಗಳು, ಅನ್ಯೋನ್ಯವಾಗಿ ಪರ್ಯಾಲೋಚಿಸಿ ವಿಷ್ಣುವನ್ನು ಕುರಿತಿಂತೆಂದರು.

೨೭. ಧರ್ಮ :— ರತಿಭಂಗದಿಂದ ಕುಪಿತನಾದ ಶಂಕರನು ರತಿಸುಖವನ್ನು ಬಿಟ್ಟು ಮೇಲಕ್ಕೆದ್ದಾಗ ಅವನ ಅಮೋಘವಾದ ವೀರ್ಯವು ಭೂಮಿಯ ಮೇ ಬಿದ್ದುದನ್ನು ಮಾತ್ರ ನಾನು ಬಲ್ಲೆ.

೨೮. ಭೂದೇವಿ :— ಎಲೈ ದೇವನೇ, ಅಮೋಘವಾದ ಆ ವೀರ್ಯವನು ನಾನು ಹೊರಲಾಗದೆ ಆಗಲೇ ಅದನ್ನು ಅಗ್ನಿಯಲ್ಲಿ ತ್ಯಜಿಸಿಬಿಟ್ಟೆನು. ಅಬಲೆಯಾ ನನ್ನ ತಪ್ಪನ್ನು ದಯವಿಟ್ಟು ಮನ್ನಿಸು.

೨೯. ಅಗ್ನಿ :— ಆ ವೀರ್ಯವನ್ನು ಹೊರಲಾಗದೆ ನಾನು ಅವನ್ನು ಜೊಳ ಗುತ್ತಿಯಲ್ಲಿ ತ್ಯಜಿಸಿದೆನು. ಎಲೈ ಜಗನ್ನಾಥನೇ, ದುರ್ಬಲನಾದ ನನಗೆ ಕೀರ್ತಿ ಪೌರಷಗಳೆಲ್ಲಿ ದೊರೆಯಬೇಕು.

|| ವಾಯುರುವಾಚ ||

ಶರೇಷು ಪತಿತಂ ವೀರ್ಯಂ ಸದ್ಯೋ ಬಾಲೋ ಬಭೂವ ಹ |
ಅತೀವಸುಂದರೋ ವಿಷ್ಣೋ ಸ್ವರ್ಣರೇಖಾನದೀತಟೇ || ೩೦ ||

|| ಶ್ರೀ ಸೂರ್ಯ ಉವಾಚ ||

ರುದಂತಂ ಬಾಲಕಂ ದೃಷ್ಟ್ವಾಗಮಮಸ್ತಾಚಲಂ ಪ್ರತಿ |
ಪ್ರೇರಿತಃ ಕಾಲಚಕ್ರೇಣ ನಿಶಿ ಸಂಸ್ಥಾತುಮಕ್ಷಮಃ || ೩೧ ||

|| ಚಂದ್ರ ಉವಾಚ ||

ರುದಂತಂ ಬಾಲಕಂ ಪ್ರಾಪ್ಯ ಗೃಹೀತ್ವಾ ಕೃತ್ತಿಕಾಗಣಃ |
ಜಗಾಮ ಸ್ವಾಲಯಂ ವಿಷ್ಣೋ ಗಚ್ಛನ್ಬದರಿಕಾಶ್ರಮಾತ್ || ೩೨ ||

|| ಜಲಮುವಾಚ ||

ಅಮುಂ ರುದಂತಮಾನೀಯ ಸ್ತನಂ ದತ್ವಾ ಸ್ತನಾರ್ಥಿನೇ |
ವರ್ಧಯಾಮಾಸುರೀಶಸ್ಯ ತಂ ತಾಃ ಸೂರ್ಯಪ್ರಭಂ ಪ್ರಭೋ || ೩೩ ||

---

೩೦. ವಾಯು :— ಎಲೈ ವಿಷ್ಣುವೇ, ಸ್ವರ್ಣರೇಖಾನದಿಯ ದಡದಲ್ಲಿದ್ದ ಲಾಳದ ಗುತ್ತಿಯಲ್ಲಿ ಸೇರಿದ ಈಶ್ವರನ ವೀರ್ಯದಿಂದ ಕೂಡಲೇ ಒಬ್ಬ ಬಾಲಕನು ಜನ್ಮವೆತ್ತಿದನು.

೩೧. ಸೂರ್ಯ :—ಆಗತಾನೆ ಜನಿಸಿ ಅಳುತ್ತಿದ್ದ ಆ ಬಾಲಕನನ್ನು ನೋಡಿ ದರೂ ನಾನು, ರಾತ್ರಿಯಾದುದರಿಂದ ನಿಲ್ಲಲಾಗದೆ ಕಾಲಪ್ರೇರಿತನಾಗಿ ಅಸ್ತಪರ್ವತ ವನ್ನು ಕುರಿತು ಹೊರಟುಹೋದೆನು.

೩೨ ಚಂದ್ರ :—ಎಲೈ ವಿಷ್ಣುವೇ, ಬದರಿಕಾಶ್ರಮದಿಂದ ಹೋಗುತ್ತಿದ್ದ ಕೃತ್ತಿಕಾಮಾತೆಯರು ಅಳುತ್ತಿದ್ದ ಆ ಬಾಲಕನನ್ನು ಎತ್ತಿಕೊಂಡು ತಮ್ಮ ಮನೆಗೆ ಹೊರಟುಹೋದರು.

೩೩. ಜಲ :—ಸ್ತನ್ಯಾರ್ಥವಾಗಿ ಅಳುತ್ತಿದ್ದ ಸೂರ್ಯನಿಗಿಂತಲೂ ಅತಿ ತೇಜಸ್ವಿಯಾದ ಆ ಬಾಲಕನನ್ನು ಎತ್ತಿಕೊಂಡು ಆ ಕೃತ್ತಿಕಾಮಾತೆಯರು ಸ್ತನ್ಯಪಾನ ಮಾಡಿಸಿ ಬೆಳೆಸಿದರು.

॥ ಸಂಧ್ಯೇ ಊಚತುಃ ॥

ಅಧುನಾ ಕೃತ್ತಿಕಾನಾಂ ಚ ಷಣ್ಣಾಂ ತತ್ಪೋಷ್ಯ ಪುತ್ರಕಃ ।
ತನ್ನಾಮ ಚಕ್ರುಸ್ತಾಃ ಪ್ರೇಮ್ಣಾ ಕಾರ್ತಿಕೇಯ ಇತಿ ಸ್ವಯಂ ॥ ೩೪ ॥

॥ ರಾತ್ರಿರುವಾಚ ॥

ನ ಚಕ್ರುರ್ಬಾಲಕಂ ತಾಶ್ಚ ಲೋಚನಾನಾಮಗೋಚರಂ ।
ಪ್ರಾಣೇಭ್ಯೋಽಪಿ ಪ್ರೇಮಪಾತ್ರಂ ಯಃ ಪೋಷ್ಟಾ ತಸ್ಯ ಪುತ್ರಕಃ ॥ ೩೫ ॥

॥ ದಿನಮುವಾಚ ॥

ಯಾನಿ ಯಾನಿ ಚ ವಸ್ತೂನಿ ತ್ರೈಲೋಕ್ಯೇ ದುರ್ಲಭಾನಿ ಚ ।
ಪ್ರಶಂಸಿತಾನಿ ಸ್ವಾದೂನಿ ಭೋಜಯಾಮಾಸುರೇವ ತಂ ॥ ೩೬ ॥

ತೇಷಾಂ ತದ್ವಚನಂ ಶ್ರುತ್ವಾ ಸಂತುಷ್ಟೋ ಮಧುಸೂದನಃ ।
ತೇ ಸರ್ವೇ ಹರಿಮಿತ್ಯೂಚುಃ ಸಭಾಯಾಂ ಹೃಷ್ಟಮಾನಸಾಃ ॥ ೩೭ ॥

೩೪. ಸಂಧ್ಯಾದೇವಿಯರು:—ಈಗ ಆ ಬಾಲಕನು ಆರುಜನ ಕೃತ್ತಿಕಾ ಮಾತೆಯರ ಪೋಷ್ಯಪುತ್ರನಾಗಿರುವನು. ಆದುದರಿಂದಲೇ ಅವರು ಪ್ರೇಮದಿಂದ ಅವನಿಗೆ ಕಾರ್ತಿಕೇಯನೆಂದು ನಾಮಕರಣ ಮಾಡಿದರು

೩೫. ರಾತ್ರಿ:—ಪ್ರಾಣಕ್ಕಿಂತಲೂ ಅತ್ಯಂತ ಪ್ರಿಯನಾದ ಆ ಬಾಲಕನನ್ನು ಆ ದೇವಿಯರು ಕಣ್ಮರೆಯಾಗದಂತೆ ಕಾಪಾಡಿದರು. ಯಾವ ಶಿಶುವನ್ನು ಯಾರು ಕಾಪಾಡುವರೋ ಅವರಿಗೆ ಅದು ಪುತ್ರಸದೃಶವಲ್ಲವೇ ?

೩೬. ಹಗಲು:—ತ್ರಿಲೋಕದಲ್ಲಿಯೂ ದುರ್ಲಭವಾಗಿ, ಅತ್ಯಂತ ಮಧುರವೂ ರುಚಿಕರವೂ ಆದ ವಸ್ತುಗಳನ್ನೆಲ್ಲ ಆ ಬಾಲಕನಿಗೆ ಆ ದೇವಿಯರು ತಿನ್ನಲು ಕೊಟ್ಟರು.

೩೭. ಇಂತು ಅವರಾಡಿದ ಮಾತುಗಳನ್ನು ಕೇಳಿ ವಿಷ್ಣುವು ಸಂತೋಷಗೊಂಡನು. ಆ ದೇವತೆಗಳೆಲ್ಲರೂ ಶ್ರೀಹರಿಯನ್ನು ಕುರಿತು ಕ್ರಮವಾಗಿ ಇಂತು ನುಡಿದರು.

ಪ್ರತ್ರಸ್ಯ ವಾರ್ತಾಂ ಸಂಪ್ರಾಪ್ಯ ಪಾರ್ವತೀ ಹೃಷ್ಟಮಾನಸಾ ।
ಕೋಟಿರತ್ನಾನಿ ವಿಪ್ರೇಭ್ಯೋ ದದೌ ಬಹುಧನಾನಿ ಚ ।
ದದೌ ಸರ್ವಾಣಿ ವಿಪ್ರೇಭ್ಯೋ ವಾಸಾಂಸಿ ವಿವಿಧಾನಿ ಚ　　॥ ೩೮ ॥

ಲಕ್ಷ್ಮೀಃ ಸರಸ್ವತೀ ಮೇನಾ ಸಾವಿತ್ರೀ ಸರ್ವಯೋಷಿತಃ ।
ವಿಷ್ಣುಶ್ಚ ಸರ್ವದೇವಾಶ್ಚ ಬ್ರಾಹ್ಮಣೇಭ್ಯೋ ದದುರ್ಧನಂ　　॥ ೩೯ ॥

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣೇಶಖಂಡೇ ನಾರದನಾರಾಯಣಸಂವಾದೇ ಕಾರ್ತಿಕೇಯಜನ್ಮಕಥನಂ ನಾಮ ಚತುರ್ದಶೋಽಧ್ಯಾಯಃ**

೩೮. ಮಗನು ಸುಖವಾಗಿರುವ ಸಮಾಚಾರವನ್ನು ಕೇಳಿ ಸಂತೋಷಗೊಂಡ ಪಾರ್ವತಿಯು ಬ್ರಾಹ್ಮಣರಿಗೆ ವಿವಿಧ ರತ್ನಗಳನ್ನೂ ಧನವನ್ನೂ ಕೋಟಿಗಟ್ಟಲೆ ದಾನ ಮಾಡಿದಳು.

೩೯. ಲಕ್ಷ್ಮೀ ಸರಸ್ವತಿಯರೂ, ಮೇನಾ ಸಾವಿತ್ರೀ ಮುಂತಾದ ಸಕಲ ದೇವಿಯರೂ, ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಬ್ರಾಹ್ಮಣರಿಗೆ ಯಥೇಚ್ಛ ವಾಗಿ ದ್ರವ್ಯದಾನ ಮಾಡಿದರು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಷಣ್ಮುಖನ ಜನ್ಮವೃತ್ತಾಂತವನ್ನು ತಿಳಿಸುವ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



## ಹದಿನಾಲ್ಕನೆಯ ಅಧ್ಯಾಯದ ಸಾರಾಂಶ

ಇಂತು ದೇವತೆಗಳೆಲ್ಲರೂ ಆನಂದಭರಿತರಾಗಿ ಕುಳಿತಿರುವಾಗ ದುರ್ಗಾದೇವಿಯು ವಿಷ್ಣುವನ್ನು ಕುರಿತು, ಶಿವನ ವೀರ್ಯಾಪಹಾರಿಯನ್ನು ಪತ್ತೆಮಾಡಿ ಅವನಿಗೆ ಶಿಕ್ಷೆ ವಿಧಿಸಬೇಕೆಂದು ಹೇಳಿದಳು. ಅನಂತರ ವಿಷ್ಣುವು ಶಿವನ ವೀರ್ಯವನ್ನು ಅಪಹರಿಸಿದ ವರಾರೆಂದು ದೇವತೆಗಳನ್ನು ಕೇಳಲು ಬ್ರಹಾದಿ ದೇವತೆಗಳು ತಾವು ಅಪರಾಧಿಗಳಲ್ಲ ವೆಂದು ವಿಜ್ಞಾಪಿಸಿಕೊಂಡು ಅಪರಾಧಿಯನ್ನು ವಿಧವಿಧವಾಗಿ ಶಪಿಸಿದರು. ಅನಂತರ ವಿಷ್ಣುವು ಧರ್ಮಾದಿ ದೇವತೆಗಳನ್ನು ಅಪರಾಧಿಯ ವಿಷಯವಾಗಿ ಕೇಳಲು ಅವರು ಕ್ರಮವಾಗಿ, ಭೂದೇವಿಯು ತನ್ನ ಮೇಲೆ ಬಿದ್ದ ಶಿವನ ವೀರ್ಯವನ್ನು ಹೊರಲಾಗದೆ ಅಗ್ನಿಯಲ್ಲಿ ತ್ಯಜಿಸಿದುದನ್ನೂ, ಅಗ್ನಿಯು ಆ ವೀರ್ಯವನ್ನು ಲಾಳದ ಗುತ್ತಿಯಲ್ಲಿ ಬಿಟ್ಟುದುದನ್ನೂ, ಅಲ್ಲಿ ಒಬ್ಬ ಬಾಲಕನು ಜನಿಸಿ ಅಳುತ್ತಿರಲು ಬದರಿಕಾಶ್ರಮದಿಂದ ಹೋಗುತ್ತಿದ್ದ ಕೃತ್ತಿಕಾಮಾತೆಯರು ಆ ಶಿಶುವನ್ನೆತ್ತಿಕೊಂಡು ಮನೆಗೆ ಕರೆದೊಯ್ದು ಸ್ತನ್ಯಪಾನ ಮಾಡಿಸಿ ಬೆಳೆಸಿ ಕಾರ್ತಿಕೇಯನೆಂದು ಅವನಿಗೆ ನಾಮಕರಣ ಮಾಡಿದು ದನ್ನೂ ತಿಳಿಸಿದರು. ಇಂತಿರುವ ಶಿಶುವನ್ನು ಕೇಳಿ ಪಾರ್ವತಿಯು ಸಂತುಷ್ಟಳಾಗಿ ಬ್ರಾಹ್ಮಣರಿಗೆ ವಿವಿಧ ವಸ್ತುಗಳನ್ನು ದಾನಮಾಡಿಡಳು.

॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ಪಂಚದಶೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಪುತ್ರಸ್ಯ ವಾರ್ತಾಂ ಸಂಪ್ರಾಪ್ಯ ಪಾರ್ವತ್ಯಾ ಸಹ ಶಂಕರಃ ।
ಪ್ರೇರಿತೋ ವಿಷ್ಣುನಾ ದೇವೈರ್ಮುನಿಭಿಃ ಪರ್ವತೈರ್ಮುನೇ ॥ ೧ ॥

ದೂತಾನ್ಪ್ರಸ್ಥಾಪಯಾಮಾಸ ಮಹಾಬಲಪರಾಕ್ರಮಾನ್ ।
ವೀರಭದ್ರಂ ವಿಶಾಲಾಕ್ಷಂ ಶಂಕುಕರ್ಣಂ ಕಬಂಧಕಂ ॥ ೨ ॥

ನಂದೀಶ್ವರಂ ಮಹಾಕಾಲಂ ವಜ್ರದಂತಂ ಭಗಂಧರಂ ।
ಗೋಧಾಮುಖಂ ದಧಿಮುಖಂ ಜ್ವಲದಗ್ನಿಶಿಖೋಪಮಂ ॥ ೩ ॥

---

### ಹದಿನೈದನೆಯ ಅಧ್ಯಾಯವು

೧–೨. ನಾರಾಯಣ :—ಪಾರ್ವತಿಯೊಡನೆ ಕುಳಿತಿದ್ದ ಪರಮೇಶ್ವರನು ಮಗನ ಸಮಾಚಾರವನ್ನು ಕೇಳಿ, ವಿಷ್ಣುವಿನಿಂದಲೂ, ದೇವಮುನಿಪರ್ವತಾದಿಗಳಿಂದಲೂ ಪ್ರೇರಿತನಾಗಿ, ಹೆಚ್ಚು ಬಲ ಪರಾಕ್ರಮವುಳ್ಳ ವೀರಭದ್ರ, ವಿಶಾಲಾಕ್ಷ, ಶಂಕುಕರ್ಣ, ಕಬಂಧಕ ಮುಂತಾದ ದೂತರನ್ನು, ಕುರಿತು ಮಗನನ್ನು ಕರೆತರುವಂತೆ ಹೇಳಿಕಳುಹಿಸಿದನು.

೩–೬. ನಂದೀಶ್ವರ ಮಹಾಕಾಲರೂ, ವಜ್ರದಂತ ಭಗಂಧರರೂ, ಗೋಧಾಮುಖನೂ ಅಗ್ನಿಜ್ವಾಲೆಯಂತೆ ತೇಜಸ್ವಿಯಾದ ದಧಿಮುಖನೂ, ಅವರ ಜತೆಯಲ್ಲಿ ಹೊರಟರು. ಒಂದುಲಕ್ಷ ಕ್ಷೇತ್ರಪಾಲರನ್ನೂ, ಮೂರುಲಕ್ಷ ಭೂತಗಳನ್ನೂ, ನಾಲ್ಕು

ಲಕ್ಷಂ ಚ ಕ್ಷೇತ್ರಪಾಲಾನಾಂ ಭೂತಾನಾಂ ಚ ತ್ರಿಲಕ್ಷಕಂ ।
ವೇತಾಲಾನಾಂ ಚತುರ್ಲಕ್ಷಂ ಯಕ್ಷಾಣಾಂ ಪಂಚಲಕ್ಷಕಂ ॥ ೪ ॥

ಕೂಷ್ಮಾಂಡಾನಾಂ ಚತುರ್ಲಕ್ಷಂ ತ್ರಿಲಕ್ಷಂ ಬ್ರಹ್ಮರಕ್ಷಸಾಂ ।
ಡಾಕಿನೀನಾಂ ಚತುರ್ಲಕ್ಷಂ ಯೋಗಿನೀನಾಂ ತ್ರಿಲಕ್ಷಕಂ ॥ ೫ ॥

ರುದ್ರಾಂಶ್ಚ ಭೈರವಾಂಶ್ಚೈವ ಶಿವತುಲ್ಯಪರಾಕ್ರಮಾನ್ ।
ಅನ್ಯಾಂಶ್ಚ ವಿಕೃತಾಕಾರಾನಸಂಖ್ಯಾನಪಿ ನಾರದ ॥ ೬ ॥

ತೇ ಸರ್ವೇ ಶಿವದೂತಾಶ್ಚ ನಾನಾಶಸ್ತ್ರಾಸ್ತ್ರಪಾಣಯಃ ।
ಕೃತ್ತಿಕಾನಾಂ ಚ ಭವನಂ ವೇಷ್ಟಯಾಮಾಸುರುಜ್ವಲಂ ॥ ೭ ॥

ದೃಷ್ಟ್ವಾ ತಾನ್ಕೃತ್ತಿಕಾಃ ಸರ್ವಾ ಭಯವಿಹ್ವಲಮಾನಸಾಃ ।
ಕಾರ್ತಿಕೇಯಂ ಚ ಜಗೃಹುರ್ಜ್ವಲಂತಂ ಬ್ರಹ್ಮತೇಜಸಾ ॥ ೮ ॥

॥ ಕೃತ್ತಿಕಾ ಊಚುಃ ॥

ವತ್ಸ ಸೈನ್ಯಾನ್ಯಸಂಖ್ಯಾನಿ ವೇಷ್ಟಯಾಮಾಸುರಾಲಯಂ ।
ನ ಜಾನೀಮೋ ವಯಂ ಕಸ್ಯ ಕರಾಲಾನಿ ಚ ಬಾಲಕ ॥ ೯ ॥

---

ಲಕ್ಷ ವೇತಾಳಗಳನ್ನೂ, ಐದುಲಕ್ಷ ಯಕ್ಷರನ್ನೂ, ನಾಲ್ಕುಲಕ್ಷ ಕೂಷ್ಮಾಂಡರನ್ನೂ, ಮೂರುಲಕ್ಷ ಬ್ರಹ್ಮರಾಕ್ಷಸರನ್ನೂ, ನಾಲ್ಕುಲಕ್ಷ ಡಾಕಿನಿಯರನ್ನೂ, ಮೂರುಲಕ್ಷ ಯೋಗಿನಿಯರನ್ನೂ ಶಿವನು ಕಳುಹಿದನು. ಅಲ್ಲದೆ ಎಲೈ ನಾರದನೇ, ಶಿವನಿಗೆ ಸಮಾನವಾದ ಬಲಪರಾಕ್ರಮವುಳ್ಳ ರುದ್ರ ಭೈರವಾದಿಗಳನ್ನೂ, ವಿಕಾರಾಕೃತಿಯುಳ್ಳ ಇತರ ಅಸಂಖ್ಯ ಗಣಗಳನ್ನೂ ಪುತ್ರಾನಯನಕ್ಕಾಗಿ ಕಳುಹಿಸಿದನು.

೭. ವಿಧವಿಧ ಶಸ್ತ್ರಾಸ್ತ್ರಧಾರಿಗಳಾದ ಆ ಶಿವದೂತರೆಲ್ಲರೂ, ಕೃತ್ತಿಕಾದೇವಿಯರ ಪ್ರಕಾಶಮಾನವಾದ ಮಂದಿರವನ್ನು ಮುತ್ತಿದರು.

೮. ಅವರನ್ನು ನೋಡಿ ಭಯಚಕಿತರಾದ ಕೃತ್ತಿಕೆಯರು ಕೂಡಲೆ ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದ ಕಾರ್ತಿಕೇಯನನ್ನು ಎತ್ತಿಕೊಂಡರು.

೯. ಕೃತ್ತಿಕಾದೇವಿಯವರು :— ಎಲೈ ಕಾರ್ತಿಕೇಯನೇ, ಅಸಂಖ್ಯವಾದ ಸೈನ್ಯಗಳು ಬಂದು ನಮ್ಮ ಮನೆಯನ್ನು ಮುತ್ತಿಕೊಂಡಿವೆ. ಭಯಂಕರವಾದ ಈ ಸೈನ್ಯವು ಯಾರೆಂಬುದು ನಮಗೆ ತಿಳಿಯದು.

|| ಕಾರ್ತಿಕೇಯ ಉವಾಚ ।

ಭಯಂ ತ್ಯಜತ ಕಲ್ಯಾಣ್ಯೋ ಭಯಂ ಕಿಂ ವೋ ಮಯಿ ಸ್ಥಿತೇ ।
ದುರ್ನಿವಾರ್ಯಃ ಕರ್ಮಪಾಕೋ ಮಾತರಃ ಕೇನ ವಾರ್ಯತೇ || ೧೦ ||

ಏತಸ್ಮಿನ್ನಂತರೇ ತತ್ರ ಸೇನಾನೀರ್ನಂದಿಕೇಶ್ವರಃ ।
ಪುರತಃ ಕಾರ್ತಿಕೇಯಸ್ಯ ತಿಷ್ಠಂಸ್ತಾಸಾಮುವಾಚ ಹ || ೧೧ ||

|| ನಂದಿಕೇಶ್ವರ ಉವಾಚ ||

ಭ್ರಾತಃ ಪ್ರವೃತ್ತಿಂ ಶೃಣು ಮೇ ಮಾತುಶ್ಚಾಪಿ ಶುಭಾವಹಂ ।
ಪ್ರೇಷಿತಸ್ಯ ಸುರೇಂದ್ರಸ್ಯ ಸಂಹರ್ತುಃ ಶಂಕರಸ್ಯ ಚ || ೧೨ ||

ಕೈಲಾಸೇ ಸರ್ವದೇವಾಶ್ಚ ಬ್ರಹ್ಮವಿಷ್ಣುಶಿವಾದಯಃ ।
ಸಭಾಯಾಂ ತೇ ವಸಂತಶ್ಚ ಗಣೇಶೋತ್ಸವಮಂಗಲಂ । || ೧೩ ||

ಶೈಲೇಂದ್ರಕನ್ಯಾ ತಂ ವಿಷ್ಣುಂ ಜಗತಾಂ ಪರಿಪಾಲಕಂ ।
ಸಂಬೋಧ್ಯ ಕಥಯಾಮಾಸ ತವಾನ್ವೇಷಣಕಾರಣಂ || ೧೪ ||

---

೧೦. ಕಾರ್ತಿಕೇಯ :—ಮಂಗಳಕರರಾದ ಮಾತೆಯರೇ ನೀವು ಭಯಪಡಬೇಡಿ. ನಾನಿರುವಾಗ ನಿಮಗೇತರ ಭಯ. ಎಲೌ ಮಾತೆಯರೇ, ತಪ್ಪಿಸಿಕೊಳ್ಳಲಾಗದ ಕರ್ಮಪಾಶದಿಂದ ಯಾರೂ ಕೂಡ ವಿಮುಕ್ತಿಪಡೆಯಲಾರರು.

೧೧. ಈ ಮಧ್ಯೆ ಸೇನಾಪತಿಯಾದ ನಂದಿಕೇಶ್ವರನು ಆ ಕೃತ್ತಿಕಾಮಾತೆಯರ ಎದುರಿನಲ್ಲಿ ಬಂದು ಆ ಷಣ್ಮುಖನನ್ನು ಕುರಿತಿಂತೆಂದನು.

೧೨. ನಂದಿಕೇಶ್ವರ :—ಎಲೈ ಸಹೋದರನಾದ ಷಣ್ಮುಖನೇ, ನಿನ್ನ ತಾಯಿಯಿಂದಲೂ, ಜಗತ್ಸಂಹಾರಕನಾದ ಶಿವನಿಂದಲೂ, ದೇವೇಂದ್ರನಿಂದಲೂ ಬಂದಿರುವ ಶುಭಕರವಾದ ಸಂದೇಶವನ್ನು ಹೇಳುವೆನು ಕೇಳು.

೧೩. ಕೈಲಾಸದಲ್ಲಿ ಬ್ರಹ್ಮವಿಷ್ಣುಮಹೇಶ್ವರಾದಿ ಸಕಲ ದೇವತೆಗಳೂ, ಶ್ರೀ ಗಣೇಶನ ಜನ್ಮೋತ್ಸವ ಮಂಗಳವನ್ನಾಚರಿಸುತ್ತ ಸಭೆಯಲ್ಲಿ ಕುಳಿತಿದ್ದರು.

೧೪. ಆಗ ಪರ್ವತರಾಜನ ಪುತ್ರಿಯಾದ ಪಾರ್ವತಿಯು, ಜಗತ್ಪರಿಪಾಲಕನಾದ ವಿಷ್ಣುವನ್ನು ಕುರಿತು, ನಿನ್ನ ಸಮಾಚಾರವನ್ನು ಕೇಳಿ, ಕರೆತರಬೇಕೆಂದು ಹೇಳಿದಳು.

ಪಪ್ರಚ್ಛ ದೇವಾನ್ವಿಷ್ಣುಸ್ತಾನ್ಸ್ವಮೇಶಾವಾಪ್ತಿಹೇತವೇ ।
ಪ್ರತ್ಯುತ್ತರಂ ದದುಸ್ತೇ ತು ಪ್ರತ್ಯೇಕಂ ಚ ಯಥೋಚಿತಂ || ೧೫ ||

ತ್ವಮತ್ರ ಕೃತ್ತಿಕಾಸ್ಥಾನೇ ಕಥಯಾಮಾಸುರೀಶ್ವರಂ ।
ಸರ್ವೇ ಧರ್ಮಾದಯೋ ದೇವಾ ಧರ್ಮಾಧರ್ಮಸ್ಯ ಸಾಕ್ಷಿಣಃ || ೧೬ ||

ಯಾ ಬಭೂವ ರಹಃ ಕ್ರೀಡಾ ಪಾರ್ವತೀಶಿವಯೋಃ ಪುರಾ ।
ದೃಷ್ಟಸ್ಯ ಚ ಸುರೈಃ ಶಂಭೋರ್ವೀರ್ಯಂ ಭೂಮೌ ಪಪಾತ ಹ ||
ಭೂಮಿಸ್ತದಕ್ಷಿಪದ್ವಹ್ನೌ ವಹ್ನಿಶ್ಚ ಶರಕಾನನೇ ।
ತತೋ ಲಬ್ಧಃ ಕೃತ್ತಿಕಾಭಿರಮೂಭಿರ್ಗಚ್ಛ ಸಾಂಪ್ರತಂ || ೧೭ ||

ತವಾಭಿಷೇಕಂ ವಿಷ್ಣುಶ್ಚ ಕರಿಷ್ಯತಿ ಸುರೈಃ ಸಹ ।
ಶಸ್ತ್ರಂ ಲಬ್ಧ್ವಾಖಿಲಂ ದೇವತಾರಕಂ ಸಂಹನಿಷ್ಯಸಿ ।
ಪುತ್ರಸ್ತ್ವಂ ವಿಶ್ವಸಂಹರ್ತುಸ್ತ್ವಾಂ ಗೋಪ್ತುಂ ನ ಕ್ಷಮಾ ಇಮಾಃ || ೧೮ ||

---

೧೫. ಆಗ ವಿಷ್ಣುವು, ನಿನ್ನ ಸಮಾಚಾರವನ್ನು ತಿಳಿಯಲು ದೇವತೆಗಳೆಲ್ಲರಿಗೂ ಹೇಳಿದನು. ದೇವತೆಗಳೆಲ್ಲರೂ ಒಬ್ಬೊಬ್ಬರಾಗಿ ಉಚಿತವರಿತು ಉತ್ತರವಿತ್ತರು.

೧೬. ಅನಂತರ ಧರ್ಮಾಧರ್ಮಕ್ಕೆ ಸಾಕ್ಷಿಸ್ವರೂಪರಾದ ಧರ್ಮಾದಿದೇವತೆಗಳು, ನೀನು ಕೃತ್ತಿಕಾಮಾತೆಯರ ಮಂದಿರದಲ್ಲಿರುವುದನ್ನು ವಿಷ್ಣುವಿಗೆ ಬಿನ್ನವಿಸಿಕೊಂಡರು.

೧೭. ಪೂರ್ವದಲ್ಲಿ ಶಿವಪಾರ್ವತಿಯರು ಏಕಾಂತದಲ್ಲಿ ರತಿಕ್ರೀಡೆಯಾಡುತ್ತಿದ್ದಾಗ, ದೇವತೆಗಳು ಬಂದು ರತಿಭಂಗಮಾಡಲು ಕೂಡಲೆ ಮೇಲಕ್ಕೆ ಎದ್ದ ಶಿವನ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಆಗ ಭೂಮಿಯು ಆ ವೀರ್ಯವನ್ನು ಅಗ್ನಿಯಲ್ಲಿಯೂ, ಅಗ್ನಿಯು ಲಾಳದ ಗುತ್ತಿಯಲ್ಲಿಯೂ ತ್ಯಜಿಸಲು ಅಲ್ಲಿ ಶಿಶುರೂಪದಿಂದಿದ್ದ ನಿನ್ನನ್ನು ಕೃತ್ತಿಕಾಮಾತೆಯರು ಪಡೆದರು. ಆದುದರಿಂದ ನೀನೀಗ ಶಿವನ ಸಮೀಪಕ್ಕೆ ಹೋಗು.

೧೮. ವಿಷ್ಣುವು ದೇವತೆಗಳೊಡಗೂಡಿ ನಿನಗೆ ಸೇನಾಪತಿ ಪದವಿಯನ್ನು ಕೊಡುವನು. ಅನಂತರ ದಿವ್ಯಶಸ್ತ್ರಧಾರಿಯಾಗಿ ತಾರಕಾಸುರನನ್ನು ಸಂಹರಿಸುವೆ. ವಿಶ್ವಸಂಹಾರಕನಾದ ಶಿವನ ಪುತ್ರನಾದ ನಿನ್ನನ್ನು ಅಬಲೆಯರಾದ ಈ ಕೃತ್ತಿಕೆಯರು ಹೇಗೆ ರಕ್ಷಿಸಿಯಾರು ?

ನಾಗ್ನಿಂ ಗೋಪ್ತುಂ ಯಥಾ ಶಕ್ತಃ ಶುಷ್ಕವೃಕ್ಷಃ ಸ್ವಕೋಟರೇ ।
ದೀಪ್ತಿಮಾಂಸ್ತ್ವಂ ಚ ವಿಶ್ವೇಷು ತಾಸಾಂ ಗೇಹೇಷು ಶೋಭಸೇ ।
ಯಥಾ ಪತನ್ಮಹಾಕೂಪೇ ದ್ವಿಜರಾಜೋ ನ ರಾಜತೇ || ೧೯ ||

ಕರೋಷಿ ಜಗದಾಲೋಕಂ ನಾಚ್ಛನ್ನೋಽಸ್ಯಾಂಗತೇಜಸಾ ।
ಯಥಾ ಸೂರ್ಯಃ ಕರಾಚ್ಛನ್ನೋ ನ ಭವೇತ್ಪೂರುಷಸ್ಯ ಚ || ೨೦

ವಿಷ್ಣುಸ್ತ್ವಂ ಚ ಜಗದ್ವ್ಯಾಪೀ ನಾಸಾಂ ವ್ಯಾಪ್ಯೋಽಸಿ ಶಾಂಭವ ।
ಯಥಾ ನ ಕೇಷಾಂ ವ್ಯಾಪ್ಯಂ ಚ ತತ್ಸರ್ವವ್ಯಾಪಕಂ ನಭಃ || ೨೧ ||

ಯೋಗೀಂದ್ರೋ ನಾನುಲಿಪ್ತಸ್ತ್ವಂ ಭೋಗೀ ಚ ಪರಿಪೋಷಣೇ ।
ನೈವ ಲಿಪ್ತೋ ಯಥಾತ್ಮಾ ಚ ಕರ್ಮಭೋಗೇಷು ಜೀವಿನಾಂ || ೨೨ ||

ವಿಶ್ವಾಧಾರಸ್ತ್ವಮಾಶಕ್ತ ನಾವೃತೇ ಸಂಭವೇತ್ಸ್ಥಿತಿಃ ।
ಸಾಗರಸ್ಯ ಯಥಾ ನದ್ಯಾಂ ಸರಿತಾಮಾಶ್ರಯಸ್ಯ ಚ || ೨೩ ||

೧೯. ಒಣಗಿದ ಮರವು ತನ್ನ ಪೊಟರೆಯೊಳಗೆ ಅಗ್ನಿಯನ್ನು ಕಾಪಾಡಿಕೊಳ್ಳಲು ಶಕ್ಯವಾಗುವುದೇ? ಈ ಕೃತ್ತಿಕಾಮಾತೆಯರ ಮಂದಿರದಲ್ಲಿ ತೇಜೋಮಯನಾದ ನೀನಿರುವುದು ಆಳವಾದ ಭಾವಿಯಲ್ಲಿ ಉಡುರಾಜನು ಬಿದ್ದಿರುವಂತೆ ತೋರುವುದು.

೨೦. ಮನುಷ್ಯನ ಕೈಯಿಂದ ಮರೆಮಾಡಲ್ಪಡಲಾಗದ ಸೂರ್ಯನು ಬೆಳಕನ್ನು ಕೊಡುವಂತೆ, ಈ ಕೃತ್ತಿಕಾಮಾತೆಯರಿಂದ ಮರೆಮಾಡಲ್ಪಡದಿರುವ ನೀನು ಜಗತ್ತಿನಲ್ಲಿ ಕೀರ್ತಿಯನ್ನು ಗಳಿಸುವೆ.

೨೧. ಎಲೈ ಶಾಂಭವನೇ, ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವ ಆಕಾಶವನ್ನು ಯಾರೂ ವ್ಯಾಪಿಸಲಾಗದಂತೆ, ಜಗದ್ವ್ಯಾಪಿಗಳಾದ ವಿಷ್ಣುವನ್ನೂ, ನಿನ್ನನ್ನೂ ಈ ಕೃತ್ತಿಕಾಮಾತೆಯರು ಹೇಗೆ ವ್ಯಾಪಿಸಿಕೊಂಡಾರು ?

೨೨ ಜೀವಿಗಳ ಕರ್ಮಫಲಭೋಗದಲ್ಲಿ ಆತ್ಮನು ನಿರ್ಲಿಪ್ತನಾಗಿರುವಂತೆ, ಯೋಗಿಶ್ರೇಷ್ಠನಾದ ನೀನೂ, ಕರ್ಮಭೋಗಗಳ ಲೇಪರಹಿತನಾಗಿರುವೆ.

೨೩ ನದಿಗಳಿಗೆಲ್ಲ ಅಶ್ರಯವಾದ ಸಮುದ್ರವು ನದಿಯಲ್ಲಿ ಅಡಕವಾಗದಿರುವಂತೆ, ವಿಶ್ವಾಧಾರನಾದ ನೀನು ಸಂಕುಚಿತವಾಗಿರುವುದುಚಿತವಲ್ಲ.

ನ ಹಿ ಸರ್ವೇಶ್ವರಾವಾಸಃ ಸಂಭವೇತ್ಕೃತ್ತಿಕಾಲಯೇ ।
ಗರುಡಸ್ಯ ಯಥಾವಾಸಃ ಕ್ಷುದ್ರೇ ಚ ಚಟಿಕೋದರೇ ॥ ೨೪ ॥

ತ್ವಾಂ ಚ ದೇವಾ ನ ಜಾನಂತಿ ಭಕ್ತಾನುಗ್ರಹವಿಗ್ರಹಂ ।
ಗುಣಾನಾಂ ತೇಜಸಾಂ ರಾಶಿಂ ಯಥಾಜ್ಞಾನಮಯೋಗಿನಃ ॥ ೨೫ ॥

ತ್ವಾಮನಿರ್ವಚನೀಯಂ ಚ ಕಥಂ ಜಾನಂತಿ ಕೃತ್ತಿಕಾಃ ।
ಯಥಾ ಪರಾಂ ಹರೇರ್ಭಕ್ತಿಮಭಕ್ತಾ ಮೂಢಚೇತಸಃ ॥ ೨೬ ॥

ಭ್ರಾತರ್ಯೇ ಯಂ ನ ಜಾನಂತಿ ತೇ ತಂ ಕುರ್ವಂತ್ಯನಾದರಂ ।
ನಾದ್ರಿಯಂತೇ ಯಥಾ ಭೇಕಾಸ್ತ್ವೇಕಾವಾಸಂ ಚ ಪಂಕಜಂ ॥ ೨೭ ॥

೨೪. ಪಕ್ಷಿರಾಜನಾದ ಗರುಡನು ಗುಬ್ಬಚ್ಚಿಯ ಹೊಟ್ಟೆಯಲ್ಲಿ ಸೇರುವುದನುಚಿತವಾಗಿರುವಂತೆ, ಸರ್ವೇಶ್ವರನಾದ ನೀನು ಕೃತ್ತಿಕೆಯರ ಮನೆಯಲ್ಲಿರುವುದು ಅನುಚಿತವಾಗಿರುವುದು.

೨೫. ಯೋಗಾಭ್ಯಾಸರಹಿತರು ಆತ್ಮಜ್ಞಾನವನ್ನರಿಯದಿರುವಂತೆ, ಭಕ್ತಾನುಗ್ರಹವಿಗ್ರಹನೂ, ಗುಣಗಣಿಯೂ, ತೇಜೋರಾಶಿಯೂ ಆದ ನಿನ್ನ ಮಹಿಮೆಯನ್ನು ದೇವತೆಗಳರಿಯರು.

೨೬. ಹರಿಭಕ್ತರಲ್ಲದ ಮೂಢರು ಶ್ರೇಷ್ಠವಾದ ಹರಿಭಕ್ತಿಯ ಮಹಿಮೆಯನ್ನರಿಯಲಾಗದಂತೆ, ಅನಿರ್ವಚನೀಯನಾದ ನಿನ್ನ ಸ್ವರೂಪವನ್ನು ಕೃತ್ತಿಕೆಯರು ಅರಿಯಲಾರರು.

೨೭. ಸಹೋದರನೇ, ಯಾರು ಯಾರ ಮಹಿಮೆಯನ್ನು ಅರಿಯರೋ, ಅವರು ಅವರನ್ನು ಆದರಿಸುವುದಿಲ್ಲ ಕಪ್ಪೆಗಳು ಮತ್ತು ತಾವರೆಯೂ ಒಂದೇ ಸರೋವರದಲ್ಲಿದ್ದರೂ ಕೂಡ ತಾವರೆಯ ಮಹಿಮೆಯನ್ನು ತಿಳಿಯದೆ ಕಪ್ಪೆಗಳು ಅದನ್ನು ಅಸಡ್ಡೆ ಮಾಡುವುವು.

|| ಕಾರ್ತಿಕೇಯ ಉವಾಚ ||

ಭ್ರಾತಃ ಸರ್ವಂ ವಿಜಾನಾಮಿ ಜ್ಞಾನಂ ತ್ರೈಕಾಲಿಕಂ ಚ ಯತ್ ।
ಜ್ಞಾನೀ ತ್ವಂ ಕಾ ಪ್ರಶಂಸಾ ತೇ ಯತೋ ಮೃತ್ಯುಂಜಯಾಶ್ರಿತಃ || ೨೮ ||

ಕರ್ಮಣಾ ಜನ್ಮ ಯೇಷಾಂ ವಾ ಯಾಸು ಯಾಸು ಚ ಯೋನಿಷು ।
ತಾಸು ತೇ ನಿರ್ವೃತಿಂ ಭ್ರಾತರ್ಲಭಂತಿ ಚ ಸಂತತಂ || ೨೯ ||

ಯೇ ಯತ್ರ ಸಂತಿ ಸಂತೋ ವಾ ಮೂಢಾ ವಾ ಕರ್ಮಭೋಗತಃ ।
ತೇಽಪಿ ತಂ ಬಹುಮನ್ಯಂತೇ ಮೋಹಿತಾ ವಿಷ್ಣುಮಾಯಯಾ || ೩೦ ||

ಸಾಂಪ್ರತಂ ಜಗತಾಂ ಮಾತಾ ವಿಷ್ಣುಮಾಯಾ ಸನಾತನೀ ।
ಸರ್ವಾದ್ಯಾ ವಿಷ್ಣುಮಾಯಾ ಚ ಸರ್ವದಾ ವಿಷ್ಣುಮಂಗಲಾ || ೩೧ ||

ಶೈಲೇಂದ್ರಪತ್ನೀಗರ್ಭೇ ಸಾ ಚಾಲಭಜ್ಜನ್ಮ ಭಾರತೇ ।
ದಾರುಣಂ ಚ ತಪಸ್ತಪ್ತ್ವಾ ಸಂಪ್ರಾಪಚ್ಛಂಕರಂ ಪತಿಂ || ೩೨ ||

---

೨೮. ಕಾರ್ತಿಕೇಯ :— ಸಹೋದರನಾದ ನಂದಿಕೇಶ್ವರನೇ, ತ್ರಿಕಾಲಾಬಾಧಿತವಾದ ದಿವ್ಯಜ್ಞಾನವನ್ನು ನಾನು ಬಲ್ಲೆನು. ಮೃತ್ಯುಂಜಯನ ಸೇವಕನಾದ ನೀನು ಜ್ಞಾನಿಯಾಗಿರುವುದರಲ್ಲಿ ಹೆಚ್ಚೇನು ?

೨೯ ಸಹೋದರನೇ, ಕರ್ಮಾನುಗುಣವಾಗಿ ಯಾರಿಗೆ ಯಾವ ಜನ್ಮ ಲಭಿಸುವುದೋ, ಆ ಜನ್ಮದಲ್ಲಿಯೇ ಅವರಿಗೆ ಮುಕ್ತಿಯು ಲಭಿಸುವುದಿಲ್ಲ

೩೦ ಸಂತರಾಗಲೀ ಮೂಢರಾಗಲೀ ಕರ್ಮಾನುಗುಣವಾಗಿ ಯಾವ ಜನ ವೆತ್ತುವರೋ, ಅದನ್ನೇ ವಿಷ್ಣುಮಾಯೆಗೊಳಗಾಗಿ ಶ್ರೇಷ್ಠವೆಂದು ತಿಳಿಯುವರು.

೩೧-೩೨ ಪ್ರಕೃತದಲ್ಲಿ ಜಗನ್ಮಾತೆಯೂ, ವಿಷ್ಣುಮಾಯೆಯೂ, ಸನಾತನಿಯೂ ಆದ ಪ್ರಕೃತಿಯು ಭರತಖಂಡದಲ್ಲಿ ಪರ್ವತರಾಜನ ಪತ್ನಿಯ ಗರ್ಭದಲ್ಲಿ ಜನ್ಮವೆತ್ತಿ, ಕಷ್ಟತಮವಾದ ತಪವೆಸಗಿ ಶಂಕರನನ್ನು ವರಿಸಿದ್ದಾಳೆ.

ಬ್ರಹ್ಮಾದಿತೃಣಪರ್ಯಂತಂ ಸರ್ವಂ ಮಿಥ್ಯೈವ ಕೃತ್ರಿಮಂ ।
ಸರ್ವೇ ಕೃಷ್ಣೋದ್ಭವಾಃ ಕಾಲೇ ವಿಲೀನಾಸ್ತತ್ರ ಕೇವಲಂ ॥ ೩೩ ॥

ಕಲ್ಪೇ ಕಲ್ಪೇ ಜಗನ್ಮಾತಾ ಮಾತಾ ಮೇ ಪ್ರತಿಜನ್ಮನಿ ।
ಯಜ್ಜನ್ಮ ಮಾಯಯಾ ಬದ್ಧೋ ನಿತ್ಯಃ ಸೃಷ್ಟಿವಿಧಾವಹಂ ॥ ೩೪ ॥

ಪ್ರಕೃತೇರುದ್ಭವಾಸ್ಸತ್ಯಂ ಜಗತ್ಯಾಂ ಸರ್ವಯೋಷಿತಃ ।
ಕಾಶ್ಚಿದಂಶಾಃ ಕಲಾಃ ಕಾಶ್ಚಿತ್ಕಲಾಂಶಾಂಶೇನ ಕಾಶ್ಚನ ॥ ೩೫ ॥

ಕೃತ್ತಿಕಾಜ್ಞಾನವತ್ಯಶ್ಚ ಯೋಗಿನ್ಯಃ ಪ್ರಕೃತೇಃ ಕಲಾಃ ।
ಸ್ತನ್ಯೈಶ್ಚ ಸಂವರ್ಧಿತೋಽಹಮುಪಹಾರೇಣ ಸಂತತಂ ॥ ೩೬ ॥

೩೩. ಬ್ರಹ್ಮನಿಂದ ತೃಣಪರ್ಯಂತವಾಗಿರುವ ನಿಖಿಲ ಪ್ರಪಂಚವೂ ಕೃತ್ರಿಮವೂ, ಸುಳ್ಳೂ ಆದುದು ಕಾಲಮಹಿಮೆಯಿಂದ ಅವೆಲ್ಲವೂ, ಶ್ರೀಕೃಷ್ಣನಿಂದ ಆವಿರ್ಭವಿಸಿ ಕಾಲಾನುಗಣವಾಗಿ ಅವನಲ್ಲಿಯೇ ಐಕ್ಯವಾಗುವುವು.

೩೪. ಪ್ರತಿಯೊಂದು ಕಲ್ಪದ ಪ್ರತಿಜನ್ಮದಲ್ಲಿಯೂ ಜಗನ್ಮಾತೆಯಾದ ಪಾರ್ವತಿಯೇ ನನಗೆ ಮಾತೆಯಾಗುವಳು. ನನ್ನ ಜನ್ಮವು ಮಾಯಾಬದ್ಧವಾಗಿರುವುದು. ಸೃಷ್ಟಿಯಲ್ಲಿ ನಾನು ನಿತ್ಯನಾಗಿರುವೆನು.

೩೫. ಜಗತ್ತಿನಲ್ಲಿರುವ ಸಕಲ ಸ್ತ್ರೀಯರೂ ಪ್ರಕೃತಿಯಿಂದ ಉದ್ಭವಿಸಿರುವುದು ನಿಜ. ಕೆಲವರು ಪ್ರಕೃತಿಯ ಅಂಶದಿಂದಲೂ, ಕೆಲವರು ಕಲೆಯಿಂದಲೂ, ಕೆಲವರು ಕಲಾಂಶದಿಂದಲೂ ಉತ್ಪತ್ತಿ ಪಡೆದಿರುವರು.

೩೬ ಜ್ಞಾನಯೋಗಿನಿಯರಾದ ಕೃತ್ತಿಕೆಯರು ಪ್ರಕೃತಿಯ ಕಲೆಯಿಂದ ಅವತರಿಸಿದವರು. ಅವರ ಸ್ತನ್ಯದಿಂದಲೂ ಕೊಟ್ಟ ಉಪಹಾರದಿಂದಲೂ ನಾನು ಬೆಳೆದಿರುವೆನು.

ತಾಸಾಮಹಂ ಪೋಷ್ಯಪುತ್ರೋ ಮದಂಬಾಃ ಪೋಷಣಾದಿಮಾಃ ।
ತಸ್ಯಾಶ್ಚ ಪ್ರಕೃತೇಃ ಪುತ್ರೋ ಗತಸ್ತ್ವತ್ಸ್ವಾಮಿ ವೀರ್ಯತಃ　　॥ ೩೭ ॥

ನ ಗರ್ಭಜೋಽಹಂ ಶೈಲೇಂದ್ರಕನ್ಯಯಾ ನಂದಿಕೇಶ್ವರ ।
ಸಾ ಚ ಮೇ ಧರ್ಮತೋ ಮಾತಾ ತಥೇಮಾಃ ಸರ್ವಸಮ್ಮತಾಃ　　॥ ೩೮ ॥

ಸ್ತನದಾತ್ರೀ ಗರ್ಭದಾತ್ರೀ ಭಕ್ಷ್ಯದಾತ್ರೀ ಗುರುಪ್ರಿಯಾ ।
ಅಭೀಷ್ಟದೇವಪತ್ನೀ ಚ ಪಿತುಃ ಪತ್ನೀ ಚ ಕನ್ಯಕಾಃ　　॥ ೩೯ ॥

ಸಗರ್ಭಕನ್ಯಾ ಭಗಿನೀ ಪುತ್ರಪತ್ನೀ ಪ್ರಿಯಾಪ್ರಸೂಃ ।
ಮಾತುರ್ಮಾತಾ ಪಿತುರ್ಮಾತಾ ಸೋದರಸ್ಯ ಪ್ರಿಯಾ ತಥಾ　　॥ ೪೦ ॥

ಮಾತುಃ ಪಿತುಶ್ಚ ಭಗಿನೀ ಮಾತುಲಾನಿ ತಥೈವ ಚ ।
ಜನಾನಾಂ ವೇದವಿಹಿತಾ ಮಾತರಃ ಷೋಡಶಸ್ಮೃತಾಃ　　॥ ೪೧ ॥

---

೩೭. ಅವರು ನನ್ನನ್ನು ಪೋಷಿಸಿದುದರಿಂದ ಅವರಿಗೆ ನಾನು ಪೋಷ್ಯ ಪುತ್ರನೂ, ನನಗೆ ಅವರು ಮಾತೆಯರೂ ಆಗಬೇಕು. ನಿನ್ನ ಒಡೆಯನಾದ ಶಿವನ ವೀರ್ಯದಿಂದ ಜನಿಸಿ, ಆ ಪ್ರಕೃತಿಗೂ ಪುತ್ರನಾದೆನು.

೩೮. ನಂದಿಕೇಶ್ವರನೇ, ನಾನು ಶೈಲರಾಜನ ಕನ್ಯೆಯಾದ ಪಾರ್ವತಿಯ ಗರ್ಭದಲ್ಲಿ ಹುಟ್ಟಿದವನಲ್ಲ. ಯಾವ ಧರ್ಮದಿಂದ ಆಕೆಯು ನನಗೆ ತಾಯಿಯೆನಿಸು ವಳೋ ಅದೇ ಧರ್ಮದಿಂದ ಈ ಕೃತ್ತಿಕೆಯರೂ ತಾಯಿಯರಾಗುವರು.

೩೯. ಸ್ತನ್ಯಪಾನಮಾಡಿಸಿದವಳು, ಗರ್ಭದಲ್ಲಿ ಧರಿಸಿದ್ದವಳು, ಆಹಾರ ಕೊಟ್ಟು ಪೋಷಿಸಿದವಳು, ಗುರುಪತ್ನಿ, ಇಷ್ಟದೇವರ ಪತ್ನಿ, ತಂದೆಯ ಹೆಂಡತಿ ಮತ್ತು ಹೆಣ್ಣುಮಕ್ಕಳು ತಾಯಿಗೆ ಸಮಾನರು.

೪೦–೪೧. ಅಂತೆಯೇ, ಸಹೋದರನ ಮಗಳು, ಸಹೋದರಿ, ಮಗನ ಹೆಂಡತಿ ಮತ್ತು ಹೆಂಡತಿಯ ತಾಯಿ, ತಾಯಿಯ ತಾಯಿ ಮತ್ತು ತಂದೆಯ ತಾಯಿ, ಸಹೋದರನ ಹೆಂಡತಿ, ತಾಯಿಯ ಸಹೋದರಿ ಮತ್ತು ತಂದೆಯ ಸಹೋದರಿ, ಸೋದರಮಾವನ ಹೆಂಡತಿ ಒಟ್ಟು ಈ ಹದಿನಾರು ಮಂದಿ ಮನುಜನಿಗೆ ತಾಯಿ ಯೆನಿಸಿಕೊಳ್ಳುವರೆಂದು ವೇದೋಕ್ತವಾಗಿದೆ.

ಇಮಾಶ್ಚ ಸರ್ವಸಿದ್ಧಿಜ್ಞಾಃ ಪರಮೈಶ್ವರ್ಯಸಂಯುತಾಃ ।
ನ ಕ್ಷುದ್ರಾ ಬ್ರಹ್ಮಣಃ ಕನ್ಯಾಸ್ತ್ರಿಷು ಲೋಕೇಷು ಪೂಜಿತಾಃ ॥ ೪೨ ॥

ವಿಷ್ಣುನಾ ಪ್ರೇರಿತಸ್ತ್ವಂ ಚ ಶಂಭೋಃ ಪುತ್ರಸಮೋ ಮಹಾನ್ ।
ಗಚ್ಛ ಯಾಮಿ ತ್ವಯಾ ಸಾರ್ಧಂ ದ್ರಕ್ಷ್ಯಾಮಿ ಸುರಸಂಚಯಂ ॥ ೪೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಶ್ರೀಗಣೇಶಖಂಡೇ
ನಾರದನಾರಾಯಣಸಂವಾದೇ ನಂದಿಕಾರ್ತಿಕೇಯಸಂವಾದೋ
ನಾಮ ಪಂಚದಶೋಽಧ್ಯಾಯಃ

೪೨. ಈ ಕೃತ್ತಿಕಾಮಾತೆಯರಾದರೋ ಸಕಲ ಸಿದ್ಧಿಯನ್ನೂ ಸಕಲೈಶ್ವರ್ಯವನ್ನೂ ಪಡೆದಿರುವರು. ಬ್ರಹ್ಮನ ಕನ್ಯೆಯರೂ ತ್ರಿಲೋಕಪೂಜಿತೆಯರೂ ಆದ ಇವರು ಕ್ಷುದ್ರರಲ್ಲ.

೪೩. ಮಹಾತ್ಮನೂ ಈಶ್ವರನಿಗೆ ಪುತ್ರಸಮನೂ ಆದ ನೀನು ವಿಷ್ಣುವಿನಿಂದ ಪ್ರೇರಿತನಾಗಿ ಇಲ್ಲಿಗೆ ಬಂದಿರುವೆ. ನಡೆ, ನಿನ್ನೊಡನೆ ನಾನೂ ಬಂದು ದೇವತೆಗಳ ಸಮೂಹವನ್ನು ಸಂದರ್ಶಿಸುವೆನು.

ಇಲ್ಲಿಗೆ ಗಣೇಶಖಂಡದಲ್ಲಿ ನಂದಿ ಮತ್ತು ಷಣ್ಮುಖನ ಸಂವಾದರೂಪವಾದ
ಹದಿನೈದನೆಯ ಅಧ್ಯಾಯವು ಮುಗಿದುದು.



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ಷೋಡಶೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಇತ್ಯೇವಮುಕ್ತ್ವಾ ತಂ ಶೀಘ್ರಂ ಬೋಧಯಿತ್ವಾ ಚ ಕೃತ್ತಿಕಾಃ ।
ಉವಾಚ ಕಿಂಚಿದ್ವ್ಯಕ್ತಂ ಚ ವಚನಂ ಶಂಕರಾತ್ಮಜಃ ॥ ೧ ॥

॥ ಕಾರ್ತಿಕೇಯ ಉವಾಚ ॥

ಯಾಸ್ಯಾಮಿ ಶಂಕರಸ್ಥಾನಂ ದ್ರಕ್ಷ್ಯಾಮಿ ಸುರಸಂಚಯಂ ।
ಮಾತರಂ ಬಂಧುವರ್ಗಾಂಶ್ಚ ಸ್ವಾಜ್ಞಾಂ ಮೇ ದತ್ತ ಮಾತರಃ ॥ ೨ ॥

---

### ಹದಿನಾರನೆಯ ಅಧ್ಯಾಯವು

೧. ನಾರಾಯಣ :—ಶಂಕರನ ಮಗನಾದ ಕಾರ್ತಿಕೇಯನು ನಂದಿಕೇಶ್ವರನನ್ನು ಕುರಿತು ಇಂತು ನುಡಿದು, ಅನಂತರ ಕೃತ್ತಿಕಾಮಾತೆಯರನ್ನು ಸಮಾಧಾನಗೊಳಿಸಿ ಸಮಯೋಚಿತವಾದ ಕೆಲವು ಮಾತುಗಳನ್ನಾಡಿದನು.

೨. ಕಾರ್ತಿಕೇಯ :—ಎಲೈ ಮಾತೆಯರೇ, ನಾನು ಶಂಕರನಿರುವೆಡೆಗೆ ಹೋಗಿ ದೇವತೆಗಳನ್ನೂ, ತಾಯಿಯಾದ ಪಾರ್ವತಿಯನ್ನೂ, ಬಂಧುಬಳಗದವರನ್ನೂ ನೋಡಬಯಸುವೆನು ನನಗೆ ಅಪ್ಪಣೆಯಾಗಬೇಕು.

## ಹದಿನೈದನೆಯ ಅಧ್ಯಾಯದ ಸಾರಾಂಶ

ಮಗನ ಸಮಾಚಾರವನ್ನು ಕೇಳಿದ ಶಿವನು ಅವನನ್ನು ಕರೆತರಲು ತನ್ನ ಪ್ರಮಥ ಗಣವನ್ನೆಲ್ಲ ಕಳುಹಿಸಿದನು. ಅವರು ಬಂದುದನ್ನು ಕಂಡು ಭಯಗೊಂಡ ಕೃತ್ತಿಕೆಯರು ಷಣ್ಮುಖನನ್ನೆತ್ತಿಕೊಂಡು, ಎಲ್ಲ ಸಮಾಚಾರವನ್ನೂ ತಿಳಿಸಿದರು. ಆಗ ಷಣ್ಮುಖನು ಮಾತೆಯರನ್ನು ಸಮಾಧಾನಗೊಳಿಸುತ್ತಿರಲು, ಸೇನಾಪತಿಯಾದ ನಂದಿಕೇಶ್ವರನು ಮುಂದೆ ಬಂದು, ಷಣ್ಮುಖನನ್ನು ಕುರಿತಿಂತೆಂದನು. 'ಎಲೈ ಕಾರ್ತಿಕೇಯನೇ, ನೀನು ಶಿವನ ವೀರ್ಯದಿಂದ ಜನಿಸಿರುವೆಯಾದುದರಿಂದ, ಕೈಲಾಸಕ್ಕೆ ಹೋಗಿ ದೇವತೆಗಳ ಸೇನಾನಾಯಕನಾಗಿ, ತಾರಕಾಸುರನ ವಧೆಮಾಡು. ಅಬಲೆಯರಾದ ಈ ಕೃತ್ತಿಕೆಯರು ನಿನ್ನನ್ನು ರಕ್ಷಿಸಲಾರರು. ವಿಶ್ವವ್ಯಾಪಕನಾದ ನಿನ್ನ ಮಹಿಮೆಯು ನೀನಿಲ್ಲಿದ್ದರೆ ಬೆಳಕಿಗೆ ಬರುವುದಿಲ್ಲ.' ಎಂದಾಡಿದ ನಂದೀಶ್ವರನ ನುಡಿಯನ್ನು ಕೇಳಿ ಷಣ್ಮುಖನು, ಪಾರ್ವತಿಯಂತೆ ಕೃತ್ತಿಕೆಯರು ತನಗೆ ತಾಯಿಯರಾದುದರಿಂದ ಅವರನ್ನು ಅಸಡ್ಡೆ ಮಾಡಲಾಗದೆಂದು ಹೇಳಿ ಅವನ ಜತೆಯಲ್ಲಿ ಕೈಲಾಸಕ್ಕೆ ಹೊರಟನು.



ದೈವಾಧೀನಂ ಜಗತ್ಸರ್ವಂ ಜನ್ಮ ಕರ್ಮ ಶುಭಾವಹಂ ।
ಸಂಯೋಗಶ್ಚ ವಿಯೋಗಶ್ಚ ನ ಚ ದೈವಾತ್ಪರಂ ಬಲಂ ॥ ೩ ॥

ಕೃಷ್ಣಾಯತ್ತಂ ಚ ತದ್ದೈವಂ ಸ ಚ ದೈವಾತ್ಪರಸ್ತತಃ ।
ಭಜಂತಿ ಸತತಂ ಸಂತಃ ಪರಮಾತ್ಮಾನಮೀಶ್ವರಂ ॥ ೪ ॥

ದೈವಂ ವರ್ಧಯಿತುಂ ಶಕ್ತಃ ಕ್ಷಯಂ ಕರ್ತುಂ ಸ್ವಲೀಲಯಾ ।
ನ ದೈವಬದ್ಧಸ್ತದ್ಭಕ್ತಶ್ಚಾವಿನಾಶೀತಿ ನಿರ್ಣಯಃ ॥ ೫ ॥

ತಸ್ಮಾದ್ಭಜತ ಗೋವಿಂದಂ ಮೋಹಂ ತ್ಯಜತ ದುಃಖದಂ ।
ಸುಖದಂ ಮೋಕ್ಷದಂ ಸಾರಂ ಜನ್ಮಮೃತ್ಯುಭಯಾಪಹಂ ॥ ೬ ॥

ಪರಮಾನಂದಜನನಂ ಮೋಹಜಾಲನಿಕೃಂತನಂ ।
ಶಶ್ವದ್ಭಜಂತಿ ಯತ್ಸರ್ವೇ ಬ್ರಹ್ಮವಿಷ್ಣುಶಿವಾದಯಃ ॥ ೭ ॥

---

೩. ಸಮಸ್ತ ಪ್ರಪಂಚವೂ, ಜನನಮರಣವೂ, ಶುಭಾಶುಭ ಕರ್ಮಗಳೂ, ಸಂಯೋಗ ವಿಯೋಗಗಳೂ ದೈವಾಧೀನವಾದುದು. ದೈವಕ್ಕಿಂತ ಬಲಿಷ್ಠವಾದುದು ಬೇರೊಂದಿಲ್ಲ.

೪. ದೈವವೆನಿಸಿಕೊಳ್ಳುವ ಆ ವಿಧಿಯು ಶ್ರೀಕೃಷ್ಣನಿಗೆ ಅಧೀನವಾದುದರಿಂದ ಶ್ರೀಕೃಷ್ಣಪರಮಾತ್ಮನು ಮಾತ್ರ ದೈವಕ್ಕಿಂತ ಬಲಿಷ್ಠನು. ಆದುದರಿಂದಲೇ ಸರ್ವೇಶ್ವರನಾದ ಶ್ರೀಕೃಷ್ಣಪರಮಾತ್ಮನನ್ನು ಸಂತರು ಸರ್ವದಾ ಭಜಿಸುತ್ತಾರೆ.

೫. ಆ ಪರಮಾತ್ಮನು ತನ್ನ ಲೀಲಾಮಹಿಮೆಯಿಂದ ವಿಧಿಯ ವೃದ್ಧಿ ಕ್ಷಯಗಳಿಗೆ ಕಾರಣನಾಗುವನು. ಆದುದರಿಂದ ಶ್ರೀಕೃಷ್ಣಭಕ್ತರು ವಿಧಿವಿಲಾಸಕ್ಕೆ ಸಿಲುಕುವುದಿಲ್ಲ. ವಿಷ್ಣುಭಕ್ತನು ಎಂದೆಂದಿಗೂ ನಾಶರಹಿತನಾಗಿರುವನು.

೬. ಆದುದರಿಂದ ದುಃಖದಾಯಕವಾದ ಅಜ್ಞಾನವನ್ನು ತೊರೆದು, ಮೋಕ್ಷ ಸುಖವನ್ನು ಕೊಡುವ, ಜನ್ಮಮೃತ್ಯುಜರಾಪಹಾರಕನಾದ ಗೋವಿಂದನನ್ನು ಎಲ್ಲರೂ ಭಜಿಸಬೇಕು.

೭. ಅಜ್ಞಾನಾಂಧಕಾರಪರಿಹಾರಕನೂ, ಪರಮಾನಂದದಾಯಕನೂ ಆದ ಪರಮಾತ್ಮನನ್ನು ಬ್ರಹ್ಮ, ವಿಷ್ಣು, ಶಿವಾದಿ ಸಕಲ ದೇವತೆಗಳೂ ಭಜಿಸುವರು.

ಕೋಽಹಂ ಭವಾಬ್ಧೌ ಯುಷ್ಮಾಕಂ ಕಾ ವಾ ಯೂಯಂ ಮಮಾತ್ಮಿಕಾಃ ।
ತತ್ಕರ್ಮ ಸ್ರೋತಸಾಂ ಸರ್ವಂ ಪುಂಜೀಭೂತಂ ಚ ಫೇನವತ್ ॥ ೮ ॥

ಸಂಶ್ಲೇಷಂ ವಾ ವಿಯೋಗಂ ವಾ ಸರ್ವಮೀಶ್ವರಚಿಂತಯಾ ।
ಬ್ರಹ್ಮಾಂಡಮೀಶ್ವರಾಧೀನಂ ನ ಸ್ವತಂತ್ರಂ ವಿದುರ್ಬುಧಾಃ ॥ ೯ ॥

ಜಲಬುದ್ಬುದವತ್ಸರ್ವಮನಿತ್ಯಂ ಚ ಜಗತ್ತ್ರಯಂ ।
ಮಾಯಾಮನಿತ್ಯೇ ಕುರ್ವಂತಿ ಮಾಯಯಾ ಮೂಢಚೇತಸಃ ॥ ೧೦ ॥

ಸಂತಸ್ತತ್ರ ನ ಲಿಪ್ಯಂತೇ ವಾಯುವತ್ಕೃಷ್ಣಚೇತಸಃ ।
ತಸ್ಮಾನ್ಮೋಽಹಂ ಪರಿತ್ಯಜ್ಯ ಚಾಜ್ಞಪ್ತಿಂ ದತ್ತಮಾತರಃ ॥ ೧೧ ॥

ಇತ್ಯೇವಮುಕ್ತ್ವಾ ತಾ ನತ್ವಾ ಸಾರ್ಧಂ ಶಂಕರಪಾರ್ಷದೈಃ ।
ಯಾತ್ರಾಂ ಚಕಾರ ಭಗವಾನ್ಮನಸಾ ಶ್ರೀಹರಿಂ ಸ್ಮರನ್ ॥ ೧೨ ॥

೮ ಈ ಸಂಸಾರವೆಂಬ ಸಮುದ್ರದಲ್ಲಿ ನಿಮಗೆ ನಾನ್ಯಾರು ? ಅಥವಾ ನನಗೆ ನೀವ್ಯಾರು ? ಸಮುದ್ರದ ಅಲೆಗಳಿಂದ ನೊರೆಯು ಒಂದೆಡೆ ಸೇರುವಂತೆ, ಕರ್ಮ ವಿಪಾಕದಿಂದ ನಾವು ಒಂದೆಡೆ ಸೇರಿರುನೆವು.

೯. ಪ್ರಾಣಿಗಳಿಗೆ ಪರಸ್ಪರ ಸಂಬಂಧವಾಗಲೀ, ವಿರಹವಾಗಲೀ ಈಶ್ವರೇಚ್ಛೆಯಂತೆ ನಡೆಯುವುದು ನಿಖಿಲ ಬ್ರಹ್ಮಾಂಡವೂ ಈಶ್ವರಾಧೀನವಾದುದೇ ಹೊರತು ಸ್ವತಂತ್ರವಾದುದಲ್ಲವೆಂಬುದನ್ನು ಪಂಡಿತರು ಬಲ್ಲರು.

೧೦ ಮೂರು ಲೋಕವೂ ನೀರಿನ ಗುಳ್ಳೆಯಂತೆ ಕ್ಷಣಿಕವಾದುದು. ಅನಿತ್ಯವಾದ ಈ ಪ್ರಪಂಚದಲ್ಲಿ ಅಜ್ಞಾನಿಗಳು, ನಿತ್ಯಬುದ್ಧಿಯನ್ನು ಹೊಂದಿರುವರು.

೧೧. ವಾಯುವು ಸರ್ವವ್ಯಾಪಕವಾಗಿದ್ದರೂ, ನಿರ್ಲಿಪ್ತವಾಗಿರುವಂತೆ ಕೃಷ್ಣ ಭಕ್ತರಾದ ಸಂತರು ಮಾಯೆಯಿಂದ ನಿರ್ಲಿಪ್ತರಾಗಿರುವರು. ಆದುದರಿಂದ ಎಲೌ ಮಾತೆಯರೇ, ನೀವು ಅಜ್ಞಾನವನ್ನು ಕಳೆದು ಜ್ಞಾನಿಗಳಾಗಿ ನನಗೆ ಹೋಗಲು ಅಪ್ಪಣೆಕೊಡಿ.

೧೨. ಕಾರ್ತಿಕೇಯನು ಹೀಗೆ ನುಡಿದು, ಆ ಮಾತೆಯರಿಗೆ ನಮಸ್ಕರಿಸಿ, ಮನಸ್ಸಿನಲ್ಲಿಯೇ ಶ್ರೀಹರಿಯನ್ನು ಸ್ಮರಿಸುತ್ತ ಶಿವನ ಪಾರ್ಷದರೊಡನೆ ತೆರಳಲನುವಾದನು.

ಏತಸ್ಮಿನ್ನಂತರೇ ತತ್ರ ದದರ್ಶ ರಥಮುತ್ತಮಂ ।
ವಿಶ್ವಕರ್ಮಕೃತಂ ರಮ್ಯಂ ಹೀರಕೇಣ ವಿರಾಜಿತಂ ॥ ೧೩ ॥

ಸದ್ರತ್ನಸಾರರಚಿತಂ ಮಾಣಿಕ್ಯೇನ ವಿರಾಜಿತಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈಶ್ಚ ಶೋಭಿತಂ ॥ ೧೪ ॥

ಮಣೀಂದ್ರದರ್ಪಣೈಃ ಶ್ವೇತಚಾಮರೈರತಿದೀಪಿತಂ ।
ಕ್ರೀಡಾರ್ಹಮಂದಿರೈ ರಮ್ಯೈಶ್ಚಿತ್ರೈಶ್ಚಿತ್ರಿತಂ ವರಂ ॥ ೧೫ ॥

ಶತಚಕ್ರಂ ಸುವಿಸ್ತೀರ್ಣಂ ಮನೋಯಾಯಿ ಮನೋಹರಂ ।
ಪ್ರಸ್ಥಾಪಿತಂ ಚ ಪಾರ್ವತ್ಯಾ ವೇಷ್ಟಿತಂ ಪಾರ್ಷದೈರ್ವರೈಃ ॥ ೧೬ ॥

ಸಮಾರುಹಂತಂ ಯಾನಂ ತಾ ಹೃದಯೇನ ವಿದೂಯತಾ ।
ಸಹಸಾ ಚೇತನಾಂ ಪ್ರಾಪ್ಯ ಮುಕ್ತಕೇಶ್ಯಃ ಶುಚಾತುರಾಃ ॥ ೧೭ ॥

೧೩. ಇಷ್ಟರೊಳಗೆ, ಅಲ್ಲಿಗೆ ವಿಶ್ವಕರ್ಮನಿಂದ ನಿರ್ಮಿತವಾಗಿ, ವಜ್ರವೈಡೂರ್ಯಾದಿಗಳಿಂದ ವಿರಾಜಿಸುತ್ತಿರುವ ಅತ್ಯುತ್ತಮವಾದ ರಥವೊಂದು ಬಂದಿತು.

೧೪. ಶ್ರೇಷ್ಠವಾದ ರತ್ನಗಳಿಂದಲೂ, ಮಾಣಿಕ್ಯಗಳಿಂದಲೂ ಖಚಿತವಾಗಿ, ಪಾರಿಜಾತಪುಷ್ಪಗಳ ಮಾಲೆಗಳಿಂದ ಪರಿಶೋಭಿತವಾಗಿ ಮಣಿದರ್ಪಣಗಳಿಂದಲೂ, ಶ್ವೇತಚಾಮರಗಳಿಂದಲೂ ದೀಪ್ತವಾಗಿದ್ದ ಆ ರಥವು ರಮ್ಯವಾದ ಅನೇಕ ಕ್ರೀಡಾಗೃಹಗಳಿಂದ ಚಿತ್ರವಿಚಿತ್ರವಾಗಿದ್ದಿತು.

೧೫. ನೂರು ಚಕ್ರಗಳಿಂದ ಕೂಡಿ ವಿಸ್ತೀರ್ಣವಾಗಿದ್ದ ಆ ರಥವು ಮನೋವೇಗಕ್ಕಿಂತಲೂ ವೇಗಗಾಮಿಯಾಗಿದ್ದಿತು. ಪಾರ್ವತಿಯು ಅದನ್ನು ತನ್ನ ಪಾರ್ಷದರೊಡನೆ ಕೊಟ್ಟು ಕಳುಹಿಸಿದಳು.

೧೬–೧೮. ಆ ದಿವ್ಯ ರಥವನ್ನು ಹತ್ತುತ್ತಿರುವ ಸ್ಕಂದನನ್ನು ನೋಡಿ, ಮೂರ್ಛೆಗೊಂಡಿದ್ದ ಕೃತ್ತಿಕೆಯರು ಚೇತನವನ್ನು ಪಡೆದು, ತಲೆಗೂದಲು ಕೆದರಿ

ದೃಷ್ಟ್ವಾ ಚ ಸ್ವ ಪುರಸ್ಕಂದಂ ಸ್ತಂಭಿತಾಶ್ಚಾತಿಶೋಕತಃ ।
ಉನ್ಮತ್ತಾ ಇವ ತತ್ರೈವ ವಕ್ತುಮಾರೇಭಿರೇ ಭಿಯಾ ॥ ೧೮ ॥

॥ ಕೃತ್ತಿಕಾ ಊಚುಃ ॥

ಕಿಂ ಕುರ್ಮಃ ಕ್ವ ಚ ಯಾಸ್ಯಾಮೋ ವಯಂ ವತ್ಸ ತ್ವದಾಶ್ರಯಾಃ ।
ವಿಹಾಯಾಸ್ಮಾನ್ಕ್ವ ಯಾಸಿ ತ್ವಂ ನಾಯಂ ಧರ್ಮಸ್ತವಾಧುನಾ ॥ ೧೯ ॥

ಸ್ನೇಹೇನ ವರ್ಧಿತೋಽಸ್ಮಾಭಿಃ ಪುತ್ರೋಽಸ್ಮಾಕಂ ಸ್ವಧರ್ಮತಃ ।
ನಾಯಂ ಧರ್ಮೋ ಮಾತೃವರ್ಗಾನನುರಕ್ತಾಃ ಸುತಸ್ತ್ಯಜೇತ್ ॥ ೨೦ ॥

ಇತ್ಯುಕ್ತ್ವಾ ಕೃತ್ತಿಕಾಃ ಸರ್ವಾಃ ಕೃತ್ವಾ ವಕ್ಷಸಿ ತಂ ಸುತಂ ।
ಪುನರ್ಮೂರ್ಛಾಮವಾಪುಸ್ತಾಃ ಸುತವಿಚ್ಛೇದದಾರುಣಂ ॥ ೨೧ ॥

ಕುಮಾರೋ ಬೋಧಯಿತ್ವಾ ತಾ ಅಧ್ಯಾತ್ಮವಚನೇನ ವೈ ।
ತಾಭಿಶ್ಚ ಪಾರ್ಷದೈಃ ಸಾರ್ಧಮಾರುರೋಹ ರಥಂ ಮುನೇ ॥ ೨೨ ॥

---

ಹೋಗಿರಲು, ಅತಿದುಃಖದಿಂದ ಸ್ತಂಭಿತರಾಗಿ, ಉನ್ಮತ್ತರಂತೆ ಪ್ರಲಾಪಮಾಡ ಲಾರಂಭಿಸಿದರು.

೧೯. ಕೃತ್ತಿಕೆಯರು:—ವತ್ಸನಾದ ಷಣ್ಮುಖನೇ, ನೀನು ಹೊರಟುಹೋದರೆ ನಾವೇನು ಮಾಡೋಣ? ಎಲ್ಲಿಗೆ ಹೋಗೋಣ? ನಮ್ಮನ್ನುಳಿದು ನೀನೆಲ್ಲಿಗೋ ಹೋಗುವುದು ನಿನಗೆ ಧರ್ಮವಲ್ಲ.

೨೦. ನೀನು ವಾತ್ಸಲ್ಯ ಪೂರಿತರಾದ ನಮ್ಮಿಂದ ವರ್ಧಿತನಾಗಿ, ನಮಗೆ ಧರ್ಮಶಾಸ್ತ್ರರೀತ್ಯಾ ಪುತ್ರನಾಗಿರುವೆ. ಪುತ್ರನಿಗೆ ಮಾತೆಯರಲ್ಲಿ ಭಕ್ತಿವಿಶ್ವಾಸಗಳಿದ್ದರೆ ಅವರನ್ನು ದೂರಮಾಡುವುದಾವ ಧರ್ಮ ?

೨೧. ಕೃತ್ತಿಕಾಮಾತೆಯರು ಹೀಗೆ ನುಡಿದು, ಆ ಪುತ್ರನನ್ನು ವಕ್ಷಃಸ್ಥಲದಲ್ಲಿ ಅಪ್ಪಿಕೊಂಡು, ಅವನ ವಿರಹವುಂಟಾಗುವುದೆಂದು ಸ್ಮರಿಸಿಕೊಂಡು ಮತ್ತೆ ಮೂರ್ಛೆಗೊಂಡರು.

೨೨. ಆಗ ಕುಮಾರನು ಅವರಿಗೆ ತತ್ವೋಪದೇಶಮಾಡಿ, ಅವರನ್ನೂ ಜತೆಯಲ್ಲಿ ಕರೆದುಕೊಂಡು ಪಾರ್ಷದರೊಡನೆ ರಥವೇರಿದನು.

ಪೂರ್ಣಕುಂಭಂ ದ್ವಿಜಂ ವೇಶ್ಯಾಂ ಶುಕ್ಲ ಧಾನ್ಯಾನಿ ದರ್ಪಣಂ ।
ದಧ್ಯಾಜ್ಯಂ ಮಧುಲಾಜಾಂಶ್ಚ ಪುಷ್ಪಂ ದೂರ್ವಾಕ್ಷತಾನ್ಸಿತಾನ್ ॥ ೨೩ ॥

ವೃಷಂ ಗಜೇಂದ್ರಂ ತುರಗಂ ಜ್ವಲದಗ್ನಿಂ ಸುವರ್ಣಕಂ ।
ಪೂರ್ಣಂ ಚ ಪರಿಪಕ್ವಾನಿ ಫಲಾನಿ ವಿವಿಧಾನಿ ಚ ॥ ೨೪ ॥

ಪತಿಪುತ್ರವತೀಂ ನಾರೀಂ ಪ್ರದೀಪಂ ಮಣಿಮುತ್ತಮಂ ।
ಮುಕ್ತಾಂ ಪ್ರಸೂನಮಾಲಾಂ ಚ ಸದ್ಯೋ ಮಾಂಸಂ ಚ ಚಂದನಂ ॥ ೨೫ ॥

ದದರ್ಶೈತಾನಿ ವಸ್ತೂನಿ ಮಂಗಲಾನಿ ಪುರೋ ಮುನೇ ।
ಶೃಗಾಲಂ ನಕುಲಂ ಕುಂಭಂ ಶವಂ ವಾಮೇ ಶುಭಾವಹಂ ॥ ೨೬ ॥

ರಾಜಹಂಸಂ ಮಯೂರಂ ಚ ಖಂಜನಂ ಚ ಶುಕಂ ಪಿಕಂ ।
ಪಾರಾವತಂ ಶಂಖಚಿಲ್ಲಂ ಚಕ್ರವಾಕಂ ಚ ಮಂಗಲಂ ॥ ೨೭ ॥

೨೩-೪೨. ಪ್ರಯಾಣಹೊರಟಾಗ ಎದುರಿನಲ್ಲಿ ಜಲ ಪೂರಿತವಾದ ಕುಂಭವನ್ನೂ ಸದಾಚಾರನಿರತನಾದ ಬ್ರಾಹ್ಮಣನನ್ನೂ, ವೇಶ್ಯೆಯುವನ್ನೂ, ಬಿಳಿದಾದ ಧಾನ್ಯವನ್ನೂ ಕನ್ನಡಿಯನ್ನೂ ಮೊಸರು, ತುಪ್ಪ, ಜೇನು, ಅರಳು, ಗರಿಕೆಹುಲ್ಲು, ಹೂವು ಮತ್ತು ಬಿಳುಪಾದ ಅಕ್ಷತೆಗಳನ್ನೂ ಕಂಡನು. ಹಾಗೆಯೇ, ಎತ್ತು ಆನೆ ಮತ್ತು ಕುದುರೆ ಗಳನ್ನೂ ಪ್ರದಕ್ಷಿಣಾಕಾರವಾಗಿ ಉರಿಯುತ್ತಿರುವ ಅಗ್ನಿಯುನ್ನೂ, ಸುವರ್ಣವನ್ನೂ, ಚೆನ್ನಾಗಿ ಪರಿಪಕ್ವವಾಗಿರುವ ಫಲಪೂರ್ಣವಾದ ತಟ್ಟೆಗಳನ್ನೂ ಇದುರಿನಲ್ಲಿ ಕಂಡನು.

೨೫. ಪತಿಪುತ್ರವತಿಯಾದ ಸುಮಂಗಲಿ ಸ್ತ್ರೀಯನ್ನೂ, ಪ್ರಕಾಶಮಾನವಾದ ದೀಪವನ್ನೂ, ಉತ್ತಮವಾದ ಮಣಿಯನ್ನೂ ಮುತ್ತು ಮತ್ತು ಹೂಮಾಲೆಗಳನ್ನೂ ಹೊಸದಾದ ಮಾಂಸ ಮತ್ತು ಚಂದನವನ್ನೂ ಕುಮಾರನು ಪ್ರಯಾಣಕಾಲದಲ್ಲಿ ಇದಿರುಗೊಂಡನು.

೨೬. ಎಲೈ ಮುನಿಯೇ ಮಂಗಳಕರವಾದ ಈ ವಸ್ತುಗಳನ್ನೆಲ್ಲಾ ಇದುರಿನಲ್ಲಿ ನೋಡಿದ್ದಲ್ಲದೆ ಎಡಭಾಗದಲ್ಲಿ ಶುಭಕರವಾದ ನರಿ, ಮುಂಗುಸಿಗಳನ್ನೂ, ಕಲಶ ಮತ್ತು ಶವವನ್ನೂ ನೋಡಿದನು

೨೭-೨೮. ಅಂತೆಯೇ ಬಲಭಾಗದಲ್ಲಿ ಮಂಗಳಕರಗಳಾದ ರಾಜಹಂಸ ಮತ್ತು ನವಿಲುಗಳನ್ನೂ, ಖಂಜರೀಟಪಕ್ಷಿಯುನ್ನೂ, ಗಿಣಿ ಮತ್ತು ಕೋಗಿಲೆಗಳನ್ನೂ, ಪಾರಿ

ಕೃಷ್ಣಸಾರಂ ಚ ಸುರಭಿಂ ಚಮರೀಂ ಶ್ವೇತಚಾಮರಂ ।
ಧೇನುಂ ಚ ವತ್ಸಸಂಯುಕ್ತಾಂ ಪತಾಕಾಂ ದಕ್ಷಿಣೇ ಶುಭಾಂ ॥ ೨೮

ನಾನಾಪ್ರಕಾರವಾದ್ಯಂ ಚಾಪ್ಯಶ್ರೌಷೀನ್ಮಂಗಲಧ್ವನಿಂ ।
ಮನೋಹರಂ ಚ ಸಂಗೀತಂ ಘಂಟಾಶಂಖಧ್ವನಿಂ ತಥಾ ॥ ೨೯

ದೃಷ್ಟ್ವಾ ಶ್ರುತ್ವಾ ಮಂಗಲಂ ಸಹ್ಯಗಮತ್ತಾತಮಂದಿರಂ ।
ಕ್ಷಣೇನಾನಂದಯುಕ್ತಶ್ಚ ಮನೋಯಾಯಿ ರಥೇನ ಚ ॥ ೩೦

ಕುಮಾರಃ ಪ್ರಾಪ್ಯ ಕೈಲಾಸಂ ನ್ಯಗ್ರೋಧಾಕ್ಷಯಮೂಲಕೇ ।
ಕ್ಷಣಂ ತಸ್ಥೌ ಕೃತ್ತಿಕಾಭಿಃ ಪಾರ್ಷದಪ್ರವರೈಃ ಸಹ ॥ ೩೧

ಪಾರ್ವತೀ ಮಂಗಲಂ ಕೃತ್ವಾ ರಾಜಮಾರ್ಗಂ ಮನೋಹರಂ ।
ಪದ್ಮರಾಗೈರಿಂದ್ರನೀಲೈಃ ಸಂಸ್ಕೃತಂ ಪರಿತಃ ಪುರಂ ॥ ೩೨

ವಾಳೆ, ಶಂಖಚಿಲ್ಲ ಮತ್ತು ಚಕ್ರವಾಕಗಳನ್ನೂ, ಜಿಂಕೆ, ಗೋವು ಮತ್ತು ಚಮ
ಮೃಗಗಳನ್ನೂ, ಧ್ವಜಪಟಗಳನ್ನೂ ಕುಮಾರನು ನೋಡಿದನು.

೨೯. ಅಲ್ಲದೆ ವಿವಿಧ ವಾದ್ಯಗಳ ಮಂಗಳಧ್ವನಿಯನ್ನೂ, ಮನೋಹರವ ಸಂಗೀತವನ್ನೂ, ಗಂಟೆ ಮತ್ತು ಶಂಖದ ಧ್ವನಿಗಳನ್ನೂ ಮಾರ್ಗದಲ್ಲಿ ಕುಮಾ ಕೇಳಿದನು.

೩೦. ಈ ರೀತಿ ಶುಭಕರವಾದ ವಸ್ತುಗಳನ್ನು ನೋಡಿ, ಮಂಗಳ ವಾದ್ಯಗಳ ಕೇಳಿ ಆನಂದಭರಿತನಾಗಿ, ಮನೋವೇಗದಲ್ಲಿ ಹೋಗುವ ಆ ರಥದಿಂದ ಒಂ ಕ್ಷಣಮಾತ್ರದಲ್ಲಿ ತಂದೆಯ ಮನೆಗೆ ಹೋದನು.

೩೧. ಷಣ್ಮುಖನು ಕೈಲಾಸಪರ್ವತಕ್ಕೆ ಹೋಗಿ ಅಕ್ಷಯವಾದ ಆಲದ ಮ ಬುಡದಲ್ಲಿ, ಕೃತ್ತಿಕೆಯರೊಡನೆಯೂ, ಪಾರ್ಷದರೊಡನೆಯೂ ಕ್ಷಣಕಾಲ ನಿಂತನು.

೩೨. ಪಾರ್ವತಿಯು ಪುತ್ರನ ಸ್ವಾಗತಕ್ಕಾಗಿ ಸೇವಕರಿಂದ ರಾಜಮಾರ್ಗವ ಸಂಸ್ಕಾರಗೊಳಿಸಿ, ಪದ್ಮರಾಗ ಮತ್ತು ಇಂದ್ರನೀಲ ಮಣಿಗಳಿಂದ ಅಲಂಕ ಮಾಡಿಸಿದಳು.

ರಂಭಾಸ್ತಂಭಸಮೂಹೈಶ್ಚ ಪಟ್ಟಸೂತ್ರಾಂಶುಕೈಸ್ತಥಾ ।
ಶ್ರೀಖಂಡಪಲ್ಲವೈರ್ಯುಕ್ತಂ ಪೂರ್ಣಕುಂಭೈಃ ಸುಶೋಭಿತಂ ॥ ೩೩ ॥

ಪೂರ್ಣಕುಂಭಜಲೈರ್ವ್ಯಾಪ್ತಂ ಸಿಕ್ತಂ ಚಂದನವಾರಿಭಿಃ ।
ಅಸಂಖ್ಯರತ್ನದೀಪ್ತೈಶ್ಚ ಮಣಿರಾಜೈರ್ವಿರಾಜಿತಂ ॥ ೩೪ ॥

ನಟನರ್ತಕವೇಶ್ಯಾನಾಮುತ್ಸವೈಃ ಸಂಕುಲಂ ಸದಾ ।
ಬಂದಿಭಿರ್ವಿಪ್ರವರ್ಗೈಶ್ಚ ದೂರ್ವಾಪುಷ್ಪಕರೈರ್ಯುತಂ ॥ ೩೫ ॥

ಪತಿಪುತ್ರವತೀಭಿಶ್ಚ ಸಾಧ್ವೀಭಿಶ್ಚ ಸಮನ್ವಿತಂ ।
ಲಕ್ಷ್ಮೀಂ ಸರಸ್ವತೀಂ ದುರ್ಗಾಂ ಸಾವಿತ್ರೀಂ ತುಲಸೀಂ ರತಿಂ ॥ ೩೬ ॥

ಅರುಂಧತೀಮಹಲ್ಯಾಂ ಚ ದಿತಿಂ ತಾರಾಂ ಮನೋರಮಾಂ ।
ಅದಿತಿಂ ಶತರೂಪಾಂ ಚ ಶಚೀಂ ಸಂಧ್ಯಾಂ ಚ ರೋಹಿಣೀಂ ॥ ೩೭ ॥

---

೩೩. ಪುರದ್ವಾರದಲ್ಲಿ ಬಾಳೆಯ ಕಂಬಗಳನ್ನೂ, ಗಂಧದ ಚಿಗುರಿನ ತೋರಣವನ್ನೂ ಕಟ್ಟಿಸಿ, ಉಭಯಪಾರ್ಶ್ವದಲ್ಲಿಯೂ ಪೂರ್ಣಕುಂಭಗಳನ್ನಿಡಿಸಿ, ಪಟ್ಟವಸ್ತ್ರಗಳನ್ನು ಹಾಸಿಸಿದಳು.

೩೪. ಪುರದ್ವಾರವೂ ಕೂಡ ಗಂಧೋದಕದಿಂದ ಸಿಕ್ತವಾಗಿದ್ದಿತು. ಅಗಣಿತವಾದ ಪೂರ್ಣಕಲಶಗಳಿಂದಲೂ, ಮಣಿರತ್ನದೀಪಗಳಿಂದಲೂ ದೀಪ್ತವಾಗಿದ್ದಿತು.

೩೫. ನರ್ತಕರ ಮತ್ತು ವೇಶ್ಯೆಯರ, ನರ್ತನ ಗಾಯನಗಳಿಂದ ಮಾರ್ಗವೆಲ್ಲವೂ ಸಂಕುಲವಾಗಿದ್ದಿತು. ಹೊಗಳುಭಂಟರು ಹೊಗಳುತ್ತಿದ್ದರು. ಬ್ರಾಹ್ಮಣರು ಗರಿಕೆ ಮತ್ತು ಪುಷ್ಪಾಕ್ಷತೆಗಳನ್ನು ಕೈಯಲ್ಲಿ ಹಿಡಿದು ಆಶೀರ್ವಾದಮಾಡಲು ನಿಂತಿದ್ದರು.

೩೬. ಪತಿಪುತ್ರವತಿಯರಾದ ಅನೇಕ ಸಾಧ್ವೀಶಿರೋಮಣಿಯರೂ, ಲಕ್ಷ್ಮಿ, ಸರಸ್ವತಿ, ದುರ್ಗಾ, ಸಾವಿತ್ರಿ, ತುಲಸಿ ಮತ್ತು ರತಿದೇವಿಯರೂ ಅಲ್ಲಿ ಸೇರಿದರು.

೩೭. ಅರುಂಧತಿ ಅಹಲ್ಯೆಯರೂ, ದಿತಿ ತಾರೆ ಮತ್ತು ಮನೋರಮೆಯರೂ ಅದಿತಿ, ಶತರೂಪಾ, ಶಚಿ, ಸಂಧ್ಯಾ, ರೋಹಿಣಿ ಮುಂತಾದ ದೇವಿಯರೂ ಆ ಉತ್ಸವದಲ್ಲಿ ಭಾಗಿಗಳಾಗಿದ್ದರು.

ಅನಸೂಯಾಂ ತಥಾ ಸ್ವಾಹಾಂ ಸಂಜ್ಞಾಂ ವರುಣಕಾಮಿನೀಂ |
ಆಕೂತಿಂ ಚ ಪ್ರಸೂತಿಂ ಚ ದೇವಹೂತಿಂ ಚ ಮೇನಕಾಂ || ೩೮ ||

ತಾಮೇಕಪಾಟಲಾಮೇಕಪರ್ಣಾಂ ಮೈನಾಕಕಾಮಿನೀಂ |
ವಸುಂಧರಾಂ ಚ ಮನಸಾಂ ಪುರಸ್ಕೃತ್ಯ ಸಮಾಯಯೌ || ೩೯ ||

ರಂಭಾ ತಿಲೋತ್ತಮಾ ಮೇನಾ ಘೃತಾಚೀ ಮೋಹಿನೀ ಶುಭಾ |
ಉರ್ವಶೀ ರತ್ನಮಾಲಾ ಚ ಸುಶೀಲಾ ಲಲಿತಾ ಕಲಾ || ೪೦ ||

ಕದಂಬಮಾಲಾ ಸುರಸಾ ವನಮಾಲಾ ಚ ಸುಂದರೀ |
ಏತಾಶ್ಚಾನ್ಯಾಶ್ಚ ಬಹವೋ ವಿಪ್ರೇಂದ್ರಾಪ್ಸರಸಾಂಗಣಾಃ || ೪೧ ||

ಸಂಗೀತನರ್ತನಪರಾಃ ಸಸ್ಮಿತಾ ವೇಷಸಂಯುತಾಃ |
ಕರತಾಲಕರಾಃ ಸರ್ವಾ ಜಗ್ಮುರಾನಂದಪೂರ್ವಕಂ || ೪೨ ||

---

೩೮. ಅನಸೂಯೆ, ಸ್ವಾಹಾ, ಸಂಜ್ಞಾ, ವರುಣಾನೀ, ಆಕೂತಿ, ಪ್ರಸೂತಿ, ದೇವಹೂತಿ, ಮೇನಕಾ ಮುಂತಾದ ದೇವಿಯರನ್ನೂ ಪಾರ್ವತಿಯು ಆಹ್ವಾನಿಸಿದ್ದಳು.

೩೯. ಅಂತೆಯೇ ಏಕಪಾಟಲಾ, ಏಕಪರ್ಣಾ, ಮೈನಾಕನ ಪತ್ನಿ, ವಸುಂಧರೆ, ಮನಸಾ ಮುಂತಾದ ದೇವಿಯರನ್ನೆಲ್ಲ ಮುಂದುಮಾಡಿಕೊಂಡು ಪಾರ್ವತಿಯು ಬಂದಿದ್ದಳು.

೪೦. ರಂಭೆ, ತಿಲೋತ್ತಮೆ, ಮೇನೆ, ಘೃತಾಚೀ, ಮೋಹಿನಿ, ಉರ್ವಶೀ, ರತ್ನಮಾಲಾ, ಸುಶೀಲಾ, ಲಲಿತ, ಕಲಾ ಮುಂತಾದ ಅಪ್ಸರಸ್ತ್ರೀಯರೂ ಅಲ್ಲಿಗೆ ಬಂದಿದ್ದರು.

೪೧. ಎಲೈ ಬ್ರಾಹ್ಮಣೋತ್ತಮನೇ, ಕದಂಬಮಾಲಾ, ಸುರಸಾ, ವನಮಾಲಾ, ಸುಂದರಿ ಮುಂತಾದ ಅನೇಕ ಅಪ್ಸರಸ್ತ್ರೀಯರು ಆ ಉತ್ಸವದಲ್ಲಿ ಭಾಗಿಗಳಾಗಿದ್ದರು.

೪೨. ಸಂಗೀತ ಮತ್ತು ನರ್ತನ ಕಲೆಯಲ್ಲಿ ನುರಿತ ಅನೇಕ ಸ್ತ್ರೀಯರು ಸುವೇಷಭೂಷಿತರಾಗಿ, ಮಂದಹಾಸದಿಂದ ಕೈತಾಳವನ್ನು ಹಾಕುತ್ತ ಆನಂದದಿಂದ ಅಲ್ಲಿಗೆ ಬಂದು ಸೇರಿದರು.

ದೇವಾಶ್ಚ ಮುನಯಃ ಶೈಲಾ ಗಂಧರ್ವಾಃ ಕಿನ್ನರಾಸ್ತಥಾ ।
ಸರ್ವೇ ಯಯುಃ ಪ್ರಮುದಿತಾಃ ಕುಮಾರಸ್ಯಾನುಮಜ್ಜನೇ ॥ ೪೩ ॥

ನಾನಾಪ್ರಕಾರವಾದ್ಯೈಶ್ಚ ರುದ್ರೈರ್ವಾ ಪಾರ್ಷದೈಃ ಸಹ ।
ಭೈರವೈಃ ಕ್ಷೇತ್ರಪಾಲೈಶ್ಚ ಯಯೌ ಸಾರ್ಧಂ ಮಹೇಶ್ವರಃ ॥ ೪೪ ॥

ಅಥ ಶಕ್ತಿಧರೋ ಹೃಷ್ಟೋ ದೃಷ್ಟ್ವಾಽರಾತ್ಪಾರ್ವತೀಂ ತದಾ ।
ಅವರುಹ್ಯ ರಥಾತ್ತೂರ್ಣಂ ಶಿರಸಾ ಪ್ರಣನಾಮ ಪ ॥ ೪೫ ॥

ತಂ ಪದ್ಮಾಪ್ರಮುಖಂ ದೇವೀಗಣಂ ಚ ಮುನಿಕಾಮಿನೀಂ ।
ಶಿವಂ ಚ ಪರಯಾ ಭಕ್ತ್ಯಾ ಸರ್ವಾನ್ಸಂಭಾಷ್ಯ ಯತ್ನತಃ ॥ ೪೬ ॥

ಕಾರ್ತಿಕೇಯಂ ಶಿವಾ ದೃಷ್ಟ್ವಾ ಕ್ರೋಡೇ ಕೃತ್ವಾ ಚುಚುಂಬ ಚ ।
ಶಂಕರಶ್ಚ ಸುರಾಃ ಶೈಲಾ ದೇವ್ಯೋ ನ್ಯೈ ಶೈಲಯೋಷಿತಃ ॥ ೪೭ ॥

೪೩. ದೇವತೆಗಳು, ಮುನಿಗಳು, ಶೈಲಗಂಧರ್ವಕಿನ್ನರಾದ್ಯನೇಕರು ಷಣ್ಮುಖನನ್ನು ಇದಿರುಗೊಳ್ಳಲು ಸಂತೋಷದಿಂದ ಅಲ್ಲಿಗೆ ಬಂದರು.

೪೪. ಮಹೇಶ್ವರನೂ ಕೂಡ, ರುದ್ರರು, ಪಾರ್ಷದರು, ಭೈರವರು ಮತ್ತು ಕ್ಷೇತ್ರಪಾಲರೊಡಗೂಡಿ ವಿಧವಿಧ ವಾದ್ಯಗಳನ್ನು ಧ್ವನಿಮಾಡಿಸುತ್ತ ಅಲ್ಲಿಗೆ ಬಂದನು.

೪೫ ಅನಂತರ ಷಣ್ಮುಖನು ತನ್ನ ಸಮೀಪಕ್ಕೆ ಬಂದ ಮಾತೆಯಾದ ಪಾರ್ವತಿಯನ್ನು ನೋಡಿ ಜಾಗ್ರತೆ ರಥದಿಂದಿಳಿದು ತಲೆಬಾಗಿ ನಮಸ್ಕಾರಮಾಡಿದನು.

೪೬. ಅಲ್ಲದೆ ಆದರಪೂರ್ವಕವಾಗಿ ಪರಮೇಶ್ವರನನ್ನೂ, ಲಕ್ಷ್ಮಿ ಮುಂತಾದ ದೇವಿಯರನ್ನೂ, ಮುನಿಪತ್ನಿಯರನ್ನೂ ಮಾತನಾಡಿಸಿ ಪರಮಭಕ್ತಿಯಿಂದ ನಮಸ್ಕಾರ ಮಾಡಿದನು.

೪೭. ಪಾರ್ವತಿಯಾದರೋ ಪುತ್ರನಾದ ಷಣ್ಮುಖನನ್ನು ನೋಡಿದ ಕೂಡಲೆ ವಕ್ಷಃಸ್ಥಲದಲ್ಲಿ ಆಲಿಂಗಿಸಿಕೊಂಡು ಮುದ್ದಿಟ್ಟಳು. ಅಂತೆಯೇ ಶಂಕರನೂ, ದೇವತೆಗಳೂ, ಶೈಲರೂ, ದೇವತಾಸ್ತ್ರೀಯರೂ ಮತ್ತು ಶೈಲಕಾಮಿನಿಯರೂ ಕೂಡ ಕುಮಾರನನ್ನು ಅಪ್ಪಿಕೊಂಡರು.

ಪಾರ್ವತೀ ಪ್ರಮುಖಾ ದೇವ್ಯಸ್ತಥಾ ದೇವಶ್ಚ ಶಂಕರಃ
ಶೈಲಾಶ್ಚ ಮುನಯಃ ಸರ್ವೇ ದದುಸ್ತಸ್ಮೈ ಶುಭಾಶಿಷಃ || ೪೮ ||

ಕುಮಾರಃ ಸಗಣೈಃ ಸಾರ್ಧಮಾಗತ್ಯ ಚ ಶಿವಾಲಯಂ
ದದರ್ಶ ತಂ ಸಭಾಮಧ್ಯೇ ವಿಷ್ಣುಂ ಕ್ಷೀರೋದಶಾಯಿನಂ || ೪೯ ||

ರತ್ನಸಿಂಹಾಸನಸ್ಥಂ ಚ ರತ್ನಭೂಷಣಭೂಷಿತಂ |
ಧರ್ಮಬ್ರಹ್ಮೇಂದ್ರಚಂದ್ರಾರ್ಕವಹ್ನಿವಾಯ್ವಾದಿಭಿರ್ಯುತಂ || ೫೦ ||

ಈಷದ್ಧಾಸ್ಯಂ ಪ್ರಸನ್ನಾಸ್ಯಂ ಭಕ್ತಾನುಗ್ರಹಕಾರಕಂ |
ಸ್ತುತಂ ಮುನೀಂದ್ರೈರ್ದೇವೇಂದ್ರೈಃ ಸೇವಿತಂ ಶ್ವೇತಚಾಮರೈಃ || ೫೧ ||

ತಂ ದೃಷ್ಟ್ವಾ ಜಗತಾಂ ನಾಥಂ ಭಕ್ತಿನಮ್ರಾತ್ಮಕಂಧರಃ |
ಪುಲಕಾನ್ವಿತಸರ್ವಾಂಗಃ ಶಿರಸಾ ಪ್ರಣನಾಮ ಹ || ೫೨ ||

೪೮. ಅನಂತರ ಪಾರ್ವತಿ ಮುಂತಾದ ದೇವಿಯರು, ಶೈಲರು, ಮುನಿಗಳು ಮತ್ತು ಶಂಕರನೂ ಕುಮಾರನಿಗೆ ಮಂಗಳಾಶೀರ್ವಾದ ಮಾಡಿದರು.

೪೯. ಇಂತು ಎಲ್ಲರಿಂದ ಆಶೀರ್ವಾದ ಪಡೆದ ಷಣ್ಮುಖನು ತನ್ನ ಪರಿವಾರದೊಡನೆ ಶಂಕರನ ಮಂದಿರಕ್ಕೆ ಬಂದು, ಸಭಾಮಧ್ಯದಲ್ಲಿ ಕುಳಿತಿದ್ದ ಕ್ಷೀರಸಾಗರ ಶಯನನಾದ ವಿಷ್ಣುವನ್ನು ಕಂಡನು.

೫೦. ರತ್ನಾಭರಣಗಳನ್ನು ತೊಟ್ಟು, ರತ್ನಸಿಂಹಾಸನದಲ್ಲಿ ಕುಳಿತಿದ್ದ ಆ ವಿಷ್ಣುವು ಧರ್ಮ, ಬ್ರಹ್ಮ, ಇಂದ್ರ, ಚಂದ್ರ, ಸೂರ್ಯ, ಅಗ್ನಿ ಮತ್ತು ವಾಯು ಮುಂತಾದ ದೇವತೆಗಳಿಂದ ಪರಿವೃತನಾಗಿದ್ದನು.

೫೧. ಪ್ರಸನ್ನವಾದ ಮುಖದಲ್ಲಿ ಮಂದಹಾಸವನ್ನು ಬೀರುತ್ತ ಭಕ್ತಾನುಗ್ರಹ ಪರನಾಗಿ ಕುಳಿತಿದ್ದ ಆ ವಿಷ್ಣುವನ್ನು ದೇವತೆಗಳು ಮತ್ತು ಮುನಿಗಳು ಸ್ತುತಿಸಿ, ಶ್ವೇತಚಾಮರದ ಸೇವೆಗೈಯ್ಯುತ್ತಿದ್ದರು.

೫೨. ಜಗದೊಡೆಯನಾದ ಆ ವಿಷ್ಣುವನ್ನು ನೋಡಿ ಷಣ್ಮುಖನು ಭಕ್ತಿಯಿಂದ ತಲೆಬಾಗಿ, ರೋಮಾಂಚಿತಶರೀರನಾಗಿ ಸಾಷ್ಟಾಂಗ ನಮಸ್ಕಾರಮಾಡಿದನು.

ವಿಧಿಂ ಧರ್ಮಂ ಚ ದೇವಾಂಶ್ಚ ಮುನೀಂದ್ರಾಂಶ್ಚ ಮುದಾನ್ವಿತಾನ್ ।
ಪ್ರಣನಾಮ ಪೃಥಕ್ಭಕ್ತ್ಯಾ ಪ್ರಾಪ ತೇಭ್ಯಶ್ಚಾಶಿಷಃ ॥ ೫೩ ॥

ಪೃಥಕ್ಸಂಭಾಷ್ಯ ಸರ್ವಾಂಶ್ಚಾಪ್ಯುವಾಸ ಕನಕಾಸನೇ ।
ದದೌ ಧನಾನಿ ವಿಪ್ರೇಭ್ಯಃ ಪಾರ್ವತ್ಯಾ ಸಹ ಶಂಕರಃ ॥ ೫೪ ॥

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ ನಾರದನಾರಾಯಣಸಂವಾದೇ ಕಾರ್ತಿಕೇಯಾಗಮನಂ ನಾಮ ಷೋಡಶೋಽಧ್ಯಾಯಃ**

---

೫೩. ಅನಂತರ ಬ್ರಹ್ಮ, ಧರ್ಮ, ಮುಂತಾದ ದೇವತೆಗಳನ್ನೂ, ಮುನಿಶ್ರೇಷ್ಠರನ್ನೂ, ಭಕ್ತಿಯಿಂದ ಪ್ರತ್ಯೇಕವಾಗಿ ನಮಸ್ಕರಿಸಿ ಸಂತೋಷಗೊಂಡ ಅವರಿಂದ ಮಂಗಳಾಶೀರ್ವಾದವನ್ನು ಪಡೆದನು.

೫೪. ಆ ಸಭೆಯಲ್ಲಿದ್ದ ಎಲ್ಲ ದೇವದೇವಿಯರನ್ನೂ ಕ್ರಮವಾಗಿ ಮಾತನಾಡಿಸಿ ಕುಮಾರನು ಕನಕಾಸನದಲ್ಲಿ ಮಂಡಿಸಿದನು. ಆಗ ಶಂಕರಪಾರ್ವತಿಯರು ಬ್ರಾಹ್ಮಣರಿಗೆ ಯಥೇಚ್ಛವಾಗಿ ದ್ರವ್ಯದಾನಮಾಡಿದರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದ ನಾರದನಾರಾಯಣ ಸಂವಾದದಲ್ಲಿ ಕಾರ್ತಿಕೇಯನು ಕೈಲಾಸಕ್ಕೆ ಬಂದುದನ್ನು ತಿಳಿಸುವ ಹದಿನಾರನೆಯ ಅಧ್ಯಾಯವು ಮುಗಿದುದು.



## ಹದಿನಾರನೆಯ ಅಧ್ಯಾಯದ ಸಾರಾಂಶ

---

ಅನಂತರ ಕಾರ್ತಿಕೇಯನು ಕೃತ್ತಿಕಾಮಾತೆಯರನ್ನು ಕುರಿತು 'ಈ ಪ್ರಪಂಚದಲ್ಲಿ ನಾನು, ನನ್ನದು ಎಂಬ ಅಭಿಮಾನವುಳ್ಳವರು ದುಃಖಕ್ಕೆ ಸಿಲುಕುವರೆಂದೂ, ಸಕಲವೂ ಈಶ್ವರಾಧೀನವಾದುದರಿಂದ ಈಶ್ವರೇಚ್ಛೆಯಿದ್ದಂತೆ ನಡೆಯುವುದೆಂದು ದೃಢನಂಬಿಕೆಯುಳ್ಳವರು ಸುಖಿಗಳೆಂದೂ' ಹೇಳಿ ಸಮಾಧಾನಗೊಳಿಸಿ ಕೈಲಾಸಕ್ಕೆ ತೆರಳಲನುವಾದನು. ಅಷ್ಟುಹೊತ್ತಿಗೆ ಸರಿಯಾಗಿ ಪಾರ್ವತಿಯು ದಿವ್ಯರಥವೊಂದನ್ನು ಅವನಿಗಾಗಿ ಕಳುಹಿಸಿದ್ದಳು. ಆಗ ಕುಮಾರನು ತನ್ನ ವಿರಹವನ್ನು ಸಹಿಸಲಾರದೆ ದುಃಖಿತರಾದ ಮಾತೆಯರನ್ನೂ ಜತೆಯಲ್ಲಿಯೇ ಕರೆದುಕೊಂಡು ಹೊರಟನು. ಪ್ರಯಾಣಕಾಲದಲ್ಲಿ ಪೂರ್ಣಕಲಶದರ್ಶನವೇ ಮುಂತಾದ ಶುಭಶಕುನಗಳು ಕುಮಾರನಿಗೆ ಸಂಭವಿಸಿದವು. ಇತ್ತ ಕೈಲಾಸದಲ್ಲಿ ಕುಮಾರನ ಆಗಮನವನ್ನು ಸ್ವಾಗತಿಸಲು ಪಾರ್ವತಿಪರಮೇಶ್ವರರು ರಾಜಮಾರ್ಗಗಳನ್ನು ತಳಿರುತೋರಣಗಳಿಂದಲಂಕರಿಸಿ ಸಕಲ ದೇವ ದೇವಿಯರೊಡನೆ ಬಂದಿದ್ದರು. ಕಾರ್ತಿಕೇಯನು ಕ್ರಮವಾಗಿ ಎಲ್ಲರಿಗೂ ವಂದಿಸಿ ಆಶೀರ್ವಾದ ಪಡೆದನು. ಅನಂತರ ಶಂಕರನ ಸಭಾಮಂಟಪಕ್ಕೆ ತೆರಳಿ, ಅಲ್ಲಿ ರತ್ನಸಿಂಹಾಸನಾಸೀನನಾದ ವಿಷ್ಣುವಿಗೆ ಭಕ್ತಿಪೂರ್ವಕವಾಗಿ ಸಾಷ್ಟಾಂಗವೆರಗಿದನು. ಅಲ್ಲಿಯೂ ಕೂಡ ಕ್ರಮವಾಗಿ ಎಲ್ಲ ದೇವತೆಗಳಿಂದಲೂ ಆಶೀರ್ವಾದ ಪಡೆದು ಕನಕಪೀಠದಲ್ಲಿ ಮಂಡಿಸಿದನು.



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ಸಪ್ತದಶೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಅಥ ವಿಷ್ಣುರ್ಜಗತ್ಕಾಂತೋ ಹೃಷ್ಟಃ ಕೃತ್ವಾ ಶುಭಕ್ಷಣಂ ।
ರತ್ನಸಿಂಹಾಸನೇ ರಮ್ಯೇ ವಾಸಯಾಮಾಸ ಷಣ್ಮುಖಂ ॥ ೧ ॥

ನಾನಾವಿಧಾನಿ ವಾದ್ಯಾನಿ ಕಾಂಸ್ಯತಾಲಾದಿಕಾನಿ ಚ ।
ನಾನಾವಿಧಾನಿ ಯಂತ್ರಾಣಿ ವಾದಯಾಮಾಸ ಕೌತುಕಾತ್ ॥ ೨ ॥

ವೇದಮಂತ್ರಾಭಿಷಿಕ್ತೈಶ್ಚ ಸರ್ವತೀರ್ಥೋದಪೂರ್ಣಕೈಃ ।
ಸದ್ರತ್ನಕುಂಭಶತಕೈಃ ಸ್ನಾಪಯಾಮಾಸ ತಂ ಮುದಾ ॥ ೩ ॥

---

### ಹದಿನೇಳನೆಯ ಅಧ್ಯಾಯವು

೧ ನಾರಾಯಣ :—ಅನಂತರ ಜಗದೊಡೆಯನಾದ ವಿಷ್ಣುವು ಷಣ್ಮುಖನಿಗೆ ಆಶೀರ್ವಾದಮಾಡಿ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದನು.

೨. ಮತ್ತು ಕಂಚಿನ ತಾಳವೇ ಮುಂತಾದ ನಾನಾವಿಧ ವಾದ್ಯಗಳನ್ನೂ ಅನೇಕ ತರಹ ಯಂತ್ರಗಳನ್ನೂ ಮೊಳಗಿಸಿದನು.

೩, ರತ್ನಕಲಶಗಳಲ್ಲಿ ತುಂಬಿರುವ ಸಕಲ ಪುಣ್ಯತೀರ್ಥೋದಕಗಳಿಂದ ವೇದಮಂತ್ರೋಚ್ಚಾರಣಪೂರ್ವಕವಾಗಿ ಕುಮಾರನಿಗೆ ಅಭಿಷೇಕಮಾಡಿಸಿದನು.

ಸದ್ರತ್ನಸಾರರಚಿತಂ ಕಿರೀಟಂ ಮಂಗಲಾಂಗದೇ ।
ಅಮೂಲ್ಯರತ್ನಖಚಿತ ಭೂಷಣಾನಿ ಬಹೂನಿ ಚ ॥ ೪ ॥

ವಹ್ನಿಶುದ್ಧಾಂಶುಕೇ ದಿವ್ಯೇ ಕ್ಷೀರೋದಾರ್ಣವಸಂಭವಂ ।
ಕೌಸ್ತುಭಂ ವನಮಾಲಾಂ ಚ ತಸ್ಮೈ ಚಕ್ರಂ ದದೌ ಮುದಾ ॥ ೫ ॥

ಬ್ರಹ್ಮಾ ದದೌ ಯಜ್ಞಸೂತ್ರಂ ವೇದಾನ್ವೈ ವೇದಮಾತರಂ ।
ಸಂಧ್ಯಾಮಂತ್ರಂ ಕೃಷ್ಣಮಂತ್ರಸ್ತೋತ್ರಂ ಚ ಕವಚಂ ಹರೇಃ ॥ ೬ ॥

ಕಮಂಡಲುಂ ಚ ಬ್ರಹ್ಮಾಸ್ತ್ರಂ ವಿದ್ಯಾಂ ವೈ ವೈರಿಮರ್ದಿನೀಂ ।
ಧರ್ಮೋ ಧರ್ಮಮತಿಂ ದಿವ್ಯಾಂ ಸರ್ವಜೀವೇ ದಯಾಂ ದದೌ ॥ ೭ ॥

ಪರಂ ಮೃತ್ಯುಂಜಯಂ ಜ್ಞಾನಂ ಸರ್ವಶಾಸ್ತ್ರಾವಬೋಧಿನಂ ।
ಶಶ್ವತ್ಸುಖಪ್ರದಂ ತತ್ತ್ವಜ್ಞಾನಂ ಚ ಸುಮನೋಹರಂ ॥ ೮ ॥

೪-೫. ಅನಂತರ ದಿವ್ಯರತ್ನಗಳಿಂದ ಖಚಿತವಾದ ಕಿರೀಟವನ್ನೂ ಎರಡು ಬಾಹುಪುರಿಗಳನ್ನೂ, ಇನ್ನೂ ಇತರ ವಿಧವಾದ ಅಮೂಲ್ಯ ರತ್ನಾಭರಣಗಳನ್ನೂ, ಅಗ್ನಿಯಂತೆ ಪರಿಶುದ್ಧವಾದ ಎರಡು ವಸ್ತ್ರಗಳನ್ನೂ, ಕ್ಷೀರಸಮುದ್ರದಲ್ಲಿ ಉತ್ಪನ್ನವಾದ ಕೌಸ್ತುಭರತ್ನವನ್ನೂ, ವನಮಾಲೆಯನ್ನೂ, ದಿವ್ಯಚಕ್ರವೊಂದನ್ನೂ ವಿಷ್ಣುವು ಸಂತೋಷದಿಂದ ಷಣ್ಮುಖನಿಗೆ ಕೊಟ್ಟನು.

೬-೭ ಅನಂತರ ಬ್ರಹ್ಮದೇವನು ದಿವ್ಯವಾದ ಒಂದು ಯಜ್ಞೋಪವಿತವನ್ನೂ ಸಂಧ್ಯಾಮಂತ್ರವನ್ನೂ, ಚತುರ್ವೇದಗಳನ್ನೂ, ಶ್ರೀಕೃಷ್ಣಪರಮಾತ್ಮನ ಮಂತ್ರ ಸ್ತೋತ್ರಗಳನ್ನೂ, ಕಮಂಡಲು ಮತ್ತು ಬ್ರಹ್ಮಾಸ್ತ್ರವನ್ನೂ, ಶತ್ರುನಾಶಕವಾದ ವಿದ್ಯೆಯನ್ನೂ ಷಣ್ಮುಖನಿಗೆ ಅನುಗ್ರಹಿಸಿದನು. ಧರ್ಮದೇವನು ಧರ್ಮಬುದ್ಧಿಯನ್ನೂ ಸಕಲ ಜೀವಿಗಳಲ್ಲೂ ದಯೆಯಿಡುವುದನ್ನೂ ಬೋಧಿಸಿದನು.

೮-೯. ಅಂತೆಯೇ ಶಿವನು ಮೃತ್ಯುಂಜಯಜ್ಞಾನವನ್ನೂ, ಸಕಲಶಾಸ್ತ್ರಗಳ ತತ್ವವನ್ನೂ, ಶಾಶ್ವತಸುಖವನ್ನೀಯುವ ಆತ್ಮಜ್ಞಾನವನ್ನೂ, ಯೋಗಸಿದ್ಧಿಯನ್ನೂ, ದುರ್ಲಭವಾದ ಬ್ರಹ್ಮತತ್ವವನ್ನೂ ಕುಮಾರನಿಗೆ ಅನುಗ್ರಹಿಸಿದನು. ಅಲ್ಲದೆ ಶೂಲ,

ಯೋಗತತ್ವಂ ಸಿದ್ಧಿತತ್ವಂ ಬ್ರಹ್ಮಜ್ಞಾನಂ ಸುದುರ್ಲಭಂ ।
ಶೂಲಂ ಪಿನಾಕಂ ಪರಶುಂ ಶಕ್ತಿಂ ಪಾಶುಪತಂ ಧನುಃ ।
ಸಂಹಾರಾಸ್ತ್ರವಿನಿಕ್ಷೇಪಂ ತತ್ಸಂಹಾರಂ ದದೌ ಶಿವಃ ॥ ೯ ॥

ಶ್ವೇತಚ್ಛತ್ರಂ ರತ್ನಮಾಲಾಂ ದದೌ ತಸ್ಮೈ ಜಲೇಶ್ವರಃ ।
ಗಜೇಂದ್ರಂ ಚ ಹಯೇಂದ್ರಂ ಚ ಸುಧಾಕುಂಭಂ ಸುಧಾನಿಧಿಃ ॥ ೧೦ ॥

ಮನೋಯಾಯಿರಥಂ ಸೂರ್ಯಃ ಸನ್ನಾಹಂ ಚ ಮನೋರಮಂ ।
ಯಮದಂಡಂ ಯಮಶ್ಚೈವ ಮಹಾಶಕ್ತಿಂ ಹುತಾಶನಃ ।
ನಾನಾಶಾಸ್ತ್ರಾಣ್ಯುಪಾಯಾನಿ ಸರ್ವೇ ದೇವಾ ದದುರ್ಮುದಾ ॥ ೧೧ ॥

ಕಾಮಶಾಸ್ತ್ರಂ ಕಾಮದೇವೋ ದದೌ ತಸ್ಮೈ ಮುದಾನ್ವಿತಃ ।
ಕ್ಷೀರೋದೋಽಮೂಲ್ಯರತ್ನಾನಿ ವಿಶಿಷ್ಟೇ ರತ್ನನೂಪುರೇ ॥ ೧೨ ॥

ಪಿನಾಕ, ಪರಶು, ಶಕ್ತಿ, ಪಾಶುಪತ ಮುಂತಾದ ಆಯುಧಗಳನ್ನು ಕೊಟ್ಟು ಸಂಹಾರಾಸ್ತ್ರದ ಪ್ರಯೋಗ ಮತ್ತು ಉಪಸಂಹಾರ ಕ್ರಮವನ್ನು ಬೋಧಿಸಿದನು.

೧೦. ಅನಂತರ ಜಲಾಧಿಪತಿಯಾದ ವರುಣನು ಒಂದು ಶ್ವೇತಚ್ಛತ್ರವನ್ನೂ ರತ್ನಮಾಲೆಯನ್ನೂ ಇತ್ತನು. ಸುಧಾನಿಧಿಯಾದ ಚಂದ್ರನು ಉತ್ತಮವಾದ ಆನೆ ಮತ್ತು ಕುದುರೆಯನ್ನೂ ಅಮೃತಕಲಶವನ್ನೂ ಅವನಿಗೆ ಕೊಟ್ಟನು.

೧೧. ಸೂರ್ಯದೇವನು ಸಕಲ ಸಾಮಗ್ರಿಸಹಿತವೂ,ಮನೋಗಾಮಿಯೂ ಆದ ರಥವನ್ನೂ, ಯಮನು ಯಮದಂಡವನ್ನೂ ಅಗ್ನಿದೇವನು ದಿವ್ಯಶಕ್ತಿಯನ್ನೂ ಅನುಗ್ರಹಿಸಿದರು. ಅಂತೆಯೇ ಸಕಲ ದೇವತೆಗಳೂ ನಾನಾವಿಧ ಶಸ್ತ್ರಗಳನ್ನೂ, ಉಪಾಯಗಳನ್ನೂ ಉಪದೇಶಿಸಿದರು.

೧೨. ಕಾಮದೇವನು ಸಂತುಷ್ಟನಾಗಿ ಅವನಿಗೆ ಕಾಮಶಾಸ್ತ್ರವನ್ನುಪದೇಶಿಸಿದನು. ಕ್ಷೀರಸಮುದ್ರನು ಅಮೂಲ್ಯವಾದ ರತ್ನಗಳನ್ನೂ ಮನೋಹರವಾದ ಎರಡು ನೂಪುರಗಳನ್ನೂ ಕಾಲುಬಳೆಗಳನ್ನೂ ಅನುಗ್ರಹಿಸಿದನು.

ಪಾರ್ವತೀ ಸಸ್ಮಿತಾ ಹೃಷ್ಟಾ ಪರಮಾನಂದಮಾನಸಾ
ಮಹಾವಿದ್ಯಾಂ ಸುಶೀಲಾಂ ಚ ವಿದ್ಯಾಂ ಮೇಧಾಂ ದಯಾಂ ಸ್ಮೃತಿಂ ॥ ೧೩ ।

ಬುದ್ಧಿಂ ಸುನಿರ್ಮಲಾಂ ಶಾಂತಿಂ ತುಷ್ಟಿಂ ಪುಷ್ಟಿಂ ಕ್ಷಮಾಂ ಧೃತಿಂ ।
ಸುದೃಢಾಂ ಚ ಹರೌ ಭಕ್ತಿಂ ಹರಿದಾಸ್ಯಂ ದದೌ ಮುದಾ ॥ ೧೪ ॥

ಪ್ರಜಾಪತಿರ್ದೇವಸೇನಾಂ ರತ್ನಭೂಷಣಭೂಷಿತಾಂ ।
ಸುವಿನೀತಾಂ ಸುಶೀಲಾಂ ಚ ಸುಂದರೀಂ ಸುಮನೋಹರಾಂ ॥ ೧೫ ॥

ದದೌ ತಸ್ಮೈ ವೇದಮಂತ್ರೈರ್ವಿವಾಹವಿಧಿನಾ ಸ್ವಯಂ ।
ಯಾಂ ವದಂತಿ ಮಹಾಷಷ್ಠೀಂ ಪಂಡಿತಾಃ ಶಿಶುಪಾಲಿಕಾಂ ॥ ೧೬ ॥

ಅಭಿಷಿಚ್ಯ ಕುಮಾರಂ ಚ ಸರ್ವೇ ದೇವಾ ಯಯುರ್ಗೃಹಂ ।
ಮುನಯಶ್ಚೈವ ಗಂಧರ್ವಾಃ ಪ್ರಣಮ್ಯ ಜಗದೀಶ್ವರಾನ್ ॥ ೧೭ ॥

---

೧೩–೧೪. ಪರಮಾನಂದ ಭರಿತಳಾದ ಪಾರ್ವತಿಯು ಸ್ಮಿತಮುಖಿಯಾಗಿ ಕುಮಾರನಿಗೆ, ಮಹಾವಿದ್ಯೆಯನ್ನೂ, ಸುಶೀಲವನ್ನೂ, ವಿದ್ಯಾ, ಮೇಧಾ, ದಯಾ, ಸ್ಮೃತಿಗಳನ್ನೂ ನಿರ್ಮಲವಾದ ಶಾಂತಿ, ತುಷ್ಟಿ ಪುಷ್ಟಿ, ಕ್ಷಮಾ, ಧೃತಿಗಳನ್ನೂ, ಶ್ರೀಹರಿಯಲ್ಲಿ ದೃಢವಾದ ಭಕ್ತಿ ಮತ್ತು ಸೇವಾಬುದ್ಧಿಯನ್ನೂ ಸಂತೋಷದಿಂದ ಅನುಗ್ರಹಿಸಿದಳು.

೧೫–೧೬. ಅನಂತರ ಬ್ರಹ್ಮನು ರತ್ನಭೂಷಣಭೂಷಿತಳೂ, ವಿನೀತಳೂ, ಸುಶೀಲಳೂ, ಸುಂದರಿಯೂ, ಮನೋಹರಳೂ ಆದ ದೇವಸೇನೆಯನ್ನು ಷಣ್ಮುಖನಿಗೆ ಕೊಟ್ಟು, ವೇದಮಂತ್ರೋಚ್ಚಾರಣಪೂರ್ವಕವಾಗಿ ವಿವಾಹ ಮಾಡಿಸಿದನು. ಆ ದೇವಸೇನಾದೇವಿಯನ್ನೇ ಪಂಡಿತರು ಶಿಶುಸಂರಕ್ಷಕಳಾದ ಮಹಾಷಷ್ಠೀದೇವಿಯೆಂದು ಕರೆಯುವರು.

೧೭. ಸಕಲ ದೇವತೆಗಳೂ ಷಣ್ಮುಖನಿಗೆ ಅಭಿಷೇಕಮಾಡಿ ತಮ್ಮ ತಮ್ಮ ಮನೆಗೆ ಹಿಂತಿರುಗಿದರು. ಇತ್ತ ಮುನಿಗಳೂ, ಗಂಧರ್ವರೂ ಜಗದೀಶ್ವರನಿಗೆ ವಂದಿಸಿ ಹಿಂದಕ್ಕೆ ತೆರಳಿದರು.

ನಾರಾಯಣಂ ಚ ಬ್ರಹ್ಮಾಣಂ ಧರ್ಮಂ ತುಷ್ಟಾವ ಶಂಕರಃ ।
ಪ್ರಣನಾಮ ಹರಿಂ ತಾತಂ ಧರ್ಮಮಾಲಿಂಗ್ಯ ನಾರದ ॥ ೧೮ ॥

ಪ್ರೀತ್ಯಾ ಯಯೌ ಚ ಶೈಲೇಂದ್ರಃ ಸಗಣಃ ಶಂಕರಾರ್ಚಿತಃ ।
ಯೇ ಯೇ ತತ್ರಾಗತಾಃ ಸರ್ವೇ ಯಯುರಾನಂದಪೂರ್ವಕಂ ॥ ೧೯ ॥

ಪರಮಾನಂದಸಂಯುಕ್ತೋ ದೇವ್ಯಾ ಸಹ ಮಹೇಶ್ವರಃ ।
ಕಾಲಾಂತರೇ ಚ ತಾನ್ಸರ್ವಾನ್ಪುನರಾನೀಯ ಶಂಕರಃ ।
ಪುಷ್ಟಿಂ ದದೌ ವಿವಾಹೇನ ಗಣೇಶಾಯ ಮಹಾತ್ಮನೇ ॥ ೨೦ ॥

ಸುತಾಭ್ಯಾಂ ಸಗಣೈಃ ಸಾರ್ಧಂ ಪಾರ್ವತೀ ಹೃಷ್ಟಮಾನಸಾ ।
ಸಿಷೇವೇ ಸ್ವಾಮಿನಃ ಪಾದಪದ್ಮಂ ಸಾ ಸರ್ವಕಾಮದಂ ॥ ೨೧ ॥

೧೮. ಅನಂತರ ಶಂಕರನು ನಾರಾಯಣ ಬ್ರಹ್ಮ ಮತ್ತು ಧರ್ಮಪುರುಷನನ್ನು ಕೊಂಡಾಡಿದನು. ಕುಮಾರನೂ ಕೂಡ ತಂದೆಯನ್ನೂ ಧರ್ಮಪುರುಷನನ್ನೂ ಸಂತೋಷದಿಂದಪ್ಪಿಕೊಂಡು, ಶ್ರೀಹರಿಗೆ ನಮಸ್ಕರಿಸಿದನು.

೧೯. ಶೈಲರಾಜನಾದ ಹಿಮವಂತನು ಕುಮಾರನ ದರ್ಶನದಿಂದಲೂ, ಶಂಕರನು ಮಾಡಿದ ಪೂಜೆಯಿಂದಲೂ ತುಷ್ಟನಾಗಿ ತನ್ನ ಪರಿವಾರ ಸಹಿತ ತೆರಳಿದನು. ಇಂತು ಅಲ್ಲಿಗೆ ಬಂದಿದ್ದವರೆಲ್ಲರೂ ಆನಂದಪೂರ್ವಕವಾಗಿ ಹಿಂದಿರುಗಿದರು.

೨೦. ಇತ್ತ ಪಾರ್ವತಿಯೊಡನೆ ಶಂಕರನು ಪರಮಾನಂದಭರಿತನಾಗಿದ್ದನು. ಕೆಲವುಕಾಲದ ಮೇಲೆ ಶಂಕರನು ಎಲ್ಲ ದೇವತೆಗಳನ್ನೂ ಪುನಃ ಬರಮಾಡಿಕೊಂಡು ಮಹಾತ್ಮನಾದ ಗಣಪತಿಗೆ ಪುಷ್ಟಿದೇವಿಯನ್ನು ತಂದು ವಿವಾಹಮಾಡಿದನು.

೨೧. ಪಾರ್ವತಿಯು, ಕುಮಾರ ಮತ್ತು ಗಣೇಶನಿಂದಲೂ, ಇತರ ಗಣಗಳಿಂದಲೂ ಕೂಡಿ, ಸಂತುಷ್ಟಳಾಗಿ, ಸರ್ವಕಾಮಫಲಪ್ರದವಾದ ತನ್ನ ಪತಿಯ ಪಾದಸೇವೆ ಮಾಡಿಕೊಂಡು ಸುಖವಾಗಿದ್ದಳು.

ಇತ್ಯೇವಂ ಕಥಿತಂ ಸರ್ವಂ ಕುಮಾರಸ್ಯಾಭಿಷೇಚನಂ ।
ವಿವಾಹಃ ಪೂಜನಂ ತಸ್ಯ ಗಣೇಶಸ್ಯ ವಿವಾಹಕಂ ॥ ೨೨ ॥

ಪಾರ್ವತೀಪುತ್ರಲಾಭಶ್ಚ ದೇವಾನಾಂ ಚ ಸಮಾಗಮಃ ।
ಕಾ ತೇ ಮನಸಿ ವಾಂಛಾಸ್ತಿ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೨೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೋ ಗಣಪತಿಖಂಡೇ
ನಾರದನಾರಾಯಣಸಂವಾದೇ ಕುಮಾರಗಣೇಶವಿವಾಹ
ಕುಮಾರಾಭಿಷೇಕಕಥನಂ ನಾಮ
ಸಪ್ತದಶೋಽಧ್ಯಾಯಃ

೨೨. ಈ ರೀತಿಯಾಗಿ ಗಣೇಶ, ಷಣ್ಮುಖರ, ವಿವಾಹವಿಷಯವನ್ನೂ ಷಣ್ಮುಖ ನಿಗೆ ಅಭಿಷೇಕವಾದುವನ್ನೂ, ಗಣೇಶನ ಪೂಜಾಕ್ರಮವನ್ನೂ ವಿವರಿಸಿದಂತಾಯಿತು.

೨೩. ಅಂತೆಯೇ ಪಾರ್ವತಿಗೆ ಪುತ್ರೋತ್ಸವವಾದುದನ್ನೂ ದೇವತೆಗಳೆಲ್ಲ ಅಲ್ಲಿ ಸಭೆಸೇರಿದುದನ್ನೂ ವಿವರಿಸಿದೆನು. ಮುಂದೆ ಇನ್ನೇನು ಕೇಳಬೇಕೆಂದು ನಿನ್ನ ಮನೋಭಿಲಾಷೆಯಿದೆ ಎಂಬುದನ್ನು ತಿಳಿಸು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಗಣೇಶಖಂಡದ ನಾರದನಾರಾಯಣ
ಸಂವಾದದಲ್ಲಿ ಕುಮಾರ ಗಣೇಶರ ವಿವಾಹ ಮತ್ತು ಕುಮಾರನ
ಅಭಿಷೇಕವನ್ನು ತಿಳಿಸುವ ಹದಿನೇಳನೆಯ ಅಧ್ಯಾಯವು
ಮುಗಿದುದು.



## ಹದಿನೇಳನೆಯ ಅಧ್ಯಾಯದ ಸಾರಾಂಶ

---

ಅನಂತರ ಶ್ರೀಹರಿಯೇ ಮುಂತಾದ ಸಕಲ ದೇವತೆಗಳೂ ಕುಮಾರನಿಗೆ ಅಭಿಷೇಕಮಾಡಿ, ಅನೇಕ ಬಳುವಳಿಗಳನ್ನು ಕೊಟ್ಟು, ಎಲ್ಲಾ ವಿದ್ಯೆಗಳನ್ನೂ ಉಪದೇಶಿಸಿ ಆಶೀರ್ವದಿಸಿದರು. ಅಲ್ಲದೆ ಷಣ್ಮುಖನಿಗೆ ಷಷ್ಠಿ (ದೇವಸೇನೆ) ದೇವಿಯನ್ನೂ ಗಣೇಶನಿಗೆ ಪುಷ್ಟಿದೇವಿಯನ್ನೂ ಕೊಟ್ಟು ವಿವಾಹಮಾಡಿಸಿ ಎಲ್ಲ ದೇವತೆಗಳೂ ಹಿಂದಕ್ಕೆ ತೆರಳಿದರು. ಇತ್ತ ಶಿವಪಾರ್ವತಿಯರು ಪುತ್ರರೊಡಗೂಡಿ ಸುಖಸಂತೋಷದಿಂದಿದ್ದರು.



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ಅಷ್ಟಾದಶೋಽಧ್ಯಾಯಃ ॥

॥ ನಾರದ ಉವಾಚ ॥

ನಾರಾಯಣ ಮಹಾಭಾಗ ವೇದವೇದಾಂಗಪಾರಗ ।
ಪೃಚ್ಛಾಮಿ ತ್ವಾಮಹಂ ಕಿಂಚಿದತಿಸಂದೇಹವಾನ್ಯತಃ ॥ ೧ ॥

ಸುತಸ್ಯ ತ್ರಿದಶೇಶಸ್ಯ ಶಂಕರಸ್ಯ ಮಹಾತ್ಮನಃ ।
ವಿಘ್ನನಿಘ್ನಸ್ಯ ಯದ್ವಿಘ್ನಮೀಶ್ವರಸ್ಯ ಕಥಂ ಪ್ರಭೋ ॥ ೨ ॥

ಪರಿಪೂರ್ಣತಮಃ ಶ್ರೀಮಾನ್ಪರಮಾತ್ಮಾ ಪರಾತ್ಪರಃ ।
ಗೋಲೋಕನಾಥಃ ಸ್ವಾಂಶೇನ ಪಾರ್ವತೀತನಯಃ ಸ್ವಯಂ ॥ ೩ ॥

### ಹದಿನೆಂಟನೆಯ ಅಧ್ಯಾಯವು

೧. ನಾರದ :—ವೇದವೇದಾಂಗಪಾರಂಗತನಾದ ಎಲೈ ನಾರಾಯಣನೇ ಈಗ ನನಗೆ ಸಂದೇಹವೊದಗಿರುವ ಕೆಲವಂಶಗಳನ್ನು ನಿನ್ನಲ್ಲಿ ಕೇಳಬಯಸುತ್ತೇನೆ.

೨. ಮಹಾತ್ಮನೂ, ದೇವತೆಗಳಿಗೆ ಈಶ್ವರನೂ ಆದ ಶಂಕರನಿಗೆ, ಪುತ್ರನಾಗಿ ಜನಿಸಿ ವಿಘ್ನಸಂಹಾರಕನಾದ, ವಿಘ್ನೇಶ್ವರನಿಗೂ ಶಿರಶ್ಛೇದರೂಪವಾದ ವಿಘ್ನವು ಸಂಭವಿಸಿದುದೆಂತು ?

೩. ಗೋಲೋಕಾಧಿಪತಿಯೂ, ಪರಿಪೂರ್ಣಸ್ವರೂಪನೂ ಆದ ಶ್ರೀಕೃಷ್ಣ ಪರಮಾತ್ಮನು ತನ್ನದೊಂದಂಶದಿಂದ ಪಾರ್ವತಿಯ ಪುತ್ರನಾಗಿ ಅವತರಿಸಿ ಗಣಪತಿ ಯೆನಿಸಿಕೊಂಡಿದ್ದಾನೆ.

ಷದರ್ಶ ಕಶ್ಯಪಃ ಪುತ್ರಂ ಮೃತಮುತ್ತಾನಲೋಚನಂ ।
ಕೃತ್ವಾ ವಕ್ಷಸಿ ತಂ ಶೋಕಾದ್ವಿಲಲಾಪ ಭೃಶಂ ಮುಹುಃ ॥ ೮

ಹಾಹಾಕಾರಂ ಸುರಾಶ್ಚಕ್ರುರ್ವಿಲೇಪುರ್ಭಯಕಾತರಾಃ ।
ಅಂಧೀಭೂತಂ ಜಗತ್ಸರ್ವಂ ಬಭೂವ ತಮಸಾವೃತಂ ॥ ೯

ನಿಷ್ಪ್ರಭಂ ತನಯಂ ದೃಷ್ಟ್ವಾ ಚಾಶಪತ್ಕಶ್ಯಪಃ ಶಿವಂ ।
ತಪಸ್ವೀ ಬ್ರಹ್ಮಣಃ ಪೌತ್ರಃ ಪ್ರಜ್ವಲನ್ಬ್ರಹ್ಮತೇಜಸಾ ॥ ೧೦

ಮತ್ಪುತ್ರಸ್ಯ ಯಥಾ ವಕ್ಷಶ್ಛಿನ್ನಂ ಶೂಲೇನ ತೇಽದ್ಯ ವೈ ।
ತ್ವತ್ಪುತ್ರಸ್ಯ ಶಿರಶ್ಛಿನ್ನಂ ಭವಿಷ್ಯತಿ ನ ಸಂಶಯಃ ॥ ೧೧

ಶಿವಶ್ಚ ಗಲಿತಕ್ರೋಧಃ ಕ್ಷಣೇನೈವಾಶುತೋಷಕಃ ।
ಬ್ರಹ್ಮಜ್ಞಾನೇನ ತತ್ಸೂರ್ಯಂ ಜೀವಯಾಮಾಸ ತತ್ಕ್ಷಣಾತ್ ॥ ೧೨

---

೮. ಆಗ ಕಶ್ಯಪಪ್ರಜಾಪತಿಯು ಸತ್ತವನಂತೆ ಅಂಗಾತನಾಗಿ ಬಿದ ಕಣ್ಣುಗುಡ್ಡೆಗಳನ್ನು ಸಿಕ್ಕಿಸಿಕೊಂಡಿರುವ ಪುತ್ರನಾದ ಸೂರ್ಯನನ್ನು ನೋಡಿ, ಎದೆ ಅಪ್ಪಿಕೊಂಡು ಬಹಳವಾಗಿ ಗೋಳಾಡಿದನು.

ದೇವತೆಗಳೆಲ್ಲರೂ ಭಯವಿಹ್ವಲರಾಗಿ ಹಾಹಾಕಾರ ಮಾಡುತ್ತ ಗೋಳಾಡಿ ದರು. ಜಗತ್ತೆಲ್ಲವೂ ಗಾಢಾಂಧಕಾರಮಯವಾಯಿತು.

೧೦. ಈ ರೀತಿಯಾಗಿ ತೇಜೋರಹಿತನಾದ ಮಗನನ್ನು ನೋಡಿ ತಪಸ್ವಿಯು ಬ್ರಹ್ಮನ ಪೌತ್ರನೂ, ಬ್ರಹ್ಮತೇಜೋವಿಶಿಷ್ಟನೂ ಆದ ಕಶ್ಯಪನು ಶಿವನಿಗೆ ಮುಂ ಹೇಳುವಂತೆ ಶಾಪಕೊಟ್ಟನು.

೧೧. ಈ ದಿವಸ ನನ್ನ ಮಗನ ವಕ್ಷಃಸ್ಥಳವು ನಿನ್ನ ಶೂಲಾಯುಧದಿಂ ಛಿನ್ನವಾದಂತೆ, ನಿನ್ನ ಮಗನ ತಲೆಯೂ ಛಿನ್ನವಾಗುವುದು ಇದರಲ್ಲಿ ಸಂಶಯವಿಲ್ಲ.

೧೨. ಈ ರೀತಿಯಾದ ಶಾಪವನ್ನು ಕೇಳಿ ಅಲ್ಪದಿಂದಲೇ ತುಷ್ಟನಾಗಬ ಶಿವನು ಕೋಪವನ್ನುಳಿದು, ಬ್ರಹ್ಮಜ್ಞಾನದ ಮಹಿಮೆಯಿಂದ ಆ ಕ್ಷಣವೇ ಸೂರ್ಯ ನನ್ನು ಬದುಕಿಸಿದನು.

ಅಹೋ ಭಗವತಸ್ತಸ್ಯ ಮಸ್ತಕಚ್ಛೇದನಂ ವಿಭೋ ।
ಗ್ರಹದೃಷ್ಟ್ಯಾ ಗ್ರಹೇಶಸ್ಯ ಕಥಂ ಮೇ ವಕ್ತುಮರ್ಹಸಿ ॥ ೪ ॥

॥ ನಾರಾಯಣ ಉವಾಚ ॥

ಸಾವಧಾನಂ ಶೃಣು ಬ್ರಹ್ಮನ್ನಿತಿಹಾಸಂ ಪುರಾತನಂ ।
ವಿಘ್ನೇಶಸ್ಯ ಬಭೂವೇದಂ ವಿಘ್ನಂ ಯೇನ ಚ ನಾರದ ॥ ೫ ॥

ಏಕದಾ ಶಂಕರಃ ಸೂರ್ಯಂ ಜಘಾನ ಪರಮಕ್ರುಧಾ ।
ಸುಮಾಲಿಮಾಲಿಹಂತಾರಂ ಶೂಲೇನ ಬಹುವತ್ಸಲಃ ॥ ೬ ॥

ತ್ರೀಸೂರ್ಯೋಽಮೋಘಶೂಲೇನಾಶನಿತುಲ್ಯೇನತೇಜಸಾ ।
ಜಹೌ ಸ ಚೇತನಾಂ ಸದ್ಯೋ ರಥಾಚ್ಚ ನಿಪಪಾತ ಹ ॥ ೭ ॥

೪. ಅಂಥ ಭಗವಂತನಿಗೆ ಶಿರಚ್ಛೇದನವಾಯಿತೆಂಬುದು ಆಶ್ಚರ್ಯಕರ ವಾದುದಲ್ಲವೇ? ಗ್ರಹಚಾರ ದೃಷ್ಟಿಯಿಂದಲಾದರೂ, ಗ್ರಹಪತಿಯಾದ ಅವನಿಗೆ ಈ ರೀತಿಯಾದ ಕೆಡಕು ಸಂಭವಿಸಲಾರದಲ್ಲ ? ಇದು ಹೇಗೆ ಸಂಭವಿಸಿತೆಂಬುವನ್ನು ನನಗೆ ಹೇಳು ?

೫. ನಾರಾಯಣ :—ಎಲೈ ಬ್ರಾಹ್ಮಣೋತ್ತಮನಾದ ನಾರದನೇ ವಿಘ್ನೇಶ್ವರ ನಿಗೆ ಈ ರೀತಿಯಾದ ವಿಘ್ನವು ಹೇಗೆ ಸಂಭವಿಸಿತೆಂಬುದನ್ನು ತಿಳಿಸುವ ಪುರಾತನ ವಾದ ಇತಿಹಾಸವನ್ನು ಹೇಳುವೆನು. ಸಾವಧಾನದಿಂದ ಕೇಳು.

೬. ಒಮ್ಮೆ ಸೂರ್ಯದೇವನು ಸುಮಾಲಿ ಮತ್ತು ಮಾಲಿಯೆಂಬ ರಾಕ್ಷಸರನ್ನು ದಂಡಿಸಲು, ಅವರಲ್ಲಿ ವತ್ಸಲನಾದ ಶಂಕರನು ಕುಪಿತನಾಗಿ ಶೂಲಾಯುಧದಿಂದ ಸೂರ್ಯನನ್ನು ಹೊಡೆದನು.

೭. ವಜ್ರಾಯುಧಕ್ಕೆ ಸದೃಶವಾದ ಆ ಶೂಲಾಯುಧದ ಪೆಟ್ಟಿನಿಂದ ಸೂರ್ಯ ದೇವನು ಮೂರ್ಛಿತನಾಗಿ, ರಥದಿಂದ ಕೆಳಕ್ಕುರುಳಿದನು.

ಬ್ರಹ್ಮವಿಷ್ಣುಮಹೇಶಾನಾಮಂಶಶ್ಚ ತ್ರಿಗುಣಾತ್ಮಕಃ ।
ಸೂರ್ಯಶ್ಚ ಚೇತನಾಂ ಪ್ರಾಪ್ಯ ಸಮುತ್ತಸ್ಥೌ ಪಿತುಃ ಪುರಃ ॥ ೧೩ ॥

ನನಾಮ ಪಿತರಂ ಭಕ್ತ್ಯಾ ಶಂಕರಂ ಭಕ್ತವತ್ಸಲಃ ।
ವಿಜ್ಞಾಯ ಶಂಭೋಃ ಶಾಪಂ ಚ ಕಶ್ಯಪಂ ಸಂಚುಕೋಪ ಹ ॥ ೧೪ ॥

ವಿಷಯಾನ್ನೈವ ಜಗ್ರಾಹ ಕೋಪೇನೈವಮುವಾಚ ಹ ।
ವಿಷಯಾಂಶ್ಚ ಪರಿತ್ಯಜ್ಯ ಭಜೇ ಶ್ರೀಕೃಷ್ಣಮೀಶ್ವರಂ ॥ ೧೫ ॥

ಸರ್ವಂ ತುಚ್ಛಮನಿತ್ಯಂ ಚ ನಶ್ವರಂ ಚೇಶ್ವರಂ ವಿನಾ ।
ವಿಹಾಯ ಮಂಗಲಂ ಸತ್ಯಂ ವಿದ್ವಾನ್ಕೇಚ್ಛೇದಮಂಗಲಂ ॥ ೧೬ ॥

ದೇವೈಶ್ಚ ಪ್ರೇರಿತೋ ಬ್ರಹ್ಮಾ ಸಮಾಗತ್ಯ ಸಸಂಭ್ರಮಃ ।
ಬೋಧಯಿತ್ವಾ ರವಿಂ ತತ್ರ ಯುಯೋಜ ವಿಷಯೇಷ್ವಜಃ ॥ ೧೭ ॥

---

೧೩. ಬ್ರಹ್ಮ ವಿಷ್ಣು ಮಹೇಶ್ವರರ ಅಂಶಜನೂ ತ್ರಿಗುಣಾತ್ಮಕನೂ ಆದ ಸೂರ್ಯನು, ಚೇತನವನ್ನು ಪಡೆದು ತಂದೆಯ ಇದುರಿನಲ್ಲಿ ಎದ್ದು ನಿಂತನು.

೧೪ ಭಕ್ತವತ್ಸಲನಾದ ಸೂರ್ಯದೇವನು ಭಕ್ತಿಪೂರ್ವಕವಾಗಿ ತಂದೆಗೂ, ಶಿವನಿಗೂ ನಮಸ್ಕಾರ ಮಾಡಿದನು. ಮತ್ತು ಈಶ್ವರನಿಗೆ ಶಾಪಕೊಟ್ಟಿದ್ದನ್ನು ಕೇಳಿ ಕಶ್ಯಪನ ಮೇಲೆ ಕೋಪಗೊಂಡನು.

೧೫. ಸಂಸಾರವನ್ನಂಗೀಕರಿಸದೆ, ಕುಪಿತನಾಗಿ ನಾನು ವಿಷಯಸುಖಗಳನ್ನು ತ್ಯಜಿಸಿ ಶ್ರೀಕೃಷ್ಣಪರಮಾತ್ಮನ ಪಾದಕಮಲಗಳನ್ನು ಭಜಿಸುವೆನೆಂದು ಹೇಳಿದನು.

೧೬. ಈಶ್ವರನನ್ನು ಬಿಟ್ಟು ಉಳಿದುದೆಲ್ಲವೂ ತುಚ್ಛವೂ ಅನಿತ್ಯವೂ ಆದುದು. ವಿದ್ವಾಂಸನು ನಿತ್ಯನೂ ಮಂಗಳಸ್ವರೂಪನೂ ಆದ ಪರಮಾತ್ಮನನ್ನು ಬಿಟ್ಟು ಅಮಂಗಳವಾದ ವಸ್ತುವನ್ನು ಭಜಿಸನು ?

೧೭. ಹೀಗೆ ನುಡಿದ ಸೂರ್ಯದೇವನ ಮಾತನ್ನು ಕೇಳಿ, ದೇವತೆಗಳಿಂದ ಪ್ರೇರಿತನಾದ ಬ್ರಹ್ಮನು ಸಂಭ್ರಮದಿಂದ ಅಲ್ಲಿಗೆ ಬಂದು, ಸೂರ್ಯನಿಗೆ ಉಪದೇಶ ಮಾಡಿ ಸಂಸಾರದಲ್ಲಿ ತೊಡಗಿಸಿದನು.

ತಸ್ಮೈ ದತ್ವಾಶಿಷಶ್ಶಂಭುರ್ಬ್ರಹ್ಮಾ ಚ ಸ್ವಾಲಯಂ ಮುದಾ ।
ಜಗಾಮ ಕಶ್ಯಪಶ್ಚೈವ ಸ್ವರಾಶಿಂ ರವಿರೇವ ಚ ॥ ೧೮ ॥

ಅಥ ಮಾಲೀ ಸುಮಾಲೀ ಚ ವ್ಯಾಧಿಗ್ರಸ್ತೌ ಬಭೂವತುಃ ।
ಶ್ವಿತ್ರೌ ಗಲಿತಸರ್ವಾಂಗೌ ಶಕ್ತಿಹೀನೌ ಹತಪ್ರಭೌ ॥ ೧೯ ॥

ತಾವುವಾಚ ಸ್ವಯಂ ಬ್ರಹ್ಮಾ ಯುವಾಂ ಚ ಭಜತಾಂ ರವಿಂ ।
ಸೂರ್ಯಕೋಪೇನ ಮಲಿನೌ ಯುವಾಮೇವಂ ಹತಪ್ರಭೌ ॥ ೨೦ ॥

ಸೂರ್ಯಸ್ಯ ಕವಚಂ ಸ್ತೋತ್ರಂ ಸರ್ವಂ ಪೂಜಾವಿಧಿಂ ವಿಧಿಃ ।
ಜಗಾಮ ಕಥಯಿತ್ವಾ ತೌ ಬ್ರಹ್ಮಲೋಕಂ ಸನಾತನಃ ॥ ೨೧ ॥

ತತಸ್ತೌ ಪುಷ್ಕರಂ ಗತ್ವಾ ಸಿಷೇವಾತೇ ರವಿಂ ಮುನೇ ।
ಸ್ನಾತ್ವಾ ತ್ರಿಕಾಲಂ ಭಕ್ತ್ಯಾ ಚ ಜಪಂತೌ ಮಂತ್ರಮುತ್ತಮಂ ॥ ೨೨ ॥

---

೧೮. ಅನಂತರ ಅವನಿಗೆ ಆಶೀರ್ವಾದಮಾಡಿ ಬ್ರಹ್ಮನೂ ಮತ್ತು ಶಿವನೂ ಸಂತೋಷದಿಂದ ತಮ್ಮ ಲೋಕಕ್ಕೆ ತೆರಳಿದರು. ಇತ್ತ ಕಶ್ಯಪನು ತನ್ನ ಮಂದಿರಕ್ಕೂ, ಸೂರ್ಯನು ತನ್ನ ರಾಶಿಗೂ ತೆರಳಿದರು.

೧೯. ಮಾಲಿ, ಸುಮಾಲಿಯುರಾದರೋ ಕುಷ್ಠರೋಗ ಪೀಡಿತರಾಗಿ, ಶಕ್ತಿ ಮತ್ತು ಕಾಂತಿಹೀನರಾಗಿ, ನರಳುತ್ತಿದ್ದರು.

೨೦. 'ಸೂರ್ಯನ ಕೋಪಕ್ಕೆ ಪಾತ್ರರಾಗಿ ನೀವಿಬ್ಬರೂ ಹೀಗೆ ನರಳುತ್ತಿರುವುದರಿಂದ ಸೂರ್ಯನನ್ನು ಭಜಿಸಿರಿ' ಎಂದು ಬ್ರಹ್ಮನು ಅವರಿಬ್ಬರಿಗೂ ಹೇಳಿದನು.

೨೧. ಅಲ್ಲದೆ ಸೂರ್ಯದೇವನ ಕವಚ, ಸ್ತೋತ್ರ ಮತ್ತು ಪೂಜಾವಿಧಿಯನ್ನು ಅವರಿಗೆ ಹೇಳಿ ಬ್ರಹ್ಮನು ತನ್ನ ಲೋಕಕ್ಕೆ ತೆರಳಿದನು.

೨೨. ಅನಂತರ ಮಾಲಿಸುಮಾಲಿಯರು ಪುಷ್ಕರಕ್ಷೇತ್ರಕ್ಕೆ ಹೋಗಿ, ತ್ರಿಕಾಲ ಸ್ನಾನದಿಂದ ಶುದ್ಧರಾಗಿ, ಭಕ್ತಿಯಿಂದ ಸೂರ್ಯಮಂತ್ರವನ್ನು ಜಪಿಸುತ್ತ ಸೂರ್ಯದೇವನನ್ನು ಸೇವಿಸಿದರು.

ತತಃ ಸೂರ್ಯಾದ್ವರಂ ಪ್ರಾಪ್ಯ ನಿಜರೂಪೌ ಬಭೂವತುಃ ।
ಇತ್ಯೇವಂ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ　　॥ ೨೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ವಿಘ್ನೇಶವಿಘ್ನಕಥನಂ ನಾಮ
ಅಷ್ಟಾದಶೋಽಧ್ಯಾಯಃ

೨೩. ಸೂರ್ಯದೇವನ ವರವನ್ನು ಪಡೆದು, ತಮ್ಮ ನಿಜಸ್ವರೂಪವನ್ನು ಹೊಂದಿದರು. ಇಂತು ಶಿವನಿಗೆ ಶಾಪ ಬಂದು ಗಣಪತಿಯ ಶಿರಚ್ಛೇದನವಾಗಲು ಕಾರಣವನ್ನು ಹೇಳಿದೆನು. ಇನ್ನೇನನ್ನು ತಿಳಿಯಲು ನಿನಗೆ ಅಭಿಲಾಷೆಯಿರುವುದು.

ಇಲ್ಲಿಗೆ ಬ್ರಹ್ಮವೈವರ್ತ ಮಹಾ ಪುರಾಣದ ಗಣೇಶಖಂಡದಲ್ಲಿ
ವಿಘ್ನೇಶ್ವರನ ವಿಘ್ನವನ್ನು ತಿಳಿಸುವ
ಹದಿನೆಂಟನೆಯ ಅಧ್ಯಾಯವು ಮುಗಿದುದು.



## ಹದಿನಾಲ್ಕನೆಯ ಅಧ್ಯಾಯದ ಸಾರಾಂಶ

---

ವಿಘ್ನೇಶ್ವರನ ಶಿರಚ್ಛೇದನಕ್ಕೆ ಕಾರಣವೇನೆಂದು ಕೇಳಿದ ನಾರದನನ್ನು ಕುರಿತು ನಾರಾಯಣಮಹರ್ಷಿಯು ಹೀಗೆಂದನು. ಒಂದೊಮ್ಮೆ ಸೂರ್ಯನು ಸುಮಾಲಿ ಮತ್ತು ಮಾಲಿ ಎಂಬ ರಾಕ್ಷಸರನ್ನು ದಂಡಿಸಲು ಅವರಲ್ಲಿ ವತ್ಸಲನಾದ ಶಂಕರನು ಕುಪಿತನಾಗಿ ಶೂಲಾಯುಧದಿಂದ ಸೂರ್ಯನನ್ನು ಹೊಡೆದು ರಥದ ಕೆಳಕ್ಕುರಳಿಸಿದನು. ಆಗ ಸೂರ್ಯನ ತಂದೆಯಾದ ಕಶ್ಯಪಪ್ರಜಾಪತಿಯು ಈಶ್ವರನ ಮೇಲೆ ಕೋಪಗೊಂಡು ನಿನ್ನ ಮಗನಾದ ಗಣಪತಿಯ ಶಿರಚ್ಛೇದನವಾಗಲೆಂದು ಪ್ರತಿಶಾಪವಿತ್ತನು. ಇತ್ತ ಸೂರ್ಯನು ಮೂರ್ಛೆಗೊಂಡಿದ್ದುದರಿಂದ ಜಗತ್ತೆಲ್ಲವೂ ಗಾಢಾಂಧಕಾರದಿಂದ ತುಂಬಿದ್ದಿತು. ಆಗ ಶಾಂತನಾದ ಈಶ್ವರನು ತನ್ನ ಬ್ರಹ್ಮಜ್ಞಾನದ ಮಹಿಮೆಯಿಂದ ಸೂರ್ಯನನ್ನು ಚೇತನಗೊಳಿಸಿದನು. ಅನಂತರ ಸೂರ್ಯನು ಸಂಸಾರದಲ್ಲಿ ವಿರಕ್ತನಾಗಲು ಬ್ರಹ್ಮನು ಅವನನ್ನು ಸಂಸಾರದಲ್ಲಿ ತೊಡಗಿಸಿದನು. ಸೂರ್ಯನ ಕೋಪಕ್ಕೊಳಗಾದ ಮಾಲಿ ಸುಮಾಲಿಯರು ಕುಷ್ಠರೋಗ ಪೀಡಿತರಾಗಿ, ಬ್ರಹ್ಮನ ಉಪದೇಶದಂತೆ, ಸೂರ್ಯನ ಕವಚ ಸ್ತೋತ್ರ ಮಂತ್ರಾದಿಗಳನ್ನು ಜಪಿಸಿ ಸೂರ್ಯನ ವರದಿಂದ ತಮ್ಮ ನಿಜಸ್ವರೂಪವನ್ನು ಹೊಂದಿದರು. ಕಶ್ಯಪನ ಶಾಪದಿಂದ ವಿಘ್ನೇಶ್ವರನ ಶಿರಚ್ಛೇದನವಾಯಿತು



|| ಓಂ ||

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### || ಏಕೋನವಿಂಶತಿತಮೋಽಧ್ಯಾಯಃ ||

|| ನಾರದ ಉವಾಚ ||

ಕಿಂ ಸ್ತೋತ್ರಂ ಕವಚಂ ನಾಥ ಬ್ರಹ್ಮಣಾ ಲೋಕಸಾಕ್ಷಿಣಾ |
ದಾನವಾಭ್ಯಾಂ ಪುರಾ ದತ್ತಂ ಸೂರ್ಯಸ್ಯ ಪರಮಾತ್ಮನಃ || ೧ ||

ಕಿಂ ವಾ ಪೂಜಾವಿಧಾನಂ ವಾ ಕಿಂ ಮಂತ್ರಂ ವ್ಯಾಧಿನಾಶನಂ |
ಸರ್ವಂ ಚಾಸ್ಯ ಮಹಾಭಾಗ ತನ್ಮೇ ತ್ವಂ ವಕ್ತುಮರ್ಹಸಿ || ೨ ||

|| ಸೂತ ಉವಾಚ ||

ನಾರದಸ್ಯ ವಚಃ ಶ್ರುತ್ವಾ ಭಗವಾನ್ಕರುಣಾನಿಧಿಃ |
ಸ್ತೋತ್ರಂ ಚ ಕವಚಂ ಮಂತ್ರಮೂಚೇ ತತ್ಪೂಜನಕ್ರಮಂ || ೩ ||

---

### ಹತ್ತೊಂಭತ್ತನೆಯ ಅಧ್ಯಾಯವು

೧–೨. ನಾರದ :—ಪೂರ್ವದಲ್ಲಿ ಲೋಕಸಾಕ್ಷಿಯಾದ ಬ್ರಹ್ಮನು ಮಾಲಿ ಸುಮಾಲಿಯರಿಗೆ ಉಪದೇಶಿಸಿದ ಸೂರ್ಯನ ಕವಚಸ್ತೋತ್ರಗಳಾವುವು ? ಎಲೈ ಮಹಾತ್ಮನೇ, ಸೂರ್ಯನ ಪೂಜಾವಿಧಾನವನ್ನೂ, ವ್ಯಾಧಿನಾಶಕವಾದ ಸೂರ್ಯ ಮಂತ್ರವನ್ನೂ, ನನಗೆ ಉಪದೇಶಿಸಿ ಸೂರ್ಯನ ಮಹಿಮೆಯನ್ನು ತಿಳಿಸು.

೩. ಸೂತಮಹರ್ಷಿ :—ನಾರದನ ಮಾತನ್ನು ಕೇಳಿ ಕರುಣಾನಿಧಿಯಾದ ನಾರಾಯಣಋಷಿಯು, ಸೂರ್ಯದೇವನ ಕವಚಸ್ತೋತ್ರಮಂತ್ರಾದಿ ಪೂಜಾವಿಧಾನ ವನ್ನು ತಿಳಿಸಿದನು.

|| ನಾರಾಯಣ ಉವಾಚ ||

ಶೃಣು ನಾರದ ವಕ್ಷ್ಯಾಮಿ ಸೂರ್ಯಪೂಜಾವಿಧೇಃ ಕ್ರಮಂ |
ಸ್ತೋತ್ರಂ ಚ ಕವಚಂ ಸರ್ವಂ ಪಾಪವ್ಯಾಧಿವಿಮೋಚಕಂ || ೪

ಸುಮಾಲಿಮಾಲಿನೌ ದೈತ್ಯೌ ವ್ಯಾಧಿಗ್ರಸ್ತೌ ಬಭೂವತುಃ |
ವಿಧಿಂ ಸಸ್ಮರತುಃ ಸ್ತೋತುಂ ಶಿವಮಂತ್ರಪ್ರದಾಯಕಂ || ೫

ಬ್ರಹ್ಮಾ ಗತ್ವಾ ಚ ವೈಕುಂಠಂ ಪಪ್ರಚ್ಛ ಕಮಲಾಪತಿಂ |
ಶಿವಂ ತತ್ರೈವ ಸಂಪಶ್ಯನ್ಸ್ವಸಂತಂ ಹರಿಸನ್ನಿಧೌ || ೬

|| ಬ್ರಹ್ಮೋವಾಚ ||

ಸುಮಾಲಿಮಾಲಿನೌ ದೈತ್ಯೌ ವ್ಯಾಧಿಗ್ರಸ್ತೌ ಬಭೂವತುಃ |
ಕ ಉಪಾಯೋ ವದ ಹರೇ ತಯೋರ್ವ್ಯಾಧಿವಿನಾಶನೇ || ೭

೪. ನಾರಾಯಣಋಷಿ:—ಎಲೈ ನಾರದನೇ, ಸೂರ್ಯನ ಪೂಜಾವಿಧಿಯನ್ನೂ, ಪಾಪ ಮತ್ತು ವ್ಯಾಧಿಯನ್ನು ವಿಮೋಚನೆಗೊಳಿಸುವ ಸ್ತೋತ್ರಕವಚಗಳನ್ನೂ ಹೇಳುವೆನು ಕೇಳು

೫. ಸುಮಾಲಿ ಮತ್ತು ಮಾಲಿ ಎಂಬ ದಾನವರು ರೋಗಗ್ರಸ್ತರಾಗಿ, ತಮ ಶಿವ ಮಂತ್ರೋಪದೇಶಕನಾದ ಬ್ರಹ್ಮನನ್ನು ಸ್ಮರಿಸಿಕೊಂಡು ಸ್ತುತಿಸಿದರು

೬. ಆಗ ಬ್ರಹ್ಮನು ವೈಕುಂಠಕ್ಕೆ ಹೋಗಿ ಲಕ್ಷ್ಮೀಪತಿಯಾದ ವಿಷ್ಣುವ ಕುರಿತು ಕೇಳಿದನು. ಆಗ ಶಿವನೂ ಶ್ರೀಹರಿಯ ಸನ್ನಿಧಿಯಲ್ಲಿಯೇ ಇದ್ದನು.

೭. ಬ್ರಹ್ಮ:—ಎಲೈ ಶ್ರೀಹರಿಯೇ ಮಾಲಿಸುಮಾಲಿಯರೆಂಬ ಇಬ್ಬ ದೈತ್ಯರು ರೋಗಗ್ರಸ್ತರಾಗಿರುವರು. ಆ ರೋಗಪರಿಹಾರಕ್ಕಾಗಿ ಅವರು ಮ ಬೇಕಾದ ಉಪಾಯವಾವುದು.

ತಾವುವಾಚ ಸ್ವಯಂ ಬ್ರಹ್ಮಾ ರೋಗಗ್ರಸ್ತೌ ದಯಾನಿಧಿಃ ।
ಸ್ತಬ್ಧಾವಾಹಾರರಹಿತೌ ಪೂಯದುರ್ಗಂಧಸಂಯುತೌ ॥ ೧೨ ॥

॥ ಬ್ರಹ್ಮೋವಾಚ ॥

ಗೃಹೀತ್ವಾ ಕವಚಂ ಸ್ತೋತ್ರಂ ಮಂತ್ರಂ ಪೂಜಾವಿಧಿಕ್ರಮಂ ।
ಗತ್ವಾ ಹಿ ಪುಷ್ಕರಂ ವತ್ಸೌ ಭಜಥಃ ಪ್ರಣತೌ ರವಿಂ ॥ ೧೩ ॥

॥ ತಾವೂಚತುಃ ॥

ಭಜಾವ ಕೇನ ವಿಧಿನಾ ಕೇನ ಮಂತ್ರೇಣ ವಾ ವಿಧೇ ।
ಕಿಂ ಸ್ತೋತ್ರಂ ಕವಚಂ ಕಿಂ ವಾ ತದಾವಾಭ್ಯಾಂ ವದಾಧುನಾ ॥ ೧೪ ॥

॥ ಬ್ರಹ್ಮೋವಾಚ ॥

ಕೃತ್ವಾ ತ್ರಿಕಾಲಂ ಸ್ನಾನಂ ಚ ಮಂತ್ರೇಣಾನೇನ ಭಾಸ್ಕರಂ ।
ಸಂಸೇವ್ಯ ಭಾಸ್ಕರಂ ಭಕ್ತ್ಯಾ ನೀರುಜೌ ಚ ಭವಿಷ್ಯಥಃ ॥ ೧೫ ॥

---

೧೨. ದಯಾಮಯನಾದ ಬ್ರಹ್ಮನು, ರೋಗಪೀಡಿತರೂ, ನಿರಾಹಾರಿಗಳೂ, ಕೀವು ಮುಂತಾದವುಗಳಿಂದ ದುರ್ಗಂಧಯುತರೂ ಆದ ಅವರಿಬ್ಬರನ್ನು ಕುರಿತು ಇಂತೆಂದನು

೧೩. ಬ್ರಹ್ಮ :—ಪ್ರೀತಿಪಾತ್ರರಾದ ಮಾಲಿಸುಮಾಲಿಯರೇ, ಸೂರ್ಯ ದೇವನ ಕವಚಸ್ತೋತ್ರಮಂತ್ರಾದಿಗಳನ್ನೂ, ಪೂಜೆಯನ್ನೂ ನನ್ನಿಂದ ಉಪದೇಶ ಹೊಂದಿ, ಪುಷ್ಕರಕ್ಷೇತ್ರಕ್ಕೆ ಹೋಗಿ ಸೂರ್ಯನನ್ನು ಭಜಿಸಿ ನಮಿಸಿರಿ.

೧೪. ಮಾಲಿಸುಮಾಲಿಯರು :—ಎಲೈ ಬ್ರಹ್ಮನೇ, 'ಯಾವ ಮಂತ್ರ ವನ್ನುಚ್ಚರಿಸಿ ಯಾವ ರೀತಿಯಿಂದ ಸೂರ್ಯನನ್ನು ಭಜಿಸೋಣ. ಸೂರ್ಯದೇವನ ಕವಚಸ್ತೋತ್ರಗಳಾವುವು ಎಂಬುದನ್ನು ಈಗ ನಮ್ಮಿಬ್ಬರಿಗೂ ಉಪದೇಶಿಸು.

೧೫. ಬ್ರಹ್ಮ :—ತ್ರಿಕಾಲ ಸ್ನಾನಮಾಡಿ, ಮುಂದೆ ಹೇಳುವ ಈ ಮಂತ್ರ ವನ್ನುಚ್ಚರಿಸಿ ಭಾಸ್ಕರನನ್ನು ಭಕ್ತಿಯಿಂದ ಭಜಿಸಿದರೆ ನೀವಿಬ್ಬರೂ ರೋಗರಹಿತ ರಾಗುವಿರಿ.

|| ವಿಷ್ಣುರುವಾಚ ||

ಕೃತ್ವಾ ಸೂರ್ಯಸ್ಯ ಸೇವಾಂ ಚ ಪುಷ್ಕರೇ ಪೂರ್ಣವತ್ಸರಂ |
ವ್ಯಾಧಿಹಂತುರ್ಮದಂಶಸ್ಯ ತೌ ಚ ಮುಕ್ತೌ ಭವಿಷ್ಯತಃ || ೮ ||

|| ಶಂಕರ ಉವಾಚ ||

ಸೂರ್ಯಸ್ತೋತ್ರಂ ಚ ಕವಚಂ ಮಂತ್ರಂ ಕಲ್ಪತರುಂ ಪರಂ |
ದೇಹಿ ತಾಭ್ಯಾಂ ಜಗತ್ಕಾಂತ ವ್ಯಾಧಿಹಂತುರ್ಮಹಾತ್ಮನಃ || ೯ ||

ಆವಾಂ ಸಂಪತ್ಪ್ರದಾತಾರೌ ಸರ್ವದಾತಾ ಹರಿಃ ಸ್ವಯಂ |
ವ್ಯಾಧಿಹಂತಾ ದಿನಕರೋ ಯಸ್ಯ ಯೋ ವಿಷಯೋ ವಿಧೇ || ೧೦ ||

ತಯೋಸ್ತು ಮಂತ್ರಂ ಸಂಪ್ರಾಪ್ಯ ಯಯೌ ದೈತ್ಯಗೃಹಂ ವಿಧಿಃ |
ತದಾ ಪ್ರಣಮ್ಯ ತಂ ದೃಷ್ಟ್ವಾ ತಸ್ಮೈ ದದತುರಾಸನಂ || ೧೧ ||

೮. ವಿಷ್ಣು :—ನನ್ನ ಅಂಶಜನೂ, ವ್ಯಾಧಿನಾಶಕನೂ ಆದ ಸೂರ್ಯನ ಸೇವೆಯನ್ನು ಪುಷ್ಕರಕ್ಷೇತ್ರದಲ್ಲಿ ಒಂದು ವರ್ಷಕಾಲ ಅವರಿಬ್ಬರೂ ಮಾಡಿ ಮುಕ್ತರಾಗಬಹುದು.

೯. ಶಂಕರ :—ಎಲೈ ಜಗದೊಡೆಯನೇ, ಮಹಾತ್ಮನೂ, ವ್ಯಾಧಿನಾಶಕನೂ ಆದ ಆ ಸೂರ್ಯನ ಸ್ತೋತ್ರಕವಚಗಳನ್ನೂ, ಕಲ್ಪವೃಕ್ಷದಂತಿರುವ ಮಂತ್ರವನ್ನೂ ಆ ದಾನವರಿಬ್ಬರಿಗೂ ದಯವಿಟ್ಟು ಉಪದೇಶಿಸು.

೧೦. ನಾವಿಬ್ಬರು (ಬ್ರಹ್ಮ, ಶಿವ) ಭಕ್ತರ ಇಷ್ಟಾರ್ಥವನ್ನು ಸಾವಕಾಶವಾಗಿ ಸಲ್ಲಿಸುವೆವು. ಸ್ವಯಂ ಶ್ರೀಹರಿಯಾದರೋ ಎಲ್ಲರ ಇಷ್ಟಾರ್ಥವನ್ನೂ ಜಾಗ್ರತೆಯಾಗಿ ಕೊಡುವನು. ಸೂರ್ಯನು ಎಲ್ಲರ ರೋಗನಾಶಕನಾಗಿರುವನು. ಎಲ್ಲರೂ ಅವರವರ ಪಾಲಿಗೆ ಬಂದ ಕಾರ್ಯವನ್ನು ಪೂರ್ಣಗೊಳಿಸುವರು.

೧೧. ಶಂಕರನು ಹೀಗೆ ಹೇಳಿದನಂತರ ಬ್ರಹ್ಮನು, ಶಿವ ಮತ್ತು ವಿಷ್ಣುಗಳಿಂದ ಸೂರ್ಯಮಂತ್ರವನ್ನು ಪಡೆದು ರಾಕ್ಷಸಗೃಹಕ್ಕೆ ಹೋದನು. ಅಲ್ಲಿ ಮಾಲಿ ಸುಮಾಲಿಯರು ಅವನಿಗೆ ವಂದಿಸಿ ಕುಳಿತುಕೊಳ್ಳಲು ಆಸನವನ್ನು ಕೊಟ್ಟರು.

ಓಂ ಹ್ರೀಂ ನಮೋ ಭಗವತೇ ಸೂರ್ಯಾಯ ಪರಮಾತ್ಮನೇ ಸ್ವಾಹಾ ।
ಇತ್ಯನೇನ ಚ ಮಂತ್ರೇಣ ಸಾವಧಾನಂ ದಿವಾಕರಂ ।
ಸಂಪೂಜ್ಯ ಭಕ್ತ್ಯಾ ದತ್ವಾ ವೈ ಚೋಪಹಾರಾಂಸ್ತು ಷೋಡಶ ।
ಏವಂ ಸಂವತ್ಸರಂ ಯಾವದ್ಧ್ರುವಂ ಮುಕ್ತೌ ಭವಿಷ್ಯಥಃ ॥ ೧೬ ॥

ಅಪೂರ್ವಂ ಕವಚಂ ತಸ್ಯ ಯುವಾಭ್ಯಾಂ ಪ್ರದದಾಮ್ಯಹಂ ।
ಯದ್ದತ್ತಂ ಗುರುಣಾ ಪೂರ್ವಮಿಂದ್ರಾಯ ಪ್ರೀತಿಪೂರ್ವಕಂ ॥ ೧೭ ॥

ತತ್ಸಹಸ್ರಭಗಾಂಗಾಯ ಶಾಪೇನ ಗೌತಮಸ್ಯ ಚ ।
ಅಹಲ್ಯಾಹರಣೇನೈವ ಪಾಪಯುಕ್ತಾಯ ಸಂಕಟೇ ॥ ೧೮ ॥

॥ ಬೃಹಸ್ಪತಿರುವಾಚ ॥

ಇಂದ್ರ ಶೃಣು ಪ್ರವಕ್ಷ್ಯಾಮಿ ಕವಚಂ ಪರಮಾದ್ಭುತಂ ।
ಯದ್ಧೃತ್ವಾ ಮುನಯಃ ಪೂತಾ ಜೀವನ್ಮುಕ್ತಾಶ್ಚ ಭಾರತೇ ॥ ೧೯ ॥

೧೬. 'ಓಂ ಹ್ರೀಂ ನಮೋ ಭಗವತೆ ಸೂರ್ಯಾಯ ಪರಮಾತ್ಮನೆ ಸ್ವಾಹಾ' ಎಂಬ ಮಂತ್ರೋಚ್ಚಾರಣ ಪೂರ್ವಕವಾಗಿ, ಸೂರ್ಯದೇವನನ್ನು ಭಕ್ತಿಯಿಂದ ಪೂಜಿಸಿ, ಷೋಡಶೋಪಚಾರಗಳನ್ನು ಸಮರ್ಪಿಸಬೇಕು. ಹೀಗೆ ಒಂದು ವರ್ಷಕಾಲ ಆಚರಿಸಿದರೆ ನೀವಿಬ್ಬರೂ ಖಂಡಿತವಾಗಿಯೂ ರೋಗಮುಕ್ತರಾಗುವಿರಿ.

೧೭. ಸೂರ್ಯದೇವನ ಅಪೂರ್ವವಾದ ಕವಚವನ್ನು ನಿಮ್ಮಿಬ್ಬರಿಗೂ ನಾನು ಕೊಡುವೆನು. ಪೂರ್ವದಲ್ಲಿ ಈ ಕವಚವನ್ನು ಬೃಹಸ್ಪತ್ಯಾಚಾರ್ಯನು ಇಂದ್ರನಿಗೆ ಪ್ರೀತಿಪೂರ್ವಕವಾಗಿ ಅನುಗ್ರಹಿಸಿದನು.

೧೮. ಅಹಲ್ಯಾಪಹಾರರೂಪವಾದ ಪಾಪಕಾರ್ಯಕ್ಕೆ ಹೋಗಿ ಗೌತಮಋಷಿಯ ಶಾಪಕ್ಕೊಳಗಾಗಿ, ಮೈಯಲ್ಲಿ ಸಹಸ್ರಯೋನಿಯನ್ನು ಹೊಂದಿ ವ್ಯಥೆಪಡುತ್ತಿದ್ದ ಇಂದ್ರನು ಈ ಕವಚದ ಉಪದೇಶವನ್ನು ಹೊಂದಿದನು.

೧೯. ಬೃಹಸ್ಪತಿ :—ಸೂರ್ಯದೇವನ ಯಾವ ಕವಚವನ್ನು ಧರಿಸಿ ಭರತ ಖಂಡದಲ್ಲಿ ಮುನಿಗಳು ಪರಮಪವಿತ್ರರೂ ಜೀವನ್ಮುಕ್ತರೂ ಆದರೋ, ಅಂಥ ಕವಚದ ಅತ್ಯದ್ಭುತ ಮಹಿಮೆಯನ್ನು ಹೇಳುವೆನು ಕೇಳು.

ಅಷ್ಟಾದಶಾಕ್ಷರೋ ಮಂತ್ರಃ ಕಪಾಲಂ ಮೇ ಸದಾವತು ।
ಓಂ ಹ್ರೀಂ ಹ್ರೀಂ ಶ್ರೀಂ ಶ್ರೀಂ ಸೂರ್ಯಾಯ ಸ್ವಾಹಾ ಮೇ ಪಾತು ನಾಸಿಕಾಂ॥

ಚಕ್ಷುರ್ಮೇ ಪಾತು ಸೂರ್ಯಶ್ಚ ತಾರಕಾಂ ಚ ವಿಕರ್ತನಃ ।
ಭಾಸ್ಕರೋ ಮೇಽಧರಂ ಪಾತು ದಂತಾನ್ದಿನಕರಃ ಸದಾ　　॥ ೨೫ ॥

ಪ್ರಚಂಡಃ ಪಾತು ಗಂಡಂ ಮೇ ಮಾರ್ತಂಡಃ ಕರ್ಣಮೇವ ಚ ।
ಮಿಹಿರಶ್ಚ ಸದಾ ಸ್ಕಂಧೇ ಜಂಘೇ ಪೂಷಾ ಸದಾವತು　　॥ ೨೬ ॥

ವಕ್ಷಃ ಪಾತು ರವಿಃ ಶಶ್ವನ್ನಾಭಿಂ ಸೂರ್ಯಃ ಸ್ವಯಂ ಸದಾ ।
ಕಂಕಾಲಂ ಮೇ ಸದಾ ಪಾತು ಸರ್ವದೇವನಮಸ್ಕೃತಃ　　॥ ೨೭ ॥

ಕರೌ ಪಾತು ಸದಾ ಬ್ರಧ್ನಃ ಪಾತು ಪಾದೌ ಪ್ರಭಾಕರಃ ।
ವಿಭಾಕರೋ ಮೇ ಸರ್ವಾಂಗಂ ಪಾತು ಸಂತತಮೀಶ್ವರಃ　　॥ ೨೮ ॥

---

೨೪. ಹದಿನೆಂಟಕ್ಷರದ ಸೂರ್ಯ ಮಂತ್ರವು ನನ್ನ ಕಪೋಲಗಳನ್ನು ಸರ್ವದಾ ಕಾಪಾಡಲಿ. ಓಂ, ಹ್ರೀಂ, ಹ್ರೀಂ. ಶ್ರೀಂ, ಶ್ರೀಂ ಸೂರ್ಯಾಯ ಸ್ವಾಹಾ ಎಂಬ, ಮಂತ್ರವು ನನ್ನ ಮೂಗನ್ನು ರಕ್ಷಿಸಲಿ.

೨೫. ಸೂರ್ಯನು ನನ್ನ ಕಣ್ಣುಗಳನ್ನೂ, ವಿಕರ್ತನನು ಕಣ್ಣುಗುಡ್ಡೆಗಳನ್ನೂ, ಭಾಸ್ಕರನು ಕೆಳತುಟಿಯನ್ನೂ, ದಿನಕರನು ದಂತಗಳನ್ನೂ ಸರ್ವದಾ ರಕ್ಷಿಸಲಿ.

೨೬. ಪ್ರಚಂಡನು ನನ್ನ ಗಂಡಸ್ಥಲವನ್ನೂ, ಮಾರ್ತಂಡನು ಕಿವಿಗಳನ್ನೂ, ಮಿಹಿರನು (ಸೂರ್ಯ) ಹೆಗಲುಗಳನ್ನೂ, ಪೂಷನು ಮುಂಡಿಗಳನ್ನೂ ಸರ್ವದಾ ಕಾಪಾಡಲಿ.

೨೭. ರವಿಯು ವಕ್ಷಃಸ್ಥಲವನ್ನೂ, ಸೂರ್ಯನು ನಾಭಿಪ್ರದೇಶವನ್ನೂ, ಸರ್ವ ದೇವಪೂಜ್ಯನು ನನ್ನ ಶರೀರದ ಮೂಳೆಗಳನ್ನೂ ಅನವರತವೂ ರಕ್ಷಿಸಲಿ.

೨೮. ಬ್ರಧ್ನನು (ಸೂರ್ಯ)ನನ್ನ ಕೈಗಳನ್ನೂ, ಪ್ರಭಾಕರನು ನನ್ನ ಪಾದ ಗಳನ್ನೂ, ವಿಭಾಕರನು ಸರ್ವಾಂಗಗಳನ್ನೂ ಸರ್ವದಾ ರಕ್ಷಿಸಲಿ.

ಕವಚಂ ಬಿಭ್ರತೋ ವ್ಯಾಧಿರ್ನ ಭಿಯಾ ಯಾತಿ ಸನ್ನಿಧಿಂ ।
ಯಥಾ ದೃಷ್ಟ್ವಾ ವೈನತೇಯಂ ಪಲಾಯಂತೇ ಭುಜಂಗಮಾಃ ॥ ೨೦

ಶುದ್ಧಾಯ ಗುರುಭಕ್ತಾಯ ಸ್ವಶಿಷ್ಯಾಯ ಪ್ರಕಾಶಯೇತ್ ।
ಖಲಾಯ ಪರಶಿಷ್ಯಾಯ ದತ್ವಾ ಮೃತ್ಯುಮವಾಪ್ನುಯಾತ್ ॥ ೨೧

ಜಗದ್ವಿಲಕ್ಷಣಸ್ಯಾಸ್ಯ ಕವಚಸ್ಯ ಪ್ರಜಾಪತಿಃ ।
ಋಷಿಶ್ಛಂದಶ್ಚ ಗಾಯತ್ರೀ ದೇವೋ ದಿನಕರಃ ಸ್ವಯಂ ।
ವ್ಯಾಧಿಪ್ರಣಾಶೇ ಸೌಂದರ್ಯೇ ವಿನಿಯೋಗಃ ಪ್ರಕೀರ್ತಿತಃ ॥ ೨೨

ಸದ್ಯೋ ರೋಗಹರಂ ಸಾರಂ ಸರ್ವಪಾಪಪ್ರಣಾಶನಂ ।
ಓಂ ಕ್ಲೀಂ ಹ್ರೀಂ ಶ್ರೀಂ ಶ್ರೀಸೂರ್ಯಾಯ ಸ್ವಾಹಾ ಮೇ ಪಾತು ಮಸ್ತಕಂ ।

೨೦. ಈ ಕವಚಧಾರಣೆಮಾಡಿದವನ ಸಮೀಪಕ್ಕೂ ರೋಗ ರುಜಿನಗ ಸುಳಿಯುವುದಿಲ್ಲ. ಗರುಡನನ್ನು ನೋಡಿ ಹಾವುಗಳು ದೂರ ಹೋಗುವಂತೆ ರೋಗಗ ದೂರವಾಗುವುವು.

೨೧. ಈ ಕವಚವನ್ನು ಆಚಾರಶೀಲನೂ ಗುರುಭಕ್ತನೂ, ಸಚ್ಛಿಷ್ಯ ಆದವನಿಗೆ ಮಾತ್ರ ಉಪದೇಶಿಸಬೇಕು. ದುಷ್ಟನಿಗೂ, ಮತ್ತೊಬ್ಬರ ಶಿಷ್ಯನಿ ಉಪದೇಶಿಸುವುದರಿಂದ ಮರಣಸಂಭವಿಸುವುದು.

೨೨. ಜಗತ್ತಿನಲ್ಲಿ ಅತ್ಯಾಶ್ಚರ್ಯಕರವಾದ ಈ ಕವಚಕ್ಕೆ ಪ್ರಜಾಪತಿ ಋಷಿಯು. ಗಾಯತ್ರಿಯೇ ಛಂದಸ್ಸು. ಸ್ವಯಂಸೂರ್ಯನೇ ದೇವತೆಯು. ವ್ಯಾಧಿ ಶದಲ್ಲಿಯೂ, ಸೌಂದರ್ಯ ಪೋಷಣೆಯಲ್ಲಿಯೂ, ಈ ಕವಚದ ವಿನಿಯೋಗವು.

೨೩. ಈ ಕವಚಧಾರಣೆ ಮಾಡಿದನಂತರ ಮುಂದೆ ಹೇಳುವಂತೆ ಆತ್ಮ ಮಾಡಿಕೊಳ್ಳಬೇಕು. ಸದ್ಯಃ ರೋಗನಾಶಕವೂ, ಸರ್ವಪಾಪಪರಿಹಾರಕವೂ ' ಓಂ, ಕ್ಲೀಂ, ಹ್ರೀಂ, ಶ್ರೀಂ, ಶ್ರೀಸೂರ್ಯಾಯ ಸ್ವಾಹಾ' ಎಂಬ ಮಂತ್ರ ನನ್ನ ತಲೆಯನ್ನು ಸರ್ವದಾ ಕಾಪಾಡಲಿ.

ಇತಿ ತೇ ಕಥಿತಂ ವತ್ಸ ಕವಚಂ ಸುಮನೋಹರಂ ।
ಜಗದ್ವಿಲಕ್ಷಣಂ ನಾಮ ತ್ರಿಜಗತ್ಸು ಸುದುರ್ಲಭಂ ॥ ೨೯ ॥

ಪುರಾ ದತ್ತಂ ಚ ಮನವೇ ಪುಲಸ್ತ್ಯೇನ ತು ಪುಷ್ಕರೇ ।
ಮಯಾ ದತ್ತಂ ಚ ತುಭ್ಯಂ ತದ್ಯಸ್ಮೈ-ಕಸ್ಮೈ ನ ದೇಹಿ ಭೋಃ ॥ ೩೦ ॥

ವ್ಯಾಧಿತೋ ಮುಚ್ಯಸೇ ತ್ವಂ ಚ ಕವಚಸ್ಯ ಪ್ರಸಾದತಃ ।
ಭವಾನರೋಗೀ ಶ್ರೀಮಾಂಶ್ಚ ಭವಿಷ್ಯತಿ ನ ಸಂಶಯಃ ॥ ೩೧ ॥

ಲಕ್ಷವರ್ಷಹವಿಷ್ಯೇಣ ಯತ್ಫಲಂ ಲಭತೇ ನರಃ ।
ತತ್ಫಲಂ ಲಭತೇ ನೂನಂ ಕವಚಸ್ಯಾಸ್ಯ ಧಾರಣಾತ್ ॥ ೩೨ ॥

ಇದಂ ಕವಚಮಜ್ಞಾತ್ವಾ ಯೋ ಮೂಢೋ ಭಾಸ್ಕರಂ ಯಜೇತ್ ।
ದಶಲಕ್ಷಪ್ರಜಪ್ತೋಽಪಿ ಮಂತ್ರಸಿದ್ಧಿರ್ನಜಾಯತೇ ॥ ೩೩ ॥

---

೨೯. ಮನೋಹರವೂ, ತ್ರಿಲೋಕದಲ್ಲಿ ದುರ್ಲಭವೂ ಆದ ಜಗದ್ವಿಲಕ್ಷಣ ವೆಂಬ ಈ ಕವಚವನ್ನು ನಿಮಗೆ ಉಪದೇಶಿಸಿರುವೆನು.

೩೦. ಈ ಕವಚವನ್ನು ಪೂರ್ವದಲ್ಲಿ ಪುಲಸ್ತ್ಯಬ್ರಹ್ಮನು ಪುಷ್ಕರಕ್ಷೇತ್ರದಲ್ಲಿ ಮನುವಿಗೆ ಮಾತ್ರ ಉಪದೇಶಿಸಿದ್ದನು. ಈಗ ನಾನು ನಿಮಗೆ ಉಪದೇಶಿಸಿದ್ದೇನೆ. ಇದನ್ನು ಅನರ್ಹರಿಗೆಲ್ಲ ಉಪದೇಶಿಸಕೂಡದು

೩೧. ಈ ಕವಚದ ಮಹಿಮೆಯಿಂದ ನೀವು ರೋಗವಿಮುಕ್ತರಾಗುವಿರಿ. ನೀವು ವ್ಯಾಧಿರಹಿತರೂ ಕಾಂತಿಯುತರೂ ಆಗುವುದರಲ್ಲಿ ಸಂದೇಹವಿಲ್ಲ.

೩೨. ಲಕ್ಷವರ್ಷಗಳ ಕಾಲ ಹವಿಷ್ಯಾನ್ನವನ್ನು ಸೇವಿಸುವುದರಿಂದ ಮನು ಜನಿಗೆ ಯಾವ ಫಲವು ಲಭಿಸುವುದೋ ಆ ಫಲವು ಈ ಕವಚಧಾರಣೆ ಮಾತ್ರದಿಂದ ನಿಶ್ಚಯವಾಗಿ ದೊರೆಯುವುದು.

೩೩. ಯಾವ ಮೂಢನು ಈ ಕವಚವನ್ನು ಅರಿಯದೆ ಸೂರ್ಯನನ್ನು ಭಜಿಸು ವನೋ, ಅವನು ಹತ್ತುಲಕ್ಷಬಾರಿ ಜಪಿಸಿದರೂ ಮಂತ್ರಸಿದ್ಧಿಯುಂಟಾಗುವುದಿಲ್ಲ.

ಬ್ರಹ್ಮವಿಷ್ಣುಮಹೇಶಾನಾಮಂಶಂ ಚ ತ್ರಿಗುಣಾತ್ಮಕಂ ।
ವ್ಯಾಧಿದಂ ವ್ಯಾಧಿಹಂತಾರಂ ಶೋಕಮೋಹಭಯಾಪಹಂ ।
ಸುಖದಂ ಮೋಕ್ಷದಂ ಸಾರಂ ಭಕ್ತಿದಂ ಸರ್ವಕಾಮದಂ ॥ ೩೯ ॥

ಸರ್ವೇಶ್ವರಂ ಸರ್ವರೂಪಂ ಸಾಕ್ಷಿಣಂ ಸರ್ವಕರ್ಮಣಾಂ ।
ಪ್ರತ್ಯಕ್ಷಂ ಸರ್ವಲೋಕಾನಾಮಪ್ರತ್ಯಕ್ಷಂ ಮನೋಹರಂ ॥ ೪೦ ॥

ಶಶ್ವದ್ರಸಹರಂ ಪಶ್ಚಾದ್ರಸದಂ ಸರ್ವಸಿದ್ಧಿದಂ ।
ಸಿದ್ಧಿಸ್ವರೂಪಂ ಸಿದ್ಧೇಶಂ ಸಿದ್ಧಾನಾಂ ಪರಮಂ ಗುರುಂ ॥ ೪೧ ॥

ಸ್ತವರಾಜಮಿದಂ ಪ್ರೋಕ್ತಂ ಗುಹ್ಯಾದ್ಗುಹ್ಯತರಂ ಪರಂ ।
ತ್ರಿಸಂಧ್ಯಂ ಯಃ ಪಠೇನ್ನಿತ್ಯಂ ವ್ಯಾಧಿಭ್ಯಸ್ಸಂಪ್ರಮುಚ್ಯತೇ ॥ ೪೨ ॥

೩೯-೪೦. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳ ಅಂಶರೂಪಿಯಾದುದರಿಂದ ತ್ರಿಗುಣಾತ್ಮಕನೂ, ಪಾಪಿಗಳಿಗೆ ವ್ಯಾಧಿದಾಯಕನೂ, ಪುಣ್ಯವಂತರ ವ್ಯಾಧಿಪರಿಹಾರಕನೂ, ಶೋಕಮೋಹಭಯಪರಿಹಾರಕನೂ, ಸುಖ, ಮೋಕ್ಷ, ಭಕ್ತಿ ಮುಂತಾದ ಸಕಲೇಷ್ಟಾರ್ಥದಾಯಕನೂ ಆದ ಆ ಸರ್ವೇಶ್ವರನು, ಸರ್ವರೂಪಧಾರಿಯಾದುದರಿಂದ, ಸಕಲಕರ್ಮಗಳ ಸಾಕ್ಷಿಯೆನಿಸಿಕೊಂಡು ಎಲ್ಲರಿಗೂ ಪ್ರತ್ಯಕ್ಷನಾಗಿದ್ದರೂ ವಸ್ತುತಃ ಅಪ್ರತ್ಯಕ್ಷನಾಗಿದ್ದಾನೆ.

೪೧. ಪದೇ ಪದೇ ಕೆರೆ, ಕಟ್ಟೆ, ಹೊಳೆಗಳ ನೀರನ್ನು ಆವಿಯಾಗಿ ತೆಗೆದುಕೊಂಡರೂ, ಮಳೆರೂಪದಿಂದ ಅವುಗಳಿಗೆ ನೀರನ್ನು ಕೊಟ್ಟು, ಸಕಲ ಸಿದ್ಧಿದಾಯಕನೂ, ಸಿದ್ಧೇಶನೂ, ಆದ ಆ ಸೂರ್ಯದೇವನೇ ಸಿದ್ಧರಿಗೆಲ್ಲ ಪರಮಗುರುವೆನಿಸಿದ್ದಾನೆ.

೪೨. ಗೂಢವಾದವುಗಳಿಗೆಲ್ಲ ಗೂಢತಮವಾದ ಈ ಸೂರ್ಯನ ಸ್ತೋತ್ರವನ್ನು ಯಾರು ಪ್ರತಿದಿನವೂ ತ್ರಿಸಂಧ್ಯೆಯಲ್ಲಿಯೂ ಭಕ್ತಿಪೂರ್ವಕವಾಗಿ ಪಠಿಸುವರೋ ಅವರು ಸಕಲ ರೋಗಗಳಿಂದಲೂ ಬಿಡುಗಡೆ ಹೊಂದುವರು

**ಸರ್ವವಿಘ್ನಹರಂ ಸಾರಂ ವಿಘ್ನೇಶಂ ವಿಘ್ನನಾಶನಂ ।**
**ಸ್ತೋತ್ರೇಣಾನೇನ ತಂ ಸ್ತುತ್ವಾ ಮುಚ್ಯತೇ ನಾತ್ರ ಸಂಶಯಃ ॥ ೪೮ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ**
**ನಾರದನಾರಾಯಣಸಂವಾದೇ ವಿಘ್ನಕಾರಣಕಥನಂ**
**ನಾಮೈಕೋನವಿಂಶತಿತಮೋಽಧ್ಯಾಯಃ**

೪೮. ಸಕಲ ಸ್ತೋತ್ರಗಳಿಗೆ ಸಾರಭೂತವೂ, ಸಕಲ ವಿಘ್ನವಿನಾಶಕವೂ ಆದ ಈ ಸ್ತೋತ್ರದಿಂದ ಸೂರ್ಯನನ್ನು ಸ್ತುತಿಸಿದರೆ ಮುಕ್ತಿಯುಂಟಾಗುವುದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ವಿಘ್ನಕಾರಣಕಥನರೂಪವಾದ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಆಂಧ್ಯಂ ಕುಷ್ಠಂ ಚ ದಾರಿದ್ರ್ಯಂ ರೋಗಃ ಶೋಕೋ ಭಯಂ ಕಲಿಃ ।
ತಸ್ಯ ನಶ್ಯತಿ ವಿಶ್ವೇಶ ಶ್ರೀಸೂರ್ಯಕೃಪಯಾ ಧ್ರುವಂ ॥ ೪೩ ॥

ಮಹಾಕುಷ್ಠೀ ಚ ಗಲಿತೋ ಚಕ್ಷುರ್ಹೀನೋ ಮಹಾವ್ರಣೀ ।
ಯಕ್ಷ್ಮಗ್ರಸ್ತೋ ಮಹಾಶೂಲೀ ನಾನಾವ್ಯಾಧಿಯುತೋಽಪಿ ವಾ ॥ ೪೪ ॥

ಮಾಸಂ ಕೃತ್ವಾ ಹವಿಷ್ಯಾನ್ನಂ ಶ್ರುತ್ವಾತೋ ಮುಚ್ಯತೇ ಧ್ರುವಂ ।
ಸ್ನಾನಂ ಚ ಸರ್ವತೀರ್ಥಾನಾಂ ಲಭತೇ ನಾತ್ರ ಸಂಶಯಃ ॥ ೪೫ ॥

ಪುಷ್ಕರಂ ಗಚ್ಛತಂ ಶೀಘ್ರಂ ಭಾಸ್ಕರಂ ಭಜತಂ ಸುತೌ ।
ಇತ್ಯೇವಮುಕ್ತ್ವಾ ಸ ವಿಧಿರ್ಜಗಾಮ ಸ್ವಾಲಯಂ ಮುದಾ ॥ ೪೬ ॥

ತೌ ನಿಷೇವ್ಯ ದಿನೇಶಂ ತಂ ನೀರುಜೌ ಸಂಬಭೂವತುಃ ।
ಇತ್ಯೇವಂ ಕಥಿತಂ ವತ್ಸ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೪೭ ॥

---

೪೩. ವಿಶ್ವೇಶನಾದ ಶ್ರೀಸೂರ್ಯದೇವನ ಕೃಪೆಯುಂಟಾದರೆ, ಕುರುಡು, ಕುಷ್ಠ, ದಾರಿದ್ರ್ಯ, ರೋಗ, ಶೋಕ, ಭಯ, ಮತ್ತು ಕಲಿಬಾಧೆಯು ಪರಿಹಾರವುಂಟಾಗುವುದರಲ್ಲಿ ಸಂಶಯವಿಲ್ಲ.

೪೪–೪೫ ಮಹಾಕುಷ್ಠರೋಗದಿಂದ ಗಳಿತನಾಗಿರುವವನೂ, ಕಣ್ಣಿಲ್ಲದವನೂ ವ್ರಣರೋಗ ಪೀಡಿತನೂ, ಕ್ಷಯ, ಶೂಲ ಮುಂತಾದ ನಾನಾವ್ಯಾಧಿಪೀಡಿತನೂ ಒಂದು ತಿಂಗಳು ಹವಿಷ್ಯಾನ್ನವನ್ನು ತಿಂದುಕೊಂಡು ಈ ಸೂರ್ಯಸ್ತೋತ್ರವನ್ನು ಕೇಳುವುದರಿಂದ ರೋಗವಿಮುಕ್ತನಾಗುವನು, ಅವನಿಗೆ ಸಕಲ ತೀರ್ಥಗಳಲ್ಲೂ ಸ್ನಾನಮಾಡಿದ ಫಲವು ಲಭಿಸುವುದು.

೪೬. ಆದುದರಿಂದ ಜಾಗ್ರತೆಯಾಗಿ ಪುಷ್ಕರಕ್ಷೇತ್ರಕ್ಕೆ ಹೋಗಿ ಸೂರ್ಯನನ್ನು ಭಜಿಸಿರಿ. ಹೀಗೆ ಹೇಳಿ ಬ್ರಹ್ಮನು ಸಂತೋಷದಿಂದ ತನ್ನ ಲೋಕಕ್ಕೆ ತೆರಳಿದನು

೪೭. ಬ್ರಹ್ಮನ ಮಾತಿನಂತೆ ಮಾಲಿಸುಮಾಲಿಯರು ಸೂರ್ಯನನ್ನು ಸೇವಿಸಿ ರೋಗರಹಿತರಾದರು ಈ ರೀತಿಯಾಗಿ ಸೂರ್ಯನ ಕವಚಸ್ತೋತ್ರಾದಿಗಳನ್ನು ವಿವರಿಸಿದೆನು ಮತ್ತೇನನ್ನು ಕೇಳಲು ನಿನಗಿಚ್ಛೆಯಿದೆ.

## ಹತ್ತೊಂಭತ್ತನೆಯ ಅಧ್ಯಾಯದ ಸಾರಾಂಶ



ದಾನವರ ಪ್ರಾರ್ಥನೆಯಂತೆ ಬ್ರಹ್ಮನು ವೈಕುಂಠಕ್ಕೆ ತೆರಳಿ, ವಿಷ್ಣುವಿನಿಂದ ಸೂರ್ಯದೇವನ ಕವಚಸ್ತೋತ್ರ ಮಂತ್ರಾದಿಗಳನ್ನು ಪಡೆದು ಬಂದು, ಮಾಲಿ ಸುಮಾಲಿಯರಿಗೆ ಉಪದೇಶಿಸಿದನು ಮತ್ತು ತ್ರಿಸಂಧ್ಯೆಯಲ್ಲೂ ಶುಚಿಯಾಗಿ ಕವಚ ಧಾರಣೆಮಾಡಿ, ಈ ಮಂತ್ರವನ್ನು ಪಠಿಸಬೇಕೆಂದೂ, ಕೇಳಿದವರಿಗೆಲ್ಲ ಅದನ್ನು ಉಪದೇಶಿಸಬಾರದೆಂದೂ ಹೇಳಿದನು. ಸೂರ್ಯನ ಕವಚಮಂತ್ರಾದಿಗಳನ್ನರಿಯದೆ ಕೇವಲ ಧ್ಯಾನದಿಂದ ಯಾವ ಫಲವೂ ದೊರೆಯದು. 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂಬ ಸ್ಮೃತಿವಾಕ್ಯದಂತೆ ಪ್ರತಿಯೊಬ್ಬರೂ ರೋಗಪರಿಹಾರಕ್ಕಾಗಿ ಸೂರ್ಯನನ್ನೇ ಭಜಿಸುವರು. ಸೂರ್ಯಕಿರಣಗಳ ಸಂಪರ್ಕದಿಂದ ರೋಗಿಗಳ ರಕ್ತಶುದ್ಧಿಯಾಗುವುದರ ಮೂಲಕ, ಜೀರ್ಣಶಕ್ತಿಯು ವೃದ್ಧಿಗೊಂಡು ಎಲ್ಲ ರೋಗವೂ ಪರಿಹಾರವಾಗುವುದೆಂಬುದು ವೈದ್ಯಶಾಸ್ತ್ರ ಸಮ್ಮತವಾದುದು. ಆದುದರಿಂದಲೇ ಸಂಜೆಯ ಬಿಸಿಲು ಆಯುರಾಭಿವೃದ್ಧಿಕರವೆಂದು ಬಲ್ಲವರು ಹೇಳುವರು.



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ವಿಂಶತಿತಮೋಽಧ್ಯಾಯಃ ॥

॥ ನಾರದ ಉವಾಚ ॥

ಹರೇರಂಶಸಮುತ್ಪನ್ನೋ ಹರಿತುಲ್ಯೋ ಭವಾನ್ಮಯಾ ।
ತೇಜಸಾ ವಿಕ್ರಮೇಣೈವ ಮತ್ಪ್ರಶ್ನಂ ಶ್ರೋತುಮರ್ಹಸಿ ॥ ೧

ವಿಘ್ನನಿಘ್ನಸ್ಯ ಯದ್ವಿಘ್ನಂ ಶ್ರುತಂ ತತ್ಪರಮಾದ್ಭುತಂ ।
ತದ್ವಿಘ್ನಕಾರಣಂ ಚೈವ ವಿಶ್ವಕಾರಣವಕ್ತ್ರತಃ ॥ ೨

ಅಧುನಾ ಶ್ರೋತುಮಿಚ್ಛಾಮಿ ಪರಂ ಸಂದೇಹಭಂಜನಂ ।
ತ್ರೈಲೋಕ್ಯನಾಥತನಯೇ ಗಜಾಸ್ಯಾಯೋಜನಾರ್ಥಕಂ ॥ ೩

---

### ಇಪ್ಪತ್ತನೆಯ ಅಧ್ಯಾಯವು

೧. ನಾರದ :—ಶ್ರೀಹರಿಯ ಅಂಶಸಂಭವನಾದ ಎಲೈ ನಾರಾಯಣಋಷಿಯೆ ಬುದ್ಧಿ, ತೇಜಸ್ಸು, ಮತ್ತು ಪರಾಕ್ರಮಗಳಿಂದ ಶ್ರೀಹರಿಗೆ ಸಮನಾದ ನೀನು ನನ್ನ ಪ್ರಶ್ನೆಯನ್ನು ಸಾವಧಾನದಿಂದ ಕೇಳು.

೨. ವಿಘ್ನನಾಶಕನಾದ ವಿಘ್ನೇಶ್ವರನಿಗೆ ಒದಗಿದ ವಿಘ್ನವನ್ನು ಅದರ ಕಾರಣವನ್ನೂ, ವಿಶ್ವಕಾರಣನಾದ ಬ್ರಹ್ಮನ ಮುಖದಿಂದ ತಿಳಿದುದಾಯಿತು.

೩–೪ ಈಗ ತ್ರಿಲೋಕೇಶ್ವರನಾದ ಶಂಕರನ ಪುತ್ರನಿಗೆ ಶಿರಚ್ಛೇದನವಾದಾಗ ಆನೆಯ ತಲೆಯನ್ನೇ ಜೋಡಿಸಲು ಮುಖ್ಯ ಕಾರಣವೇನು? ಇನ್ನೂ ಅತ್ಯಂತ ಸುಂ

ಸ್ಥಿತೇಷ್ವನ್ಯೇಷು ಬಹುಷು ಜಂತುಷ್ವಬ್ಜಭುವಃ ಪತೇ ।
ಸುಪ್ರಾಣಿನಾಂ ಸುರೂಪೇಷು ನಾನಾರೂಪೇಷು ರೂಪಿಣಾಂ ॥ ೪ ॥

॥ ಶ್ರೀ ನಾರಾಯಣ ಉವಾಚ ॥

ಗಜಾಸ್ಯಯೋಜನಾಯಾಶ್ಚ ಕಾರಣಂ ಶೃಣು ನಾರದ ।
ಗೋಪ್ಯಂ ಸರ್ವಪುರಾಣೇಷು ವೇದೇಷು ಚ ಸುದುರ್ಲಭಂ ॥ ೫ ॥

ತಾರಣಂ ಸರ್ವದುಃಖಾನಾಂ ಕಾರಣಂ ಸರ್ವಸಂಪದಾಂ ।
ಹಾರಣಂ ವಿಪದಾಂ ಚೈವ ರಹಸ್ಯಂ ಪಾಪಮೋಚನಂ ॥ ೬ ॥

ಮಹಾಲಕ್ಷ್ಮ್ಯಾಶ್ಚ ಚರಿತಂ ಸರ್ವಮಂಗಲಮಂಗಲಂ ।
ಸುಖದಂ ಮೋಕ್ಷದಂ ಚೈವ ಚತುರ್ವರ್ಗಫಲಪ್ರದಂ ॥ ೭ ॥

ಶೃಣು ತಾತ ಪ್ರವಕ್ಷ್ಯೇಽಹಮಿತಿಹಾಸಂ ಪುರಾತನಂ ।
ರಹಸ್ಯಂ ಪಾದ್ಮಕಲ್ಪಸ್ಯ ಪುರಾ ತಾತಮುಖಾಚ್ಛ್ರುತಂ ॥ ೮ ॥

---

ರವೂ, ಮನೋಹರವೂ ಆದ ಬೇರೆ ಬೇರೆ ಪ್ರಾಣಿಗಳಿರಲಿಲ್ಲವೇ ? ಅವೆಲ್ಲವನ್ನೂ ಬಿಟ್ಟು ಗಜಮುಖವನ್ನೇ ಸೇರಿಸಲು ಕಾರಣವನ್ನು ತಿಳಿಸು.

೫. ಶ್ರೀನಾರಾಯಣ :—ಎಲೈ ನಾರದನೇ, ಪುರಾಣಗಳಲ್ಲಿ ಗೋಪ್ಯವಾಗಿಯೂ, ವೇದದಲ್ಲಿ ದುರ್ಲಭವಾಗಿ ಇರುವ, ಗಣಪತಿಗೆ ಗಜಮುಖವನ್ನು ಜೋಡಿಸಿದ ಕಥೆಯನ್ನು ಹೇಳುವೆನು ಕೇಳು.

೬. ಈ ಕಥೆಯನ್ನು ಕೇಳುವುದರಿಂದ, ಸಕಲ ದುಃಖವೂ ಪರಿಹಾರವಾಗಿ ಸಕಲ ಸಂಪತ್ತೂ ಒದಗುವುದು ವಿಘ್ನನಾಶಕವೂ, ಪಾಪಮೋಚಕವೂ ಆದ ಗಜಮುಖನ ಕಥೆಯು ಅತಿ ರಹಸ್ಯವಾದುದು.

೭. ಮಂಗಳಗಳಿಗೂ ಮಂಗಳಕರವಾದ ಮಹಾಲಕ್ಷ್ಮಿಯ ಚರಿತ್ರೆಯೂ ಧರ್ಮಾರ್ಥಕಾಮಗಳನ್ನೂ, ಮೋಕ್ಷಸುಖವನ್ನೂ ಕೊಡುವುದು.

೮. ಎಲೈ ನಾರದನೇ, ನಾನು ಪೂರ್ವದಲ್ಲಿ ನಮ್ಮ ತಂದೆಯ ಬಾಯಿಂದ ಕೇಳಿದ, ಪುರಾತನ ಇತಿಹಾಸವನ್ನು ಹೇಳುವೆನು ಕೇಳು. ಇದು ಪಾದ್ಮಕಲ್ಪದಲ್ಲಿ ನಡೆದುದರಿಂದ ಬಹಳ ಗೋಪ್ಯವಾಗಿದೆ

ಏಕದೈವ ಮಹೇಂದ್ರಶ್ಚ ಪುಷ್ಪಭದ್ರಾಂ ನದೀಂ ಯಯೌ ।
ಮಹಾಸಂಪನ್ಮದೋನ್ಮತ್ತಃ ಕಾಮೀ ರಾಜಶ್ರಿಯಾನ್ವಿತಃ ॥ ೯ ॥

ತತ್ತೀರೇತಿರಹಃಸ್ಥಾನೇ ಪುಷ್ಪೋದ್ಯಾನೇ ಮನೋಹರೇ ।
ಅತೀವ ದುರ್ಗಮೇಽರಣ್ಯೇ ಸರ್ವಜಂತುವಿವರ್ಜಿತೇ ॥ ೧೦ ॥

ಭ್ರಮರಧ್ವನಿಸಂಯುಕ್ತೇ ಪುಂಸ್ಕೋಕಿಲರುತಶ್ರವೇ ।
ಸುಗಂಧಿಪುಷ್ಪಸಂಶ್ಲಿಷ್ಟವಾಯುನಾ ಸುರಭೀಕೃತೇ ೧೧ ॥

ದದರ್ಶ ರಂಭಾಂ ತತ್ರೈವ ಚಂದ್ರಲೋಕಾತ್ಸಮಾಗತಾಂ ।
ಸುರತಶ್ರಮವಿಶ್ರಾಂತಿಕಾಮುಕೀಂ ಕಾಮುಕಾಮುಕೀಂ । ೧೨ ॥

ಇಚ್ಛಂತೀಮೀಪ್ಸಿತಾಂ ಕ್ರೀಡಾಂ ಗಚ್ಛಂತೀಂ ಮದನಾಶ್ರಮಂ ।
ಏಕಾಕಿನೀಮುನ್ಮನಸ್ಕಾಂ ಮನ್ಮಥೋದ್ಗತಮಾನಸಾಂ ॥ ೧೩ ॥

೯. ಅತಿಕಾಮುಕನೂ, ಧನಮದದಿಂದ ಕೂಡಿದವನೂ, ರಾಜಸಂಪತ್ತುಳ್ಳವನೂ ಆದ ಮಹೇಂದ್ರನು ಒಮ್ಮೆ ಪುಷ್ಪಭದ್ರಾನದಿಯ ತೀರಕ್ಕೆ ಹೋದನು.

೧೦. ಆ ನದಿಯ ತೀರಪ್ರದೇಶವು ಪುಷ್ಪೋದ್ಯಾನಗಳಿಂದ ಮನೋಹರವಾಗಿಯೂ, ದುರ್ಗಮವಾದ ಅರಣ್ಯಪರಿವೃತವಾದುದರಿಂದ ನಿರ್ಜನವಾಗಿಯೂ ರತಿಕ್ರೀಡೆಗೆ ಅನುಗುಣವಾಗಿದ್ದಿತು

೧೧-೧೨ ದುಂಬಿಗಳ ಇಂಚರದಿಂದಲೂ, ಕೋಗಿಲೆಗಳ ಪಂಚಮಸ್ವರದಿಂದಲೂ, ಮನೋಹರವಾಗಿ, ಕುಸುಮಗಳ ಸೌರಭವನ್ನು ಬೀರುತ್ತಿರುವ ವಾಯುವಿನಿಂದ ವ್ಯಾಪ್ತವಾಗಿದ್ದ ಆ ಪ್ರದೇಶಕ್ಕೆ ಚಂದ್ರಲೋಕದಿಂದ ಬಂದು ಸುರತಾಯಾಸವಿಶ್ರಾಂತಿಯನ್ನು ಬಯಸುತ್ತಿರುವ, ರತಿದೇವಿಯಂತೆ ಮನೋಹರಳಾದ ರಂಭೆಯನ್ನು ನೋಡಿದನು.

೧೩. ಆ ರಂಭೆಯು ಮನ್ಮಥಾಕ್ರಾಂತಮನಸ್ಸಿನಿಂದ ಆತುರಳಾಗಿ, ಮತ್ತೊಮ್ಮೆ ರತಿಕ್ರೀಡೆಯನ್ನು ಬಯಸಿ ಏಕಾಕಿನಿಯಾಗಿ ಮದನಾಶ್ರಮಕ್ಕೆ ಹೋಗುತ್ತಿರುವಂತೆ ತೋರುತ್ತಿದ್ದಳು.

ಸುಶ್ರೋಣೀಂ ಸುದತೀಂ ಶ್ಯಾಮಾಂ ಬಿಂಬಾಧರಸರೋರುಹಾಂ ।
ಬೃಹನ್ನಿತಂಬಭಾರಾರ್ತಾಂ ಮತ್ತವಾರಣಗಾಮಿನೀಂ　　॥ ೧೪ ॥

ಸಸ್ಮಿತಾಸ್ಯ ಶರಚ್ಚಂದ್ರಾಂ ಸುಕಟಾಕ್ಷಂ ಚ ಬಿಭ್ರತೀಂ ।
ಬಿಭ್ರತೀಂ ಕಬರೀಂ ರಮ್ಯಾಂ ಮಾಲತೀಮಾಲ್ಯಶೋಭಿತಾಂ　　॥ ೧೫ ॥

ವಹ್ನಿಶುದ್ಧಾಂಶುಕಧರಾಂ ರತ್ನಭೂಷಣಭೂಷಿತಾಂ ।
ಕಸ್ತೂರೀ ಬಿಂದುನಾ ಸಾರ್ಧಂ ಸಿಂದೂರಂ ಬಿಭ್ರತೀಂ ಮುದಾ　　॥ ೧೬ ॥

ನೀಲೋತ್ಪಲದಲಶ್ಯಾಮಕಜ್ಜಲೋಜ್ವಲಲೋಚನಾಂ ।
ಮಣಿಕುಂಡಲಯುಗ್ಮಾಢ್ಯ ಗಂಡಸ್ಥಲವಿರಾಜಿತಾಂ　　॥ ೧೭ ॥

ಅತ್ಯುನ್ನತಂ ಸುಕಠಿನಂ ಪತ್ರರಾಜಿವಿರಾಜಿತಂ ।
ಸುಖದಂ ರಸಿಕಾನಾಂ ಚ ಸ್ತನಯುಗ್ಮಂ ಚ ಬಿಭ್ರತೀಂ　　॥ ೧೮ ॥

---

೧೪. ಮೊಲ್ಲೆಮೊಗ್ಗಿನಂತಿರುವ ದಂತಪಂಕ್ತಿಗಳಿಂದಲೂ, ಕೆಂದಾವರೆಯು ಪಳದಂತಿರುವ ಕೆಳದುಟಿಯಿಂದಲೂ ಮನೋಹರಳಾದ ಆ ಯುವತಿಯು ನಿತಂಬ ಭಾರದಿಂದ ಗಜದಂತೆ ಮಂದಗಮನೆಯಾಗಿದ್ದಳು.

೧೫-೧೬. ಶರಚ್ಚಂದ್ರನಂತಿರುವ ನಗುಮುಖದಲ್ಲಿ ಕಟಾಕ್ಷವೆಂಬ ಕಿರಣಗಳನ್ನು ಬೀರುತ್ತ, ಜಾಜೀಮಾಲೆಯಿಂದ ಶೋಭಿತವಾದ ಕೇಶಪಾಶಗಳಿಂದ ಮನೋಹರ ಳಾಗಿದ್ದ ಆ ರಂಭೆಯು ಅಗ್ನಿಯಂತೆ ಪರಿಶುದ್ಧವಾದ ಬಟ್ಟೆಯನ್ನುಟ್ಟು, ರತ್ನಾಭರಣ ಗಳನ್ನು ತೊಟ್ಟು, ಹಣೆಯಲ್ಲಿ ಕುಂಕಮ ಕಸ್ತೂರಿಯ ಬೊಟ್ಟುಗಳನ್ನಿಟ್ಟಿದ್ದಳು.

೧೭. ಕಣ್ಣುಗಳಿಗೆ ಕನ್ನೈದಿಲೆಯಂತೆ ಕಪ್ಪಾದ ಕಾಡಿಗೆಯನ್ನು ಹಚ್ಚಿ ಕೊಂಡು ಕಿವಿಗಳಿಗೆ ಕರ್ಣಕುಂಡಲಗಳನ್ನು ಧರಿಸಿದ್ದಳು. ಅವು ಕಪೋಲಗಳಲ್ಲಿ ಪ್ರತಿ ಬಿಂಬಿಸಿದ್ದವು.

೧೮. ಆಕೆಯ ಸ್ತನಗಳು ವರ್ತುಳಾಕಾರವಾಗಿಯೂ ಅತಿಕಠಿನವಾಗಿಯೂ ಇದ್ದುವಲ್ಲದೆ ಮಕರಿಕಾದಿ ಪತ್ರರಚನೆಗಳಿಂದ ಶೋಭಿತವಾಗಿ ರಸಿಕರಿಗೆ ಸುಖಕರ ವಾಗಿದ್ದವು.

ಸರ್ವಶೋಭಾಂ ಸುವೇಶಾಢ್ಯಾಂ ಸುಭಗಾಂ ಸುರತೋತ್ಸುಕಾಂ ।
ಪ್ರಾಣಾಧಿಕಾಂ ಚ ದೇವಾನಾಂ ಸ್ವಚ್ಛಾಂ ಸ್ವಚ್ಛಂದಗಾಮಿನೀಂ ॥ ೧೯ ॥

ವರಾಮಪ್ಸರಸಾಂ ರಮ್ಯಾಮತೀವ ಸ್ಥಿರಯೌವನಾಂ
ಗುಣರೂಪವತೀಂ ಶಾಂತಾಂ ಮುನಿಮಾನಸಮೋಹಿನೀಂ ॥ ೨೦ ॥

ದೃಷ್ಟ್ವಾ ತಾಮತಿವೇಷಾಢ್ಯಾಂ ತತ್ಕಟಾಕ್ಷೇಣ ಪೀಡಿತಃ ।
ಇಂದ್ರೋऽತೀಂದ್ರಿಯಚಾಪಲ್ಯಾತ್ತ್ವಕ್ತುಮುಪಚಕ್ರಮೇ ॥ ೨೧ ॥

॥ ಇಂದ್ರ ಉವಾಚ ॥

ಕ್ವ ಗಚ್ಛಸಿ ವರಾರೋಹೇ ಕ್ವ ಗತಾಸಿ ಮನೋಹರೇ ।
ಮಯಾ ದೃಷ್ಟಾ ಹಿ ಸುಚಿರಾತ್ಕಲ್ಯಾಣಿ ಸುಭಗೇಧುನಾ ॥ ೨೨ ॥

ತವಾನ್ವೇಷಣಕರ್ತಾऽಹಂ ಶ್ರುತ್ವಾ ವಾಚಿಕಮಗ್ರತಃ ।
ತ್ವಯಾಸಕ್ತಮನಶ್ಚಾಸ್ಮಿ ನಾನ್ಯಾಂ ವೈ ಗಣಯಾಮಿ ಚ ॥ ೨೩ ॥

೧೯. ಸಕಲ ವೇಷಭೂಷಗಳಿಂದ ಶೋಭಿತಳಾಗಿ, ಸುರತಸುಖಾಸಕ್ತಳಾಗಿದ್ದ ಆ ರಂಭೆಯು ದೇವತೆಗಳಿಗೆಲ್ಲ ಪ್ರಾಣಪ್ರಿಯಳಾಗಿದ್ದಳು. ಸ್ವಚ್ಛಂದಗಾಮಿನಿಯಾದ ಆಕೆಯನ್ನು ಇಂದ್ರನು ನೋಡಿದನು.

೨೦–೨೧. ಸ್ಥಿರಯೌವನವತಿಯೂ, ಗುಣರೂಪಸಮನ್ವಿತಳೂ, ಶಾಂತಳೂ, ಮುನಿಗಳ ಮನಸ್ಸನ್ನೂ ಮೋಹಗೊಳಿಸುವವಳೂ ಆದ ಆ ಅಪ್ಸರೆಯನ್ನು ನೋಡಿ, ಆಕೆಯ ಕಟಾಕ್ಷಕ್ಕೆ ಪಾತ್ರನಾದ ಇಂದ್ರನು ಇಂದ್ರಿಯಚಾಪಲ್ಯದಿಂದ ಆಕೆಯನ್ನು ಕುರಿತಿಂತೆಂದನು.

೨೨. ಇಂದ್ರ :—ಎಲೌ ಸುಂದರಾಂಗಿಯೇ, ಮನಮೋಹಕಳೇ ನೀನೆಲ್ಲಿಗೆ ಹೊರಟಿರುವೆ. ಎಲೌ ಕಲ್ಯಾಣಿಯೇ, ನಿನ್ನನ್ನು ನೋಡಬೇಕೆಂದು ಬಹಳ ದಿವಸಗಳಿಂದ ಬಯಸುತ್ತಿದ್ದ ನನಗೆ ಇಂದು ದರ್ಶನ ಲಭಿಸಿತು.

೨೩. ನೀನಿಲ್ಲಿಗೆ ಬರುವ ಸಂದೇಶವಾಕ್ಯವನ್ನು ಮೊದಲೇ ತಿಳಿದು, ನಿನ್ನಲ್ಲಿ ಆಸಕ್ತವಾದ ಮನಸ್ಸಿನಿಂದ ನಿನ್ನನ್ನು ಹುಡುಕಿಕೊಂಡು ನಾನಿಲ್ಲಿಗೆ ಬಂದಿದ್ದೇನೆ. ಬೇರಾವ ಸ್ತ್ರೀಯನ್ನೂ ನಾನು ಗಣಿಸುವುದಿಲ್ಲ.

ಸುವಾಸಿತಜಲಾರ್ಥೀ ಯಃ ಕಿಮಿಚ್ಛೇತ್ಪಂಕಿಲಂ ಜಲಂ ।
ಪಂಕಂ ನೇಚ್ಛೇಚ್ಚಂದನಾರ್ಥೀ ಪಂಕಜಾರ್ಥೀ ನ ಚೋತ್ಪಲಂ ॥ ೨೪ ॥

ಸುಧಾರ್ಥೀ ನ ಸುರಾಮಿಚ್ಛೇದ್ದುಗ್ಧಾರ್ಥೀ ನಾವಿಲಂ ಜಲಂ ।
ಸುಗಂಧಿಪುಷ್ಪಶಾಯೀ ಯೋ ಹ್ಯಸ್ತ್ರತಲ್ಪಂ ನ ಚೇಚ್ಛತಿ ॥ ೨೫ ॥

ಸ್ವರ್ಗೀ ಚ ನರಕಂ ನೇಚ್ಛೇತ್ಸುಭೋಗೀ ದುಷ್ಟಭೋಜನಂ ।
ಪಂಡಿತೈಃ ಸಹ ಸಂವಾಸೀ ನೇಚ್ಛೇತ್ ಸ್ತ್ರೀಸನ್ನಿಧಿಂ ನರಃ ।
ವಿಹಾಯ ರತ್ನಾಭರಣಂ ಕೋ ಸೀಚ್ಛೇಲ್ಲೋಹಭೂಷಣಂ ॥ ೨೬ ॥

ತ್ವಾಂ ನಾಶ್ಲಿಷ್ಯ ಮಹಾವಿಜ್ಞಾಂ ಕೋ ಮೂಢೋ ಗಂತುಮಿಚ್ಛತಿ ।
ವಿಹಾಯ ಗಂಗಾಂ ಕೋ ವಿಜ್ಞೋ ನದೀಮನ್ಯಾಂ ಚ ವಾಂಛತಿ ॥ ೨೭ ॥

---

೨೪ ಏಲಕ್ಕಿ ಪಚ್ಚಕರ್ಪೂರಾದಿಗಳಿಂದ ಸುವಾಸಿತವಾದ ನೀರನ್ನು ಬಯಸುವವನು ಕೊಳಕಾದ ನೀರನ್ನು ಎಂದೆಂದಿಗೂ ಬಯಸುವುದಿಲ್ಲ. ಅಂತೆಯೇ ಚಂದನ ಗಂಧವಲ್ಲಿ ಆಸೆಯುಳ್ಳವನು ಕೆಸರನ್ನೂ, ತಾವರೆಯಲ್ಲಿ ಮನಸ್ಸುಳ್ಳವನು ಕನ್ನೈದಿಲೆಯನ್ನೂ ಅಲ್ಲಗಳೆಯುವನು.

೨೫ ಅಮೃತದಲ್ಲಿ ಆಸೆಯುಳ್ಳವನು ಮದ್ಯವನ್ನೂ, ಹಾಲನ್ನು ಬಯಸುವವನು ಕೊಳಕುನೀರನ್ನೂ, ಸುಗಂಧಪುಷ್ಪದ ಶಯನದಲ್ಲಿ ಪವಡಿಸುವವನು ಶರಶಯ್ಯೆಯನ್ನೂ ಎಂದೆಂದಿಗೂ ಬಯಸನು.

೨೬. ಸ್ವರ್ಗವಾಸಿಯು ನರಕವನ್ನೂ, ಭೋಗಾಸಕ್ತನು ಕೆಟ್ಟಭೋಜನವನ್ನೂ, ಪಂಡಿತರ ಸಹವಾಸವುಳ್ಳವನು ಹೆಂಗಸಿನ ಸಹವಾಸವನ್ನೂ ಯಾವಾಗಲೂ ಇಚ್ಛಿಸನು. ರತ್ನಾಭರಣಗಳನ್ನು ಬಿಟ್ಟು ಯಾರುತಾನೇ ಲೋಹದ ಒಡವೆಗಳಿಗೆ ಆನೆಪಡುವರು ?

೨೭ ರತಿಪಂಡಿತೆಯಾದ ನಿನ್ನನ್ನು ಅಪ್ಪಿಕೊಳ್ಳದೆ ಯಾವ ಮೂರ್ಖನು ತಾನೆ ವ್ಯರ್ಥವಾಗಿ ಹೋಗ ಬಯಸುವನು. ತಿಳಿವಳಿಕೆಯುಳ್ಳವನು ಗಂಗೆಯನ್ನು ಬಿಟ್ಟು ಬೇರೆ ನದಿಗೆ ಸ್ನಾನಮಾಡಲು ಹೋಗುವನೇ ?

ಇಂದ್ರಿಯೈಶ್ಚೇಂದ್ರಿಯೈರತಿಂ ವರ್ಧಯಂತೀಂ ಪದೇ ಪದೇ ।
ವರಂ ಪ್ರಾರ್ಥಯಿತಾರಶ್ಚ ಪ್ರಾಣಿನಶ್ಚ ಸುಖಾರ್ಥಿನಃ ॥ ೨೮ ॥

ಇತ್ಯೇವಮುಕ್ತ್ವಾ ಭಗವಾನವರುಹ್ಯ ಗಜೇಶ್ವರಾತ್ ।
ಕಾಮುಯುಕ್ತಶ್ಚ ಪುರತಸ್ತಸ್ಥೌ ತಸ್ಯಾಶ್ಚ ನಾರದ ॥ ೨೯ ॥

ಶ್ರುತ್ವಾ ತದ್ವಚನಂ ರಂಭಾ ಮಹಾಶೃಂಗಾರಲೋಲುಪಾ ।
ಜಹಾಸಾನಮ್ರವದನಾ ಪುಲಕಾಂಚಿತವಿಗ್ರಹಾ ॥ ೩೦ ॥

ಸ್ಮೇರಾನನಕಟಾಕ್ಷೇಣ ಸ್ತನೋರ್ವೋ ದರ್ಶನೇನ ಚ ।
ನರ್ಮೋಕ್ತಿಗರ್ಭವಾಕ್ಯೇನ ಚಾಹಸತ್ತಸ್ಯ ಚೇತನಾಂ ॥ ೩೧ ॥

ಮಿತಂ ಸಾರಂ ಸುಮಧುರಂ ಸುಸ್ನಿಗ್ಧಂ ಕೋಮಲಂ ಪ್ರಿಯಂ ।
ಪುರುಷಾಯತ್ತಬೀಜಂ ಚ ಪ್ರವಕ್ತುಮುಪಚಕ್ರಮೇ ॥ ೩೨ ॥

---

೨೮. ಸುಂದರಾವಯವಗಳಿಂದ ವಿಷಯಸುಖಾಭಿಲಾಷೆಯನ್ನು ಕ್ಷಣಕ್ಷಣಕ್ಕೂ ಹೆಚ್ಚಿಸುತ್ತಿರುವ ನಿನ್ನಲ್ಲಿ ಸುಖವನ್ನು ಬಯಸಿ ನಿನ್ನನ್ನು ಪ್ರಾರ್ಥಿಸುವವರೇ ಪುಣ್ಯವಂತರು.

೨೯. ಎಲೈ ನಾರದನೇ, ದೇವೇಂದ್ರನು ಇಂತು ನುಡಿದು, ಐರಾವತ ದಿಂದಿಳಿದು, ಕಾಮುಕನಾಗಿ ಆ ರಂಭೆಯ ಮುಂದೆ ನಿಂತುಕೊಂಡನು.

೩೦ ಶೃಂಗಾರಸುಖದಲ್ಲಿ ಅತ್ಯಾಸಕ್ತಳಾದ ಆ ರಂಭೆಯು ಇಂದ್ರನ ಮಾತು ಗಳನ್ನು ಕೇಳಿ, ರೋಮಾಂಚಿತ ಶರೀರಳಾಗಿ, ಲಜ್ಜಾನಮ್ರಮುಖಳಾಗಿ ನಸುನಗುತ್ತ ನಿಂತಳು.

೩೧. ಮಂದಸ್ಮಿತಮುಖದಿಂದಲೂ, ಕಟಾಕ್ಷವೀಕ್ಷಣದಿಂದಲೂ, ಸ್ತನ ಮತ್ತು ತೊಡೆಗಳನ್ನು ತೋರಿಸುವಿಕೆಯಿಂದಲೂ, ಅರ್ಥಗರ್ಭಿತವಾದ ಮಾತುಗಳಿಂದಲೂ ಇಂದ್ರನ ಮನಸ್ಸನ್ನು ಬರಸೆಳೆದಳು.

೩೨. ಮತ್ತು ಇಂದ್ರನನ್ನು ಕುರಿತು, ಹಿತಮಿತವೂ, ಅತ್ಯಂತ ಮಧುರವೂ, ಪುರುಷಾರ್ಥಸಾರವೂ ಆದ ಕೆಲವು ಸವಿನುಡಿಗಳನ್ನಾಡಿದಳು.

|| ರಂಭೋವಾಚ ||

ಯಾಸ್ಯಾಮಿ ವಾಂಛಿತಂ ಯತ್ರ ಪ್ರಶ್ನೇನ ತವ ಕಿಂ ಫಲಂ |
ನಾಹಂ ಸಂತೋಷಜನನೀ ಧೂರ್ತಾನಾಂ ದುಷ್ಟಮಿತ್ರತಾ || ೩೩ ||

ಯಥಾ ಮಧುಕರೋ ಲೋಭಾತ್ಸರ್ವಪುಷ್ಪಾಸವಂ ಲಭೇತ್ |
ಸ್ವಾದು ಯತ್ರಾತಿರಿಕ್ತಂ ಸ ತತ್ರ ತಿಷ್ಠತಿ ಸಂತತಂ || ೩೪ ||

ತಥೈವ ಕಾಮುಕೀ ಲೋಕೇ ಭ್ರಮೇದ್ಭ್ರಮರವತ್ಸದಾ |
ಚಾಂಚಲ್ಯಾತ್ಸಹಿ ಕಾಸ್ವೇವ ವಾಯುವದ್ರಸಮಾಹರೇತ್ || ೩೫ ||

ಸುಪುಮಾನಂಗವತ್ಸ್ತ್ರೀಣಾಂ ಯಥಾ ಶಾಖಾಶ್ಚ ಶಾಖಿಷು |
ಕಾಮುಕೀ ಕಾಕವಲ್ಲೋಲಃ ಫಲಂ ಭುಕ್ತ್ವಾ ಪ್ರಯಾತಿ ಚ || ೩೬ ||

೩೩. ರಂಭೆ: —ಎಲೈ ದೇವೇಂದ್ರನೇ, ನನಗೆ ಇಚ್ಛೆಬಂದೆಡೆಗೆ ಹೋಗುವೆನು. ನೀನು ಕೇವಲ ಪ್ರಶ್ನೆಮಾಡಿ ಯಾವ ಫಲವನ್ನೂ ಹೊಂದಲಾರೆ. ದುಷ್ಟರ ಸಹವಾಸಿಗಳಾದ ಧೂರ್ತರಿಗೆ ನಾನು ಸಂತೋಷದಾಯಕಳಲ್ಲ.

೩೪. ದುರಾಸೆಯುಳ್ಳ ದುಂಬಿಯು ಸಕಲ ಪುಷ್ಪಗಳಲ್ಲಿ ಮಕರಂದವನ್ನು ಪಾನಮಾಡುತ್ತದೆ. ಎಲ್ಲಿ ಮಕರಂದ ಹೆಚ್ಚು ರುಚಿಯಾಗಿರುವುದೋ ಅಲ್ಲಿ ಅದು ಸರ್ವದಾ ನೆಲಸಿರುತ್ತದೆ

೩೫. ಹಾಗೆಯೇ ಲೋಕದಲ್ಲಿ ಕಾಮುಕನು ದುಂಬಿಯಂತೆ ಅಲೆದಾಡುತ್ತಾನೆ ವಾಯುವಿನಂತೆ ಚಂಚಲನಾದ ಅವನು ಕೆಲವು ಸ್ತ್ರೀಯರಲ್ಲಿ ಮಾತ್ರ ರಸಸ್ವಾದ ಮಾಡುವನು.

೩೬. ಮರಗಳಿಗೆ ಕೊಂಬೆಗಳು ಅಂಗವಾಗಿರುವಂತೆ ಯೋಗ್ಯಪುರುಷನು ಹೆಂಗಸರಿಗೆ ಅಂಗವಾಗಿರುವವನು, ಕಾಮುಕನಾದ ಯುವಕನು ಲೋಭಿಯಾದ ಕಾಗೆಯಂತೆ ಫಲವನನ್ನುಭವಿಸಿ ಹೊರಟುಹೋಗುವನು.

ಸ್ವಕಾರ್ಯಮುದ್ಧರೇದ್ಯಾವತ್ತಾವದ್ವಾಸಪ್ರಯೋಜನಂ ।
ಸ್ಥಿತಿಃ ಕಾರ್ಯಾನುರೋಧೇನ ಯಥಾ ಕಾಷ್ಠೇ ಹುತಾಶನಃ ॥ ೩೭ ॥

ಯಾವತ್ತಡಾಗೇ ತೋಯಾನಿ ತಾವದ್ವ್ಯಾದಾಂಸಿ ತೇಷು ಚ ।
ಶೋಷಾರಂಭೇ ಚ ತೋಯಾನಿ ಯಾಂತಿ ಸ್ಥಾನಾಂತರಂ ಪುನಃ ॥ ೩೮ ॥

ತ್ವಂ ದೇವಾನಾಮೀಶ್ವರೋಽಸಿ ಕಾಮಿನೀನಾಂ ಚ ವಾಂಛಿತಃ ।
ಪುಮಾಂಸಂ ರಸಿಕಂ ಶಶ್ವದ್ವಾಂಛಂತಿ ರಸಿಕಾಃ ಸುಖಾತ್ ॥ ೩೯ ॥

ಯುವಾನಂ ರಸಿಕಂ ಶಾಂತಂ ಸುವೇಷಂ ಸುಂದರಂ ಪ್ರಿಯಂ ।
ಗುಣಿನಂ ಧನಿನಂ ಸ್ವಚ್ಛಂ ಕಾಂತಮಿಚ್ಛತಿ ಕಾಮಿನೀ ॥ ೪೦ ॥

ದುಶ್ಶೀಲಂ ರೋಗಿಣಂ ವೃದ್ಧಂ ರತಿಶಕ್ತಿವಿಯೋಜಿತಂ ।
ಅದಾತಾರಮವಿಜ್ಞಂ ಚ ನೈವ ವಾಂಛಂತಿ ಯೋಷಿತಃ ॥ ೪೧ ॥

---

೩೭. ಅಗ್ನಿಯು ತನ್ನ ಕಾರ್ಯಸಾಧನೆಯವರೆಗೆ ಕಾಷ್ಠದಲ್ಲಿರುವಂತೆ ಕಾಮುಕನು ತನ್ನ ಕಾಮಸಾಧನೆಯವರೆಗೆ ಸ್ತ್ರೀಯನ್ನಾಶ್ರಯಿಸಿರುವನು.

೩೮. ಕೆರೆಯಲ್ಲಿ ನೀರಿರುವವರೆಗೆ, ಅದರಲ್ಲಿ ಜಲಜಂತುಗಳು ವಾಸವಾಗಿರುತ್ತವೆ. ನೀರು ಒಣಗಲಾರಂಭಿಸಿದರೆ ಆ ಜಂತುಗಳೆಲ್ಲ ಬೇರೆ ಜಲಾಶಯಕ್ಕೆ ಹೋಗುವುವು.

೩೯. ದೇವತೆಗಳೊಡೆಯನಾದ ನಿನ್ನನ್ನು ಕಾಮಿಸಿಯರೆಲ್ಲ ಬಯಸುವರು. ಕಾಮುಕಿಯರಾದ ಸ್ತ್ರೀಯರು ರಸಿಕ ಪುರುಷನನ್ನು ಸುಖಕ್ಕಾಗಿ ಬಯಸುವರು.

೪೦. ಯುವಕನೂ, ರಸಿಕನೂ, ಶಾಂತನೂ, ಸುಂದರನೂ, ಸುವೇಷಭೂಷಿತನೂ, ಗುಣವಂತನೂ, ಹಣವಂತನೂ, ಆದ ಕಾಂತನನ್ನು ಕಾಮಿನಿಯರು ಇಚ್ಛಿಸುವರು.

೪೧. ದುರಾಚಾರಪರನೂ, ರೋಗಿಯೂ, ರತಿಸುಖದಲ್ಲಿ ಅಶಕ್ತನೂ, ಲೋಭಿಯೂ, ಮೂಢನೂ ಆದ ಪುರುಷನನ್ನು ಸ್ತ್ರೀಯರು ಬಯಸುವುದಿಲ್ಲ.

ಕಾ ಮೂಢಾ ನ ಚ ವಾಂಛಂತಿ ತ್ವಾಮೇವಂ ಗುಣಸಾಗರಂ ।
ತವಾಜ್ಞಾಕಾರಿಣೀಂ ದಾಸೀಂ ಗೃಹಾಣಾತ್ರ ಯಥಾಸುಖಂ ॥ ೪೨ ॥

ಇತ್ಯುಕ್ತ್ವಾ ಸಸ್ಮಿತಾ ಸಾ ಚ ತಂ ಪಪೌ ವಕ್ರಚಕ್ಷುಷಾ ।
ಕಾಮಾಗ್ನಿದಗ್ಧಾ ವಿಗಲಲ್ಲಜ್ಜಾ ತಸ್ಥೌ ಸಮೀಪತಃ ॥ ೪೩ ॥

ಜ್ಞಾತ್ವಾ ಭಾವಂ ಸ್ಮರಾರ್ತಾಯಾಃ ಸ್ಮರಶಾಸ್ತ್ರವಿಶಾರದಃ ।
ಗೃಹೀತ್ವಾ ತಾಂ ಪುಷ್ಪತಲ್ಪೇ ವಿಜಹಾರ ತಯಾ ಸಹ ॥ ೪೪ ॥

ಚುಚುಂಬ ರಹಸಿ ಪ್ರೌಢಾಂ ನಗ್ನಾಂ ಚ ಸುಭಗಾಂ ವರಾಂ ।
ಪಕ್ವಬಿಂಬಾಧರೌಷ್ಠೀಂ ಚ ಸುದತ್ಯಾ ಚುಂಬಿತಸ್ತಯಾ ॥ ೪೫ ॥

ನಾನಾಪ್ರಕಾರ ಶೃಂಗಾರಾದ್ವಿಪರೀತಾದಿಕಾನ್ಮುನೇ ।
ಸುಖೀ ಬಭೂವ ತಸ್ಯಾಂ ವೈ ಶೃಂಗಾರೋ ಮೂರ್ತಿಮಾನಿವ ॥ ೪೬ ॥

೪೨. ಗುಣಾಕರನಾದ ನಿನ್ನನ್ನು ಯಾವ ಮೂಢಳು ತಾನೆ ಕಾಮಿಸುವುದಿಲ್ಲ? ನಿನ್ನ ಅಪ್ಪಣೆಯಂತೆ ನಡೆಯಲು ಸಿದ್ಧಳಾಗಿರುವ ಈ ಸೇವಕಿಯನ್ನು (ನನ್ನನ್ನು) ಸ್ವೇಚ್ಛೆಯಾಗಿ ಸ್ವೀಕರಿಸು.

೪೩. ಹೀಗೆ ಹೇಳಿ ಆ ರಂಭೆಯು ನಸುನಗುತ್ತ ಚಂಚಲ ಕಟಾಕ್ಷದಿಂದ ಅವನ ಸೌಂದರ್ಯವನ್ನು ಹೀರುತ್ತ, ಕಾಮಾಗ್ನಿ ತಪ್ತಳಾಗಿ, ಲಜ್ಜಾ ಪರಿತ್ಯಾಗಮಾಡಿ ಅವನ ಸಮೀಪದಲ್ಲಿ ತಲೆಬಾಗಿ ನಿಂತಳು.

೪೪. ಕಾಮಪೀಡಿತಳಾದ ಆ ರಂಭೆಯ ಮನೋಭಾವವನ್ನು ತಿಳಿದು ಕಾಮಶಾಸ್ತ್ರವಿಶಾರದನಾದ ಇಂದ್ರನು ಅವಳೊಡನೆ ಪುಷ್ಪಶಯನದಲ್ಲಿ ಕ್ರೀಡಿಸಿದನು.

೪೫. ಪ್ರೌಢಳೂ, ಮನೋಹರಳೂ, ನಗ್ನ (ಬೆತ್ತಲೆ)ಳೂ ಆದ ಆ ಸುಂದರಿಯ ಬಿಂಬಾಧರವನ್ನು ಚುಂಬಿಸಿ ಅವಳಿಂದ ಪ್ರತಿಚುಂಬನವನ್ನು ಅನುಭವಿಸಿದನು.

೪೬. ಎಲೈ ನಾರದಮುನಿಯೇ, ವಿಪರೀತರತವೇ ಮುಂತಾದ ವಿವಿಧ ಶೃಂಗಾರಗಳನ್ನು ಆಕೆಯಿಂದನುಭವಿಸಿ ಇಂದ್ರನು ಮೂರ್ತಿವೆತ್ತ ಶೃಂಗಾರದಂತಿದ್ದನು

ತೌ ಕಾಮಾಹಿತಚಿತ್ತೌ ನೋ ಬುಬುಧಾತೇ ದಿವಾನಿಶಂ ।
ಅನ್ಯೋನ್ಯಗತಚಿತ್ತೌ ಚ ಕಾಮಾರ್ತೌ ಜ್ಞಾನವರ್ಜಿತೌ ॥ ೪೭ ॥

ಸ ಚ ಕೃತ್ವಾ ಸ್ಥಲೇ ಕ್ರೀಡಾಂ ತಯಾ ಸಹ ಸುರೇಶ್ವರಃ ।
ಯಯೌ ಜಲವಿಹಾರಾರ್ಥಂ ಪುಷ್ಪಭದ್ರಾನದೀಜಲಂ ॥ ೪೮ ॥

ಸ ಚಕಾರ ಜಲಕ್ರೀಡಾಂ ತಯಾ ಸಹ ಮುದಾ ಕ್ಷಣಂ ।
ಜಲಾತ್ಸ್ಥಲೇ ಸ್ಥಲಾತ್ತೋಯೇ ವಿಜಹಾರ ಪುನಃ ಪುನಃ ॥ ೪೯ ॥

ಏತಸ್ಮಿನ್ನಂತರೇ ತೇನ ವರ್ತ್ಮನಾ ಮುನಿಪುಂಗವಃ ।
ಸಶಿಷ್ಯೋ ಯಾತಿ ದುರ್ವಾಸಾ ವೈಕುಂಠಾಚ್ಛಂಕರಾಲಯಂ ॥ ೫೦ ॥

ತಂ ಚ ದೃಷ್ಟ್ವಾ ಮುನೀಂದ್ರಂ ಚ ದೇವೇಂದ್ರಃ ಸ್ತಬ್ಧಮಾನಸಃ ।
ನನಾಮಾಗತ್ಯ ಸಹಸಾ ದದೌ ತಸ್ಮೈ ಸ ಚಾಶಿಷಃ ॥ ೫೧ ॥

೪೭. ಕಾಮಾರ್ತರೂ, ಅನ್ಯೋನ್ಯಪ್ರೇಮಾಂಧರೂ ವಿವೇಚನಾಜ್ಞಾನ ರಹಿತರೂ ಆದ ಆ ಪ್ರೇಮಿಗಳಿಗೆ ಹಗಲು ರಾತ್ರಿಯೆಂಬುದೇ ಗೋಚರವಾಗಲಿಲ್ಲ

೪೮ ಈ ರೀತಿಯಾಗಿ ದೇವೇಂದ್ರನು ಆ ರಂಭೆಯೊಡನೆ ರತಿಕ್ರೀಡೆಯಾಡಿದ ಮೇಲೆ, ಜಲಕ್ರೀಡೆಗಾಗಿ ಪುಷ್ಪಭದ್ರಾನದಿಯ ತೀರಕ್ಕೆ ಹೋದನು.

೪೯ ಅಲ್ಲಿ ಸಂತೋಷದಿಂದ ಸ್ವಲ್ಪಕಾಲ ಅವಳೊಡನೆ ಕ್ರೀಡೆಯಾಡಿದನು. ಹೀಗೆ ನೆಲದಲ್ಲಿಯೂ, ನೀರಿನಲ್ಲಿಯೂ ಮತ್ತೆಮತ್ತೆ ಅವರು ಕ್ರೀಡಿಸಿದರು.

೫೦ ಈ ಸಮಯದಲ್ಲಿ ಮುನಿವರ್ಯನಾದ ದೂರ್ವಾಸನು ತನ್ನ ಶಿಷ್ಯರೊಡ ಗೂಡಿ ಆ ಮಾರ್ಗವಾಗಿ ವೈಕುಂಠದಿಂದ ಕೈಲಾಸಕ್ಕೆ ಹೋಗುತ್ತಿದ್ದನು

೫೧. ಆ ಮುನಿಶ್ರೇಷ್ಠನನ್ನು ನೋಡಿ ದೇವೇಂದ್ರನು ಸ್ತಬ್ಧಮನಸ್ಕನಾಗಿ ಕೂಡಲೆ ಬಂದು ನಮಸ್ಕರಿಸಿ ಅವನಿಂದ ಆಶೀರ್ವಾದ ಪಡೆದನು.

ಪಾರಿಜಾತಪ್ರಸೂನಂ ಯದ್ದತ್ತಂ ನಾರಾಯಣೇನ ವೈ ।
ತಚ್ಚ ದತ್ತಂ ಮಹೇಂದ್ರಾಯ ಮುನೀಂದ್ರೇಣ ಮಹಾತ್ಮನಾ　　॥ ೫೨ ॥

ದತ್ವಾ ಪುಷ್ಪಂ ಮಹಾಭಾಗಸ್ತಮುವಾಚ ಕೃಪಾನಿಧಿಃ ।
ಮಾಹಾತ್ಮ್ಯಂ ತಸ್ಯ ಯತ್ಕಿಂಚಿದಪೂರ್ವಂ ಮುನಿಸತ್ತಮಃ　　॥ ೫೩ ॥

॥ ದುರ್ವಾಸಾ ಉವಾಚ ॥

ಸರ್ವವಿಘ್ನಹರಂ ಪುಷ್ಪಂ ನಾರಾಯಣನಿವೇದಿತಂ ।
ಮೂರ್ಧ್ನಿ ಇದಂ ಯಸ್ಯ ದೇವೇಂದ್ರ ಜಯಸ್ತಸ್ಯೈವ ಸರ್ವತಃ　　॥ ೫೪ ॥

ಪುರಃ ಪೂಜಾ ಚ ಸರ್ವೇಷಾಂ ದೇವಾನಾಮಗ್ರಣೀರ್ಭವೇತ್ ।
ತಚ್ಛಾಯೇವ ಮಹಾಲಕ್ಷ್ಮೀರ್ನ ಜಹಾತಿ ಕದಾಪಿ ತಂ　　॥ ೫೫ ॥

ಜ್ಞಾನೇನ ತೇಜಸಾ ಬುದ್ಧ್ಯಾ ವಿಕ್ರಮೇಣ ಬಲೇನ ಚ ।
ಸರ್ವದೇವಾಧಿಕಃ ಶ್ರೀಮಾನ್ಹರಿತುಲ್ಯ ಪರಾಕ್ರಮಃ　　॥ ೫೬ ॥

೫೨. ವೈಕುಂಠದಿಂದ ಬರುವಾಗ ಶ್ರೀಮನ್ನಾರಾಯಣನು ತನಗೆ ಕೊಟ್ಟಿದ್ದ ಪಾರಿಜಾತ ಪುಷ್ಪವನ್ನು ದೂರ್ವಾಸನು ಮಹೇಂದ್ರನಿಗೆ ಕೊಟ್ಟನು.

೫೩. ದಯಾಮಯನಾದ ದೂರ್ವಾಸನು ಮಹೇಂದ್ರನಿಗೆ ಆ ಪ್ರಸಾದವನ್ನು ಕೊಟ್ಟು ಅದರ ಅಪೂರ್ವವಾದ ಮಹಿಮೆಯನ್ನು ಈ ರೀತಿಯಾಗಿ ವರ್ಣಿಸಿದನು.

೫೪. ದೂರ್ವಾಸ;— ನಾರಾಯಣನಿಗರ್ಪಿಸಿದ ಈ ಪುಷ್ಪವು ಸಕಲ ವಿಘ್ನ ಪರಿಹಾರಕವಾದುದು. ಎಲೈ ಇಂದ್ರನೇ, ಈ ಪ್ರಸಾದವು ಯಾರ ತಲೆಯಲ್ಲಿರುವುದೋ ಅವನಿಗೆ ಎಲ್ಲೆಲ್ಲೂ ಜಯ ದೊರೆಯುವುದು.

೫೫. ಆತನಿಗೆ ಎಲ್ಲರಿಗಿಂತಲೂ ಮೊದಲು ಪೂಜೆಯಾಗುವುದಲ್ಲದೆ, ಅವನು ದೇವತೆಗಳಲ್ಲಿ ಅಗ್ರಗಣ್ಯನಾಗುವನು. ಮಹಾಲಕ್ಷ್ಮಿಯು ನೆರಳಿನಂತೆ ಅವನನ್ನು ಸರ್ವದಾ ಅನುಸರಿಸಿಕೊಂಡಿರುವಳು.

೫೬. ನಾರಾಯಣನ ಪ್ರಸಾದವನ್ನು ಸ್ವೀಕರಿಸಿದವನು, ಬುದ್ಧಿ ಜ್ಞಾನ ದಿಂದಲೂ, ತೇಜಸ್ಸು, ಬಲ ಮತ್ತು ಪರಾಕ್ರಮಗಳಿಂದಲೂ, ದೇವತೆಗಳೆಲ್ಲರನ್ನೂ ಮೀರಿ ಶ್ರೀಹರಿಗೆ ಸಮನೆನಿಸುವನು.

ಭಕ್ತ್ಯಾ ಮೂರ್ಧ್ನಿ ನ ಗೃಹ್ಣಾತಿ ಯೋಽಹಂಕಾರೇಣ ಪಾಮರಃ ।
ನೈವೇದ್ಯಂಚಹರೇರೇವ ಸ ಭ್ರಷ್ಟಶ್ರೀಃ ಸ್ವಜಾತಿಭಿಃ ।
ಇತ್ಯುಕ್ತ್ವಾ ಶಂಕರಾಂಶಶ್ಚ ಹ್ಯಗಮಚ್ಛಂಕರಾಲಯಂ ॥ ೫೭ ॥

ತತ್ರ ರಂಭಾಂತಿಕೇ ತಿಷ್ಠನ್ಶಿಕ್ಷೇಪ ಗಜಮಸ್ತಕೇ ।
ತೇನ ಭ್ರಷ್ಟಶ್ರಿಯಂ ದೃಷ್ಟ್ವಾ ಸಾ ಜಗಾಮ ಸುರಾಲಯಂ ॥ ೫೮ ॥

ಪುಂಶ್ಚಲೀಯೋಗ್ಯಮಿಚ್ಛಂತೀ ಚಾಪರಂ ಚಂಚಲಾಧಮಾ ।
ದೇವರಾಜಂ ಪರಿತ್ಯಜ್ಯ ಗಜರಾಜೋ ಮಹಾಬಲೀ ॥ ೫೯ ॥

ಪ್ರವಿವೇಶ ಮಹಾರಣ್ಯಂ ತಂ ನಿಕ್ಷಿಪ್ಯ ಸ್ವತೇಜಸಾ ।
ತತ್ರೈವ ಕರಿಣೀಂ ಪ್ರಾಪ್ಯ ಮತ್ತಃ ಸಂಬುಭುಜೇ ಬಲಾತ್ ॥ ೬೦ ॥

೫೭. ಯಾವನಾದರೂ ಪಾಮರನು ಅಹಂಕಾರಗೊಂಡು ಈ ಪ್ರಸಾದವನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸುವುದಿಲ್ಲವೋ ಮತ್ತು ಶ್ರೀಹರಿಯ ನೇವೇದ್ಯವನ್ನು ಸ್ವೀಕರಿಸುವುದಿಲ್ಲವೋ ಅವನು ತನ್ನ ಜ್ಞಾತಿಗಳಿಂದಲೂ ಮತ್ತು ಸಂಪತ್ತಿನಿಂದಲೂ ಭ್ರಷ್ಟನಾಗುವನು. ಹೀಗೆ ಹೇಳಿ ಶಂಕರಾಂಶಸಂಭೂತನಾದ ಆ ದೂರ್ವಾಸನು ಶಂಕರನ ಮಂದಿರಕ್ಕೆ ತೆರಳಿದನು.

೫೮. ಇತ್ತ ದೇವೇಂದ್ರನು ರಂಭೆಯ ಸಮೀಪದಲ್ಲಿ ಕುಳಿತು ಆ ಪ್ರಸಾದವನ್ನು ಐರಾವತದ ತಲೆಯ ಮೇಲೆ ಎಸೆದನು. ಕೂಡಲೇ ಸಂಪದ್ಭ್ರಷ್ಟನಾಗಲು ಆ ರಂಭೆಯು ಅವನನ್ನು ಬಿಟ್ಟು ದೇವಲೋಕಕ್ಕೆ ತೆರಳಿದಳು.

೫೯–೬೦ ಚಂಚಲಬುದ್ಧಿಯುಳ್ಳ ಆ ವೇಶ್ಯೆಯು ಇಂದ್ರನಿಗಿಂತಲೂ ಯೋಗ್ಯನಾದವನನ್ನು ಬಯಸಿ ಹೊರಟುಹೋಗಲು ಮಹಾಪರಾಕ್ರಮವುಳ್ಳ ಆ ಐರಾವತವೂ ಕೂಡ ದೇವರಾಜನಾದ ಇಂದ್ರನನ್ನು ತ್ಯಜಿಸಿ ಮಹಾರಣ್ಯವನ್ನು ಪ್ರವೇಶಿಸಿತು. ಅಲ್ಲಿಯೇ ಒಂದು ಹೆಣ್ಣಾನೆಯೊಡಗೂಡಿ ಮದದಿಂದ ಅದರೊಡನೆ ಕ್ರೀಡಿಸಿತು.

ಸಾ ತೋ ಬಭೂವ ವಶಗಾ ಯೋಷಿಜ್ಜಾತಿಃ ಸುಖಾರ್ಥಿನೀ ।
ತಯೋರ್ಬಭೂವಾಪತ್ಯಾನಾಂ ನಿವಹಸ್ತತ್ರ ಕಾನನೇ　　॥ ೬೧ ॥

ಹರಿಸ್ತನ್ಮಸ್ತಕಂ ಛಿತ್ವಾ ಯೋಜಯಾಮಾಸ ಬಾಲಕೇ ।
ಇತ್ಯೇವಂ ಕಥಿತಂ ವತ್ಸ ಕಿಂ ಭೂಯಃ ಶ್ರೋತುಮಿಚ್ಛಸಿ ।
ಗಜಾಸ್ಯಯೋಜನಾಯಾಶ್ಚ ಕಾರಣಂ ಪಾಪನಾಶನಂ　　॥ ೬೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ ನಾರದನಾರಾಯಣಸಂವಾದೇ ಗಣಪತೇಃ ಗಜಾಸ್ಯಯೋಜನಾ ಹೇತುಕಥನಂ ನಾಮ ವಿಂಶತಿತಮೋಽಧ್ಯಾಯಃ

೬೧. ಮೊದಮೊದಲು ಬಲಾತ್ಕಾರದಿಂದ ವಶವಾಗುತ್ತಿದ್ದ ಆ ಹೆಣ್ಣಾನೆಯು, ಕ್ರಮಕ್ರಮವಾಗಿ ಆ ಐರಾವತವನ್ನು ಅನುಸರಿಸಲಾರಂಭಿಸಿತು. ಸಾಮಾನ್ಯವಾಗಿ ಹೆಣ್ಣುಜಾತಿಯು ಸುಖಾಧೀನವಾದುದು. ಆ ಅರಣ್ಯದಲ್ಲಿ ಅವೆರಡಾನೆಗಳಿಗೂ ಮರಿಗಳಾಗಿ ಅವು ಸುಖವಾಗಿದ್ದುವು.

೬೨. ಶ್ರೀಹರಿಯು ಆ ಆನೆಯ ತಲೆಯನ್ನು ಕತ್ತರಿಸಿ ಗಣಪತಿಯ ಮುಂಡಕ್ಕೆ ಸೇರಿಸಿದನು. ಎಲೈ ವತ್ಸ ನಾರದನೇ, ಗಣಪತಿಗೆ ಆನೆಯ ಮುಖವುಂಟಾಗಲು ಕಾರಣವನ್ನು ಹೇಳಿದೆನು. ಈ ಕಥಾಶ್ರವಣದಿಂದ ಪಾಪನಾಶವಾಗುವುದು. ಇನ್ನು ಯಾವ ಕಥೆಯನ್ನು ಕೇಳಬಯಸುವೆ.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ ಗಣಪತಿಗೆ ಗಜಮುಖವಾಗಲು ಕಾರಣವನ್ನು ತಿಳಿಸುವ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



# ಇಪ್ಪತ್ತನೆಯ ಅಧ್ಯಾಯದ ಸಾರಾಂಶ

ಗಣಪತಿಯು ಗಜಮುಖನಾಗಲು ಕಾರಣವೇನೆಂದು ಕೇಳಿದ ನಾರದನ ಪ್ರಶ್ನೆಗೆ ನಾರಾಯಣ ಋಷಿಯು ಇಂತು ಉತ್ತರವಿತ್ತನು. ಹಿಂದೊಮ್ಮೆ ದೇವರಾಜನಾದ ಇಂದ್ರನು ಪುಷ್ಪಭದ್ರಾನದಿಯ ತೀರದಲ್ಲಿ, ಚಂದ್ರಲೋಕದಿಂದ ಬಂದ ತ್ರಿಪುರಸುಂದರಿಯಾದ ರಂಭೆಯನ್ನು ಕಂಡು ಆಕೆಯ ಸೌಂದರ್ಯಕ್ಕೆ ಮೋಹಿತನಾಗಿ ಅವಳೊಡನೆ ರತಿಕ್ರೀಡೆಯಾಡಿ ಮದಿಸಿದ್ದನು. ಆ ಸಮಯಕ್ಕೆ ಸರಿಯಾಗಿ ದೂರ್ವಾಸಮಹರ್ಷಿಯು ಆ ಮಾರ್ಗವಾಗಿ ಬಂದು ಶ್ರೀಮನ್ನಾರಾಯಣನಿತ್ತ ಪಾರಿಜಾತ ಪುಷ್ಪವನ್ನು ಇಂದ್ರನಿಗೆ ಕೊಟ್ಟು, ಆ ಪ್ರಸಾದದ ಮಹಿಮೆಯನ್ನು ವರ್ಣಿಸಿದನು. ಆದರೂ ಮದೋನ್ಮತ್ತನಾದ ಇಂದ್ರನು ಆ ಪ್ರಸಾದವನ್ನು ಐರಾವತದ ತಲೆಯ ಮೇಲೆಸೆದು, ಸಂಪದ್ಭ್ರಷ್ಟನಾದನು. ಆ ಐರಾವತವು ಇಂದ್ರನನ್ನು ತ್ಯಜಿಸಿ ಅರಣ್ಯಕ್ಕೆ ಹೋಗಿ ಒಂದು ಹೆಣ್ಣಾನೆಯೊಡನೆ ಸುಖವಾಗಿದ್ದಿತು. ತನ್ನ ಯಜಮಾನನನ್ನು ತ್ಯಜಿಸಿ ಬಂದು ಮದಿಸಿ ಉತ್ತರದಿಕ್ಕಿಗೆ ತಲೆಮಾಡಿಕೊಂಡು ಮಲಗಿದ್ದ ಆ ಆನೆಯ ತಲೆಯನ್ನು ಶ್ರೀಹರಿಯು ಕತ್ತರಿಸಿ ತಂದು ಗಣಪತಿಯ ಮುಂಡಕ್ಕೆ ಸೇರಿಸಿದನು. ಇಂತು ಗಣಪತಿಯು ಗಜಮುಖನಾದನು.



॥ ಓಂ ॥

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ಏಕವಿಂಶತಿತಮೋಽಧ್ಯಾಯಃ ॥

॥ ನಾರದ ಉವಾಚ ॥

ತೇ ದೇವಾ ಬ್ರಹ್ಮಶಾಪೇನ ನಿಃಶ್ರೀಕಾಃ ಕೇನ ವಾ ಪ್ರಭೋ ।
ಬಭೂವುಸ್ತದ್ರಹಸ್ಯಂ ಚ ಗೋಪನೀಯಂ ಸುದುರ್ಲಭಂ ॥ ೧ ॥

ಕಥಂ ವಾ ಪ್ರಾಪುರೇತೇ ತಾಂ ಕಮಲಾಂ ಜಗತಾಂ ಪ್ರಸೂಂ ।
ಕಿಂ ಚಕಾರ ಮಹೇಂದ್ರಂ ಚ ತದ್ಭವಾನ್ವಕ್ತುಮರ್ಹಸಿ ॥ ೨ ॥

॥ ನಾರಾಯಣ ಉವಾಚ ॥

ಗಜೇಂದ್ರೇಣ ಪರಾಭೂತೋ ರಂಭಯಾ ಚ ಸುಮಂದಧೀಃ ।
ಭ್ರಷ್ಟಶ್ರೀರ್ದೈನ್ಯಯುಕ್ತಶ್ಚ ಸ ಜಗಾಮಾಮರಾವತೀಂ ॥ ೩ ॥

### ಇಪ್ಪತ್ತೊಂದನೆಯ ಅಧ್ಯಾಯವು

೧. ನಾರದ:—ಬ್ರಾಹ್ಮಣನಾದ ದೂರ್ವಾಸನ ಶಾಪದಿಂದ ದೇವತೆಗಳೆಲ್ಲ ಸಂಪದ್ಭ್ರಷ್ಟರಾಗಲು ಕಾರಣವೇನು? ರಹಸ್ಯವಾದ ಈ ವಿಷಯನ್ನು ನನಗೆ ತಿಳಿಸು.

೨. ಅಲ್ಲದೆ ಜಗನ್ಮಾತೆಯಾದ ಲಕ್ಷ್ಮಿಯನ್ನು ಅವರು ಪುನಃ ಪಡೆದುದು ಹೇಗೆ? ಶಾಪಗ್ರಸ್ತನಾದ ಮಹೇಂದ್ರನು ಮುಂದೇನು ಮಾಡಿದನು ಎಂಬುದನ್ನು ನನಗೆ ವಿಸ್ತರಿಸಿ ಹೇಳು.

೩. **ನಾರಾಯಣ**:—ರಂಭೆಯಿಂದಲೂ, ಗಜರಾಜನಿಂದಲೂ ತಿರಸ್ಕೃತನಾಗಿ ಭ್ರಷ್ಟಸಂಪತ್ತಿನಿಂದ ದೀನನಾದ ದೇವೇಂದ್ರನು ಅಮರಾವತಿಗೆ ಹೋದನು.

ತಾಂ ದದರ್ಶ ನಿರಾನಂದೋ ನಿರಾನಂದಾಂ ಪುರೀಂ ಮುನೇ ।
ದೈನ್ಯಗ್ರಸ್ತಾಂ ಬಂಧುಹೀನಾಂ ವೈರಿವರ್ಗೈಃ ಸಮಾಕುಲಾಂ ॥ ೪ ॥

ಇತಿ ಶ್ರುತ್ವಾ ದೂತಮುಖಾಜ್ಜಗಾಮ ಗುರುಮಂದಿರಂ ।
ತೇನ ದೇವಗಣೈಃ ಸಾರ್ಧಂ ಜಗಾಮ ಬ್ರಹ್ಮಣಃ ಸಭಾಂ ॥ ೫ ॥

ಗತ್ವಾ ನನಾಮ ತಂ ಶಕ್ರಃ ಸುರೈಃ ಸಾರ್ಧಂ ತಥಾ ಗುರುಃ ।
ತುಷ್ಟಾವ ವೇದವಾಕ್ಯೈಶ್ಚ ಸ್ತೋತ್ರೇಣಾಪಿ ಚ ಸಂಯುತಃ ॥ ೬ ॥

ಪ್ರವೃತ್ತಿಂ ಕಥಯಾಮಾಸ ವಾಕ್ಪತಿಸ್ತಂ ಪ್ರಜಾಪತಿಂ ।
ಶ್ರುತ್ವಾ ಬ್ರಹ್ಮಾ ನಮ್ರವಕ್ತ್ರಃ ಪ್ರವಕ್ತುಮುಪಚಕ್ರಮೇ ॥ ೭ ॥

॥ ಬ್ರಹ್ಮೋವಾಚ ॥

ಮತ್ಪ್ರಪೌತ್ರೋಽಸಿ ದೇವೇಂದ್ರ ಶಶ್ವದ್ರಾಜಶ್ರಿಯಾ ಜ್ವಲನ್ ।
ಲಕ್ಷ್ಮೀಸಮಃ ಶಚೀಭರ್ತಾ ಪರಸ್ತ್ರೀಲೋಲುಪಃ ಸದಾ ॥ ೮ ॥

---

೪. ನಿರುತ್ಸಾಹನಾದ ದೇವೇಂದ್ರನು ಬಂಧುಗಳಿಲ್ಲದುದರಿಂದ ದೀನವಾಗಿಯೂ, ಶತ್ರುಪರಿಪೂರ್ಣವಾದುದರಿಂದ ಭಯಂಕರವಾಗಿಯೂ ಇರುವ ಅಮರಾವತಿಯನ್ನು ಕಂಡನು.

೫. ಚಾರನ ಮುಖಾಂತರ ಊರಿನ ಸಮಾಚಾರವನ್ನು ತಿಳಿದು ಬೃಹಸ್ಪತ್ಯಾಚಾರ್ಯನ ಮನೆಗೆ ಹೋದನು. ಅವನನ್ನು ಮುಂದುಮಾಡಿಕೊಂಡು ದೇವತೆಗಳೊಡನೆ ಬ್ರಹ್ಮನ ಸಭೆಗೆ ಹೋದನು.

೬. ದೇವತೆಗಳೊಡನೆ ಇಂದ್ರನೂ, ಬೃಹಸ್ಪತಿಯೂ, ಬ್ರಹ್ಮನಿಗೆ ಸಾಷ್ಟಾಂಗವೆರಗಿದರು. ಅನಂತರ ವೇದೋಕ್ತವಾದ ಸ್ತೋತ್ರಗಳಿಂದ ಬ್ರಹ್ಮನನ್ನು ಸ್ತುತಿಸಿದರು.

೭. ಬೃಹಸ್ಪತಿಯು ಬ್ರಹ್ಮನನ್ನು ಕುರಿತು ನಡೆದ ಸಮಾಚಾರವನ್ನೆಲ್ಲ ಬಿನ್ನವಿಸಲು, ಎಲ್ಲವನ್ನೂ ಕೇಳಿ ಬ್ರಹ್ಮನು ಶಾಂತತೆಯಿಂದ ಹೇಳಲುಪಕ್ರಮಿಸಿದನು.

೮. ಬ್ರಹ್ಮ :—ಎಲೈ ನನ್ನ ಮರಿಮಗನಾದ ದೇವೇಂದ್ರನೇ, ನೀನು ಶಚೀಪತಿಯಾಗಿ ರಾಜ್ಯಸಂಪತ್ತಿನಿಂದ ಕೂಡಿದ್ದರೂ ಪರಸ್ತ್ರೀಲೋಲುಪನಾಗಿದ್ದೆ.

ಗೌತಮಸ್ಯಾಭಿಶಾಪೇನ ಭಗಾಂಗಃ ಸುರಸಂಸದಿ ।
ಪುನರ್ಲಜ್ಜಾವಿಹೀನಸ್ತ್ವಂ ಪರಸ್ತ್ರೀರತಿಲೋಲುಪಃ ॥ ೯ ॥

ಯಃ ಪರಸ್ತ್ರೀಷು ನಿರತಸ್ತಸ್ಯ ಶ್ರೀರ್ವಾ ಕುತೋ ಯಶಃ ।
ಸ ಚ ನಿಂದ್ಯಃ ಪಾಪಯುಕ್ತಃ ಶಶ್ವತ್ಸರ್ವಸಭಾಸು ಚ ॥ ೧೦ ॥

ನೈವೇದ್ಯಂ ಶ್ರೀಹರೇರೇವ ದತ್ತಂ ದುರ್ವಾಸಸಾ ಚ ತೇ ।
ಗಜಮೂರ್ಧ್ನಿ ತ್ವಯಾ ನ್ಯಸ್ತಂ ರಂಭಯಾಽಽಹತಚೇತಸಾ ॥ ೧೧ ॥

ಕ್ವ ಸಾ ರಂಭಾ ಸರ್ವಭೋಗ್ಯಾ ಕ್ವಾಧುನಾ ತ್ವಂ ಶ್ರಿಯಾಹತಃ ।
ಸರ್ವಸೌಖ್ಯಪ್ರದಾತ್ರೀ ತ್ವಾಂ ಗತಾ ತ್ಯಕ್ತ್ವಾ ಕ್ಷಣೇನ ಸಾ ॥ ೧೨ ॥

ವೇಶ್ಯಾ ಸಶ್ರೀಕಮಿಚ್ಛಂತೀ ನಿಶ್ರೀಕಂ ನ ಚ ಚಂಚಲಾ ।
ನವಂ ನವಂ ಪ್ರಾರ್ಥಯಂತೀ ಪರಿನಿಂದ್ಯ ಪುರಾತನಂ ॥ ೧೩ ॥

೯. ಗೌತಮಮಹರ್ಷಿಯ ಶಾಪದಿಂದ ದೇಹದಲ್ಲಿ ಸಾವಿರ ಯೋನಿಯನ್ನು ಹೊಂದಿ, ದೇವಸಭೆಯಲ್ಲಿ ಅವಮಾನಿತನಾದರೂ ಪುನಃ ಲಜ್ಜಾರಹಿತನಾಗಿ ನೀನು ಪರಸ್ತ್ರೀಸಂಗಮದಲ್ಲಿ ಆಸಕ್ತನಾದೆ.

೧೦. ಪರಸ್ತ್ರೀಲೋಲುಪರಿಗೆ ಸಂಪತ್ತಾಗಲೀ, ಕೀರ್ತಿಯಾಗಲೀ, ಹೇಗೆತಾನೆ ದೊರೆತೀತು ? ಆ ಪಾಪಿಯು ಸರ್ವದಾ ಎಲ್ಲ ಸಭೆಗಳಲ್ಲೂ ದೂಷಿತನಾಗುವನು.

೧೧. ದೂರ್ವಾಸಮಹರ್ಷಿಯು ಶ್ರೀಹರಿಗೆ ಸಮರ್ಪಿಸಿದ ಪುಷ್ಪವನ್ನು ತಂದು ನಿನಗೆ ಕೊಟ್ಟನು ರಂಭೆಯೊಡಗೂಡಿ ಮದನೋನ್ಮತ್ತನಾದ ನೀನು ಅದನ್ನು ಆನೆಯ ತಲೆಯಮೇಲೆ ಬಿಸುಟೆ

೧೨. ಈಗ ಎಲ್ಲರ ಉಪಭೋಗಕ್ಕೂ ಅರ್ಹಳಾದ ಆ ರಂಭೆಯೆಲ್ಲಿ ? ಸಂಪದ್ಭ್ರಷ್ಟನಾದ ನೀನೆಲ್ಲಿ ? ಸಕಲರಿಗೂ ಸೌಖ್ಯದಾಯಿನಿಯಾದ ಆ ರಂಭೆಯು ಕ್ಷಣಮಾತ್ರದಲ್ಲಿ ನಿನ್ನನ್ನು ಬಿಟ್ಟುಹೋದಳು

೧೩. ಚಂಚಲಳಾದ ವೇಶ್ಯಾಸ್ತ್ರೀಯು ಹಣವಂತನನ್ನು ಪ್ರೀತಿಸುವಳೇ ಹೊರತು ದರಿದ್ರನನ್ನು ಪ್ರೀತಿಸಳು ಹಳಬರನ್ನು ನಿಂದಿಸುತ್ತ ಹೊಸಹೊಸ ಪುರುಷರನ್ನು ಬಯಸುವಳು.

ಯದ್ಗತಂ ತದ್ಗತಂ ವತ್ಸ ನಿಷ್ಪನ್ನಂ ನ ನಿವರ್ತತೇ ।
ಭಜ ನಾರಾಯಣಂ ಭಕ್ತ್ಯಾ ಪದ್ಮಾಯಾಃ ಪ್ರಾಪ್ತಿಹೇತವೇ ॥ ೧೪ ॥

ಇತ್ಯುಕ್ತ್ವಾ ತಂ ಜಗತ್ಸ್ರಷ್ಟಾ ಸ್ತೋತ್ರಂ ಚ ಕವಚಂ ದದೌ ।
ನಾರಾಯಣಸ್ಯ ಮಂತ್ರಂ ಚ ನಾರಾಯಣಪರಾಯಣಃ ॥ ೧೫ ॥

ಸ ತೈಃ ಸಾರ್ಧಂ ಚ ಗುರುಣಾ ಹ್ಯಜಪನ್ಮಂತ್ರಮೀಪ್ಸಿತಂ ।
ಗೃಹೀತ್ವಾ ಕವಚಂ ತೇನ ಪರ್ಯಷ್ಟೌತ್ಪುಷ್ಕರೇ ಹರಿಂ ॥ ೧೬ ॥

ವರ್ಷಮೇಕಂ ನಿರಾಹಾರೋ ಭಾರತೇ ಪುಣ್ಯದೇ ಶುಭೇ ।
ಸಿಷೇವೇ ಕಮಲಾಕಾಂತಂ ಕಮಲಾಪ್ರಾಪ್ತಿಹೇತವೇ ॥ ೧೭ ॥

ಆಗತ್ಯ ತಂ ಹರಿಸ್ತಸ್ಮೈ ವಾಂಛಿತಂ ಚ ವರಂ ದದೌ ।
ಲಕ್ಷ್ಮೀಸ್ತೋತ್ರಂ ಚ ಕವಚಂ ಮಂತ್ರಮೈಶ್ವರ್ಯವರ್ಧನಂ ॥ ೧೮ ॥

---

೧೪. ವತ್ಸ ದೇವೇಂದ್ರನೇ, ಈಗ ಆದದ್ದು ಆಗಿಹೋಯಿತು. ಹಣೆಬರಹವನ್ನು ತಪ್ಪಿಸಲಾಗುವುದಿಲ್ಲ. ಕಳೆದುಹೋದ ಸಂಪತ್ತನ್ನು ಪುನಃ ಪಡೆಯಬೇಕಾದರೆ ಭಕ್ತಿಯಿಂದ ಶ್ರೀಮನ್ನಾರಾಯಣನನ್ನು ಭಜಿಸು.

೧೫. ಜಗತ್ಸೃಷ್ಟಿಕರ್ತನಾದ ಬ್ರಹ್ಮನು ಇಂದ್ರನಿಗೆ ಇಂತು ಹೇಳಿ, ಶ್ರೀಮನ್ನಾರಾಯಣನ ಮಂತ್ರಸ್ತೋತ್ರಕವಚಾದಿಗಳನ್ನು ಉಪದೇಶಿಸಿ, ಭಕ್ತಿಯಿಂದ ಭಜಿಸಲು ಹೇಳಿದನು.

೧೬. ಇಂದ್ರನು ದೇವತೆಗಳು ಮತ್ತು ಗುರುವಿನೊಡನೆ ನಾರಾಯಣಮಂತ್ರವನ್ನು ಜಪಿಸಿದನು. ಅಲ್ಲದೆ ಕವಚಧಾರಣೆಮಾಡಿ ಪುಷ್ಕರಕ್ಷೇತ್ರದಲ್ಲಿ ಶ್ರೀಹರಿಯನ್ನು ಸ್ತುತಿಸಿದನು.

೧೭. ಪುಣ್ಯಕರವಾದ ಭರತಖಂಡದಲ್ಲಿ, ಒಂದು ವರ್ಷಕಾಲ ನಿರಾಹಾರನಾಗಿದ್ದುಕೊಂಡು ಲಕ್ಷ್ಮಿಯ (ಸಂಪತ್ತು) ಪ್ರಾಪ್ತಿಗಾಗಿ ಲಕ್ಷ್ಮೀಕಾಂತನನ್ನು ಭಜಿಸಿದನು.

೧೮. ಅವನ ಸ್ತೋತ್ರಕ್ಕೆ ಮೆಚ್ಚಿ ಶ್ರೀಹರಿಯು ಬಂದು ಅವನಿಗಿಷ್ಟವಾದ ವರವನ್ನೂ, ಐಶ್ವರ್ಯವರ್ಧಕವಾದ ಲಕ್ಷ್ಮಿಯ ಕವಚಸ್ತೋತ್ರ ಮಂತ್ರಾದಿಗಳನ್ನೂ ಅನುಗ್ರಹಿಸಿದನು.

## ಇಪ್ಪತ್ತೊಂದನೆಯ ಅಧ್ಯಾಯದ ಸಾರಾಂಶ

ದೂರ್ವಾಸರ ಶಾಪಕ್ಕೊಳಗಾದ ದೇವೇಂದ್ರನು ಅಮರಾವತಿಗೆ ಹಿಂತಿರುಗಿ ಹೋಗಿ, ಅದು ಕಾಂತಿರಹಿತವಾಗಿರುವುದನ್ನು ಕಂಡು, ಬೃಹಸ್ಪತ್ಯಾಚಾರ್ಯನೊಡನೆ ಬ್ರಹ್ಮನ ಸಭೆಗೆ ಹೋದನು. ಅಲ್ಲಿ ಬ್ರಹ್ಮನ ಅನುಗ್ರಹದಿಂದ ನಾರಾಯಣನ ಮಂತ್ರ ಸ್ತೋತ್ರಕವಚಾದಿಗಳನ್ನು ಪಡೆದು, ಪುಷ್ಕರಕ್ಷೇತ್ರದಲ್ಲಿ ಭಕ್ತಿಯಿಂದ ಭಜಿಸಿ ನಾರಾಯಣನ ಕೃಪೆಗೆ ಪಾತ್ರನಾಗಿ, ಲಕ್ಷ್ಮಿಯ ಅನುಗ್ರಹದಿಂದ ಪುನಃ ಕಳೆದು ಹೋದ ಸಂಪತ್ತನ್ನು ಹಿಂದಕ್ಕೆ ಪಡೆದನು.



ದತ್ವಾ ಜಗಾಮ ವೈಕುಂಠಮಿಂದ್ರಃ ಕ್ಷೀರೋದಮೇವ ಚ ।
ಗೃಹೀತ್ವಾ ಕವಚಂ ಸ್ತುತ್ವಾ ಪ್ರಾಪ ಪದ್ಮಾಲಯಾಂ ಮುನೇ　　॥ ೧೯ ॥

ಸುರೇಶ್ವರೋಽರಿಂ ಜಿತ್ವಾ ವೈ ಹ್ಯಲಭಚ್ಚಾಮರಾವತೀಂ ।
ಪ್ರತ್ಯೇಕಂ ಚ ಸುರಾಃ ಸರ್ವೇ ಸ್ವಾಲಯಂ ಪ್ರಾಪುರೀಪ್ಸಿತಂ　　॥ ೨೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ಶಕ್ರಲಕ್ಷ್ಮೀಪ್ರಾಪ್ತಿರ್ನಾಮ
ಏಕವಿಂಶತಿತಮೋಽಧ್ಯಾಯಃ

೧೯. ಅನಂತರ ನಾರಾಯಣನು ವೈಕುಂಠಕ್ಕೆ ತೆರಳಲು, ಇತ್ತ ಇಂದ್ರನು ಕ್ಷೀರಸಮುದ್ರಕ್ಕೆ ಹೋಗಿ ಕವಚಧಾರಣೆಮಾಡಿ ಲಕ್ಷ್ಮೀದೇವಿಯನ್ನು ಸ್ತುತಿಸಿ ಸಂಪತ್ತನ್ನು ಪಡೆದನು.

೨೦. ಅಲ್ಲದೆ ಶತ್ರುಗಳನ್ನು ಜಯಿಸಿ ಅಮರಾವತಿಯನ್ನು ಪಡೆದು ಪುನಃ ದೇವತೆಗಳ ರಾಜನಾದನು. ಇತರ ದೇವತೆಗಳೂ ಕೂಡ ತಮ್ಮ ತಮ್ಮ ಮನೆಯನ್ನೂ ಸಂಪತ್ತನ್ನೂ ಹೊಂದಿ ಸುಖವಾಗಿದ್ದರು.

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣದ ಗಣಪತಿಖಂಡದಲ್ಲಿ ಇಂದ್ರನಿಗೆ
ರಾಜ್ಯಸಂಪತ್ಪ್ರಾಪ್ತಿರೂಪವಾದ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಓಂ ।

॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

॥ ದ್ವಾವಿಂಶತಿತಮೋಽಧ್ಯಾಯಃ ॥

॥ ನಾರದ ಉವಾಚ ॥

ಆವಿರ್ಭೂಯ ಹರಿಸ್ತಸ್ಮೈ ಕಿಂ ಸ್ತೋತ್ರಂ ಕವಚಂ ದದೌ ।
ಮಹಾಲಕ್ಷ್ಮ್ಯಾಶ್ಚ ಲಕ್ಷ್ಮೀಶಸ್ತನ್ಮೇ ಬ್ರೂಹಿ ತಪೋಧನ ॥ ೧ ॥

॥ ನಾರಾಯಣ ಉವಾಚ ॥

ಪುಷ್ಕರೇ ಚ ತಪಸ್ತಪ್ತ್ವಾ ವಿರರಾಮ ಸುರೇಶ್ವರಃ ।
ಆವಿರ್ಬಭೂವ ತತ್ರೈವ ಕ್ಲಿಷ್ಟಂ ದೃಷ್ಟ್ವಾ ಹರಿಃ ಸ್ವಯಂ ॥ ೨ ॥

ತಮುವಾಚ ಹೃಷೀಕೇಶೋ ವರಂ ವೃಣು ಯಥೇಪ್ಸಿತಂ ।
ಸ ಚ ವವ್ರೇ ವರಂ ಲಕ್ಷ್ಮೀಮೀಶಸ್ತಸ್ಮೈ ದದೌ ಮುದಾ ॥ ೩ ॥

### ಇಪ್ಪತ್ತೆರಡನೆಯ ಅಧ್ಯಾಯವು

೧. ನಾರದ :—ಶ್ರೀಹರಿಯು ಇಂದ್ರನಿಗೆ ಪ್ರತ್ಯಕ್ಷನಾಗಿ ಉಪದೇಶಿಸಿದ ಮಹಾಲಕ್ಷ್ಮಿಯ ಕವಚಸ್ತೋತ್ರಗಳಾವುವೆಂಬುದನ್ನು ತಪೋಧನನಾದ ನೀನು ನನಗೆ ಹೇಳು.

೨. ನಾರಾಯಣ.—ದೇವೇಂದ್ರನು ಪುಷ್ಕರಕ್ಷೇತ್ರದಲ್ಲಿ ಉಗ್ರತಪಸ್ಸನ್ನಾಚರಿಸುತ್ತಿದ್ದಾಗ ಅವನ ಕಷ್ಟವನ್ನು ನೋಡಿ ಶ್ರೀಹರಿಯು ಅವನಿಗೆ ಪ್ರತ್ಯಕ್ಷನಾದನು.

೩. ವಿಷಯೇಂದ್ರಿಗಳ ನಿಯಂತೃವಾದ ನಾರಾಯಣನು ನಿನಗಿಷ್ಟವಾದ ವರವನ್ನು ಕೇಳಿಕೋ ಎಂದಾಗ ಇಂದ್ರನು ರಾಜ್ಯಸಂಪತ್ತನ್ನು ಬೇಡಲು, ಸಂತೋಷದಿಂದ ಅನುಗ್ರಹಿಸಿದನು

ವರಂ ದತ್ವಾ ಹೃಷೀಕೇಶಃ ಪ್ರವಕ್ತುಮುಪಚಕ್ರಮೇ ।
ಹಿತಂ ಸತ್ಯಂ ಚ ಸಾರಂ ಚ ಪರಿಣಾಮಸುಖಾವಹಂ ॥ ೪ ॥

॥ ಶ್ರೀ ಮಧುಸೂದನ ಉವಾಚ ॥

ಗೃಹಾಣ ಕವಚಂ ಶಕ್ರ ಸರ್ವದುಃಖವಿನಾಶನಂ ।
ಪರಮೈಶ್ವರ್ಯಜನಕಂ ಸರ್ವಶತ್ರುವಿಮರ್ದನಂ ॥ ೫ ॥

ಬ್ರಹ್ಮಣೇ ಚ ಪುರಾ ದತ್ತಂ ವಿಷ್ಟಪೇ ಚ ಜಲಪ್ಲುತೇ ।
ಯದ್ಧೃತ್ವಾ ಜಗತಾಂ ಶ್ರೇಷ್ಠಃ ಸರ್ವೈಶ್ವರ್ಯಯುತೋ ವಿಧಿಃ ॥ ೬ ॥

ಬಭೂವುರ್ಮನವಃ ಸರ್ವೇ ಸರ್ವೈಶ್ವರ್ಯಯುತಾ ಯತಃ ।
ಸರ್ವೈಶ್ವರ್ಯಪ್ರದಸ್ಯಾಸ್ಯ ಕವಚಸ್ಯ ಋಷಿರ್ವಿಧಿಃ ॥ ೭ ॥

೪. ಅಭೀಪ್ಸಿತವಾದ ವರವನ್ನು ಕೊಟ್ಟನಂತರ, ಹಿತಮಿತವೂ, ಸತ್ಯವೂ, ಸಾರಭೂತವೂ, ಪರಿಣಾಮದಲ್ಲಿ ಸುಖಕರವೂ ಆದ ಕೆಲವು ಮಾತುಗಳನ್ನು ಹೇಳಿದನು.

೫. ಶ್ರೀಮಧುಸೂದನ :—ಎಲೈ ಇಂದ್ರನೇ, ಸಕಲ ದುಃಖನಾಶಕವೂ, ಐಶ್ವರ್ಯವರ್ಧಕವೂ, ಶತ್ರುಸಂಹಾರಕವೂ ಆದ ಕವಚವನ್ನು ಅನುಗ್ರಹಿಸುವೆನು. ಸ್ವೀಕರಿಸು.

೬. ಪ್ರಳಯದಲ್ಲಿ ಪ್ರಪಂಚವೆಲ್ಲವೂ ಜಲಪೂರಿತವಾಗಿದ್ದಾಗ ಬ್ರಹ್ಮನಿಗೆ ಈ ಕವಚವನ್ನು ಅನುಗ್ರಹಿಸಿದೆನು. ಜಗತ್ಸ್ರಷ್ಟನಾದ ವಿಧಿಯು ಈ ಕವಚಧಾರಣೆಯ ಮಹಿಮೆಯಿಂದ ಸಕಲೈಶ್ವರ್ಯಸಂಪನ್ನನಾದನು.

೭. ಈ ಕವಚಧಾರಣೆಯ ಪ್ರಭಾವದಿಂದಲೇ ಚತುರ್ದಶಮನುಗಳೂ ಐಶ್ವರ್ಯಯುತರಾದರು. ಸಕಲಸಂಪತ್ಪ್ರದವಾದ ಈ ಕವಚಕ್ಕೆ ಬ್ರಹ್ಮನೇ ಋಷಿಯು.

ಪಂಕ್ತಿಶ್ಛಂದಶ್ಚ ಸಾ ದೇವೀ ಸ್ವಯಂ ಪದ್ಮಾಲಯಾ ವರಾ ।
ಸಿದ್ಧ್ಯೈಶ್ವರ್ಯಸುಖೇಷ್ವೇವ ವಿನಿಯೋಗಃ ಪ್ರಕೀರ್ತಿತಃ ।
ಯದ್ಧೃತ್ವಾ ಕವಚಂ ಲೋಕೇ ಸರ್ವತ್ರ ವಿಜಯೀ ಭವೇತ್ ॥ ೮ ॥

ಮಸ್ತಕಂ ಪಾತು ಮೇ ಪದ್ಮಾ ಕಂಠಂ ಪಾತು ಹರಿಪ್ರಿಯಾ ।
ನಾಸಿಕಾಂ ಪಾತು ಮೇ ಲಕ್ಷ್ಮೀಃ ಕಮಲಾ ಪಾತು ಲೋಚನೇ ॥ ೯ ॥

ಕೇಶಾನ್ಕೇಶವಕಾಂತಾ ಚ ಕಪಾಲಂ ಕಮಲಾಲಯಾ ।
ಜಗತ್ಪ್ರಸೂರ್ಗಂಡಯುಗ್ಮಂ ಸ್ಕಂಧಂ ಸಂಪತ್ಪ್ರದಾ ಸದಾ ॥ ೧೦ ॥

ಓಂ ಶ್ರೀಂ ಕಮಲವಾಸಿನ್ಯೈ ಸ್ವಾಹಾ ಪೃಷ್ಠಂ ಸದಾವತು ।
ಓಂ ಹ್ರೀಂ ಶ್ರೀಂ ಪದ್ಮಾಲಯಾಯೈ ಸ್ವಾಹಾ ವಕ್ಷಃ ಸದಾವತು ।
ಪಾತು ಶ್ರೀರ್ಮಮ ಕಂಕಾಲಂ ಬಾಹುಯುಗ್ಮಂ ಚ ತೇ ನಮಃ ॥ ೧೧ ॥

---

೮. ಪಂಕ್ತಿಯೇ ಛಂದಸ್ಸು, ಪದ್ಮಾಲಯಳಾದ ಲಕ್ಷ್ಮಿಯೇ ದೇವತೆಯು. ಐಶ್ವರ್ಯಸುಖಸಿದ್ಧಿಗಳಲ್ಲಿ ವಿನಿಯೋಗವು ಈ ಕವಚಧಾರಣೆ ಮಾಡಿದವರೆಲ್ಲರೂ ಎಲ್ಲೆಡೆಯಲ್ಲೂ ಜಯಶೀಲರಾಗುವರು.

೯. ಪದ್ಮಿನಿಯು ನನ್ನ ಶಿರಸ್ಸನ್ನೂ, ಹರಿಪ್ರಿಯಳು ಕಂಠವನ್ನೂ, ಲಕ್ಷ್ಮಿಯು ನನ್ನ ಮೂಗನ್ನೂ ಕಮಲೆಯು ನಯನಗಳನ್ನೂ ಸರ್ವದಾ ಕಾಪಾಡಲಿ.

೧೦. ಕೇಶವನ ಪತ್ನಿಯು ಕೇಶ (ಕೂದಲು) ಗಳನ್ನೂ ಕಮಲಾಲಯಳು ಕಪಾಲವನ್ನೂ, ಜಗನ್ಮಾತೆಯು ಕೆನ್ನೆಗಳನ್ನೂ, ಸಂಪತ್ಪ್ರದೆಯು ಹೆಗಲುಗಳನ್ನೂ ರಕ್ಷಿಸಲಿ.

೧೧. 'ಓಂ, ಶ್ರೀಂ, ಕಮಲಾವಾಸಿನ್ಯೈ ಸ್ವಾಹಾ' ಎಂಬ ಮಂತ್ರವು ನನ್ನ ಬೆನ್ನುಭಾಗವನ್ನೂ, 'ಓಂ, ಹ್ರೀಂ, ಶ್ರೀಂ, ಪದ್ಮಾಲಯಾಯೈ ಸ್ವಾಹಾ' ಎಂಬ ಮಂತ್ರವು ವಕ್ಷಃಸ್ಥಳವನ್ನೂ ಸರ್ವದಾ ಕಾಪಾಡಲಿ. ಶ್ರೀ ದೇವಿಯೇ, ನಿನಗೆ ವಂದಿಸುವೆನು. ನನ್ನ ಮೂಳೆಗಳನ್ನೂ, ತೋಳುಗಳನ್ನೂ ರಕ್ಷಿಸು.

ಓಂ ಹ್ರೀಂ ಶ್ರೀಂ ಲಕ್ಷ್ಮ್ಯೈ ನಮಃ ಪಾದೌ ಪಾತು ಮೇ ಸಂತತಂ ಚಿರಂ ।
ಓಂ ಹ್ರೀಂ ಶ್ರೀಂ ನಮಃ ಪದ್ಮಾಯೈ ಸ್ವಾಹಾ ಪಾತು ನಿತಂಬಕಂ ॥ ॥೧೨॥

ಓಂ ಶ್ರೀಂ ಮಹಾಲಕ್ಷ್ಮ್ಯೈ ಸ್ವಾಹಾ ಸರ್ವಾಂಗಂ ಪಾತು ಮೇ ಸದಾ ।
ಓಂ ಹ್ರೀಂ ಶ್ರೀಂ ಕ್ಲೀಂ ಮಹಾಲಕ್ಷ್ಮ್ಯೈ ಸ್ವಾಹಾ ಮಾಂ ಪಾತು ಸರ್ವತಃ ॥

ಇತಿ ತೇ ಕಥಿತಂ ವತ್ಸ ಸರ್ವಸಂಪತ್ಕರಂ ಪರಂ ।
ಸರ್ವೈಶ್ವರ್ಯಪ್ರದಂ ನಾಮ ಕವಚಂ ಪರಮಾದ್ಭುತಂ ೧೪ ॥

ಗುರುಮಭ್ಯರ್ಚ್ಯ ವಿಧಿವತ್ ಕವಚಂ ಧಾರಯೇತ್ತು ಯಃ ।
ಕಂಠೇ ವಾ ದಕ್ಷಿಣೇ ಬಾಹೌ ಸ ಸರ್ವವಿಜಯೀ ಭವೇತ್ ॥ ೧೫ ॥

ಮಹಾಲಕ್ಷ್ಮೀರ್ಗೃಹಂ ತಸ್ಯ ನ ಜಹಾತಿ ಕದಾಚನ ।
ತಸ್ಯ ಛಾಯೇವ ಸತತಂ ಸಾ ಚ ಜನ್ಮನಿ ಜನ್ಮನಿ ॥ ೧೬ ॥

೧೨. 'ಓಂ, ಹ್ರೀಂ, ಶ್ರೀಂ ಲಕ್ಷ್ಮ್ಯೈ ನಮಃ' ಎಂಬ ಮಂತ್ರವು ಸರ್ವದಾ ನನ್ನ ಪಾದಗಳನ್ನೂ 'ಓಂ, ಹ್ರೀಂ, ಶ್ರೀಂ, ನಮಃ, ಪದ್ಮಾಯೈ ಸ್ವಾಹಾ'. ಎಂಬುದು ನನ್ನ ಪೃಷ್ಠಭಾಗವನ್ನೂ ರಕ್ಷಿಸಲಿ.

೧೩. 'ಓಂ, ಶ್ರೀಂ, ಮಹಾಲಕ್ಷ್ಮ್ಯೈ ಸ್ವಾಹಾ' ಎಂಬ ಮಂತ್ರವು ನನ್ನ ಸಕಲಾವಯವಗಳನ್ನೂ, 'ಓಂ, ಹ್ರೀಂ, ಶ್ರೀಂ, ಕ್ಲೀಂ ಮಹಾಲಕ್ಷ್ಮ್ಯೈ ಸ್ವಾಹಾ' ಎಂಬುದು ಎಲ್ಲ ಕಡೆಗಳಲ್ಲಿಯೂ ಸರ್ವದಾ ರಕ್ಷಿಸಲಿ.

೧೪. ಎಲೈ ವತ್ಸ ದೇವೇಂದ್ರನೇ, ಸಕಲ ಸಂಪತ್ಪ್ರದವೂ, ಅತ್ಯಾಶ್ಚರ್ಯಕರವೂ ಆದ ಸರ್ವೈಶ್ವರ್ಯ ಪ್ರದವೆಂಬ ಈ ಕವಚವನ್ನು ನಿನಗೆ ಅನುಗ್ರಹಿಸಿರುವೆನು.

೧೫. ವಿಧಿಪೂರ್ವಕವಾಗಿ ಗುರುಸೇವೆಯನ್ನುಮಾಡಿ ಈ ಕವಚವನ್ನು ಕಂಠದಲ್ಲಾಗಲೀ, ದಕ್ಷಿಣ ಬಾಹುವಿನಲ್ಲಾಗಲೀ ಧಾರಣೆ ಮಾಡುವವರು ಎಲ್ಲೆ ಯಲ್ಲಿಯೂ ವಿಜಯಿಗಳಾಗುವರು

೧೬. ಮಹಾಲಕ್ಷ್ಮಿಯು ಅವರ ಮನೆಯನ್ನು ಬಿಟ್ಟು ಎಂದಿಗೂ ಹೋಗುವ ದಿಲ್ಲ. ಪ್ರತಿಜನ್ಮದಲ್ಲಿಯೂ ಅವರ ನೆರಳಿನಂತೆ ಹಿಂಬಾಲಿಸಿಕೊಂಡಿರುವಳು

ಇದಂ ಕವಚಮಜ್ಞಾತ್ವಾ ಭಜೇಲ್ಲಕ್ಷ್ಮೀಂ ಸ ಮಂದಧೀಃ ।
ಶತಲಕ್ಷಪ್ರಜಾಪೇಽಪಿ ನ ಮಂತ್ರಃ ಸಿದ್ಧಿದಾಯಕಃ ॥ ೧೭ ॥

॥ ನಾರಾಯಣ ಉವಾಚ ॥

ದತ್ವಾ ತಸ್ಮೈ ಚ ಕವಚಂ ಮಂತ್ರಂ ವೈ ಷೋಡಶಾಕ್ಷರಂ ।
ಸಂತುಷ್ಟಶ್ಚ ಜಗನ್ನಾಥೋ ಜಗತಾಂ ಹಿತಕಾರಣಂ ॥ ೧೮ ॥

ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಮಹಾಲಕ್ಷ್ಮ್ಯೈ ಸ್ವಾಹಾ ।
ದದೌ ತಸ್ಮೈ ಚ ಕೃಪಯಾ ಚೇಂದ್ರಾಯ ಚ ಮಹಾಮುನೇ ॥ ೧೯ ॥

ಧ್ಯಾನಂ ಚ ಸಾಮವೇದೋಕ್ತಂ ಗೋಪನೀಯಂ ಸುದುರ್ಲಭಂ ।
ಸಿದ್ಧೈರ್ಮುನೀಂದ್ರೈರ್ದುಷ್ಪ್ರಾಪ್ಯಂ ಧ್ರುವಂ ಸಿದ್ಧಿಪ್ರದಂ ಶುಭಂ ॥ ೨೦ ॥

---

೧೭. ಈ ಕವಚವನ್ನು ಅರಿಯದೆ ಮಂದಬುದ್ಧಿಯಿಂದ ಲಕ್ಷ್ಮಿಯನ್ನು ಭಜಿಸುವವನು ನೂರುಲಕ್ಷಬಾರಿ ಜಪಿಸಿದರೂ ಮಂತ್ರಸಿದ್ಧಿಯನ್ನು ಹೊಂದಲಾರನು.

೧೮. ನಾರಾಯಣಃ—ಜಗನ್ನಾಥನು ಈ ರೀತಿಯಾಗಿ ಇಂದ್ರನಿಗೆ ಕವಚವನ್ನನುಗ್ರಹಿಸಿ, ಜಗತ್ತಿಗೇ ಹಿತದಾಯಕವಾದ ಷೋಡಶಾಕ್ಷರಮಂತ್ರವನ್ನುಪದೇಶಿಸಿದನು.

೧೯. 'ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಮಹಾಲಕ್ಷ್ಮ್ಯೈ ಸ್ವಾಹಾ' ಎಂಬ ಮಂತ್ರವನ್ನು ದಯಾಮಯನಾದ ಹರಿಯು ಇಂದ್ರನಿಗೆ ಅನುಗ್ರಹಿಸಿದನು.

೨೦. ಅತ್ಯಂತ ಗೋಪ್ಯವೂ, ಸಿದ್ಧರಿಗೆ ಮತ್ತು ಮುನಿಶ್ರೇಷ್ಠರಿಗೆ ದುರ್ಲಭವೂ, ಸಿದ್ಧಿದಾಯಕವೂ ಆಗಿ ಸಾಮವೇದೋಕ್ತವಾದ ಧ್ಯಾನಕ್ರಮವನ್ನು ತಿಳಿಯಹೇಳಿದನು.

ಶ್ವೇತಚಂಪಕವರ್ಣಾಭಾಂ ಶತಚಂದ್ರಸಮಪ್ರಭಾಂ ।
ವಹ್ನಿಶುದ್ಧಾಂಶುಕಾಧಾನಾಂ ರತ್ನಭೂಷಣಭೂಷಿತಾಂ ॥ ೨೧ ॥

ಈಷದ್ಧಾಸ್ಯ ಪ್ರಸನ್ನಾಸ್ಯಾಂಭಕ್ತಾನುಗ್ರಹಕಾರಿಕಾಂ ।
ಸಹಸ್ರದಲಪದ್ಮಸ್ಥಾಂ ಸ್ವಸ್ಥಾಂ ಚ ಸುಮನೋಹರಾಂ ॥ ೨೨ ॥

ಶಾಂತಾಂ ಚ ಶ್ರೀಹರೇಃ ಕಾಂತಾಂ ತಾಂ ಭಜೇಜ್ಜಗತಾಂ ಪ್ರಸೂಂ ॥ ೨೩ ॥

ಧ್ಯಾನೇನಾನೇನ ದೇವೇಂದ್ರೋ ಧ್ಯಾತ್ವಾ ಲಕ್ಷ್ಮೀಂ ಮನೋಹರಾಂ ।
ಭಕ್ತ್ಯಾ ಸಂಪೂಜ್ಯ ತಸ್ಯೈ ಚ ಚೋಪಚಾರಾಂಸ್ತು ಷೋಡಶ ॥ ೨೪ ॥

ಸ್ತುತ್ವಾನೇನ ಸ್ತವೇನೈವ ವಕ್ಷ್ಯಮಾಣೇನ ವಾಸವ ।
ನತ್ವಾ ವರಂ ಗೃಹೀತ್ವಾ ಚ ಲಭಿಷ್ಯಸಿ ಚ ನಿರ್ವೃತಿಂ ॥ ೨೫ ॥

ಸ್ತವನಂ ಶೃಣು ದೇವೇಂದ್ರ ಮಹಾಲಕ್ಷ್ಮ್ಯಾಃ ಸುಖಪ್ರದಂ ।
ಕಥಯಾಮಿ ಸುಗೋಪ್ಯಂ ಚ ತ್ರಿಷು ಲೋಕೇಷು ದುರ್ಲಭಂ ॥ ೨೬ ॥

---

೨೧–೨೩. ಬಿಳುಪಾದ ಸಂಪಿಗೆಯಂತಿರುವ ವರ್ಣದಿಂದಲೂ, ನೂರು ಚಂದ್ರರಿಗೆ ಸಮವಾದ ದೇಹಕಾಂತಿಯಿಂದಲೂ ಕೂಡಿ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನುಟ್ಟು, ರತ್ನಾಭರಣಗಳನ್ನು ತೊಟ್ಟು, ಮಂದಹಾಸದಿಂದ ಪ್ರಸನ್ನ ವದನಳಾಗಿ ಭಕ್ತಾನುಗ್ರಹದಾಯಿನಿಯಾಗಿರುವ, ಸಹಸ್ರದಳ ಪದ್ಮವಾಸಿನಿಯೂ, ಮನೋಹರಳೂ, ಶಾಂತಳೂ, ಶ್ರೀಹರಿಯ ಕಾಂತಳೂ, ಜಗನ್ಮಾತೆಯೂ ಆದ ಮಹಾಲಕ್ಷ್ಮಿಯನ್ನು ಧ್ಯಾನಿಸುವೆನು.

೨೪. ಎಲೈ ದೇವೇಂದ್ರನೇ? ಈ ಧ್ಯಾನಮಂತ್ರದಿಂದ ಮಹಾಲಕ್ಷ್ಮಿಯನ್ನು ಧ್ಯಾನಿಸಿ ಆ ದೇವಿಗೆ ಭಕ್ತಿಪೂರ್ವಕವಾಗಿ ಷೋಡಶೋಪಚಾರಗಳನ್ನು ಸಮರ್ಪಿಸು

೨೫. ಎಲೈ ಇಂದ್ರನೇ, ಮುಂದೆ ಹೇಳುವ ಸ್ತೋತ್ರದಿಂದ ಮಹಾಲಕ್ಷ್ಮಿಯನ್ನು ಸ್ತುತಿಸಿ, ಭಕ್ತಿಯಿಂದ ನಮಿಸಿ, ಆಕೆಯ ಅನುಗ್ರಹವನ್ನು ಪಡೆದು ಶಾಂತಿಯನ್ನು ಹೊಂದುವೆ.

೨೬. ಸುಖದಾಯಕವೂ, ತ್ರಿಲೋಕದುರ್ಲಭವೂ, ಅತ್ಯಂತ ಗೋಪ್ಯವೂ ಆದ ಮಹಾಲಕ್ಷ್ಮಿಯ ಸ್ತೋತ್ರವನ್ನು ಹೇಳುವೆನು ಕೇಳು.

॥ ನಾರಾಯಣ ಉವಾಚ ॥

ದೇವಿ ತ್ವಾಂ ಸ್ತೋತುಮಿಚ್ಛಾಮಿ ನ ಕ್ಷಮಾಃ ಸ್ತೋತುಮೀಶ್ವರಾಃ ।
ಬುದ್ಧೇರಗೋಚರಾಂ ಸೂಕ್ಷ್ಮಾಂ ತೇಜೋರೂಪಾಂ ಸನಾತನೀಂ ।
ಅನಿವಾರ್ಯಗುಣಾಢ್ಯಾಂ ಚ ಕೋವಾ ನಿರ್ವಕ್ತುಮೀಶ್ವರಃ ॥ ೨೭ ॥

ಸ್ವೇಚ್ಛಾಮಯೀಂ ನಿರಾಕಾರಾಂ ಭಕ್ತಾನುಗ್ರಹವಿಗ್ರಹಾಂ ।
ಸ್ತೌಮಿ ವಾಙ್ಮನಸಾಪಾರಾಂ ಕಿಂ ವಾಽಹಂ ಜಗದಂಬಿಕೇ ॥ ೨೮ ॥

ಪರಾಂ ಚತುರ್ಣಾಂ ವೇದಾನಾಂ ಪಾರಬೀಜಂ ಭವಾರ್ಣವೇ ।
ಸರ್ವಸಸ್ಯಾಧಿದೇವೀಂ ಚ ಸರ್ವಾಸಾಮಪಿ ಸಂಪದಾಂ ॥ ೨೯ ॥

ಯೋಗಿನಾಂ ಚೈವ ಯೋಗಾನಾಂ ಜ್ಞಾನಾನಾಂ ಜ್ಞಾನಿನಾಂ ತಥಾ ।
ವೇದಾನಾಂ ವೈ ವೇದವಿದಾಂ ಜನನೀಂ ವರ್ಣಯಾಮಿ ಕಿಂ ॥ ೩೦ ॥

---

೨೭. ನಾರಾಯಣ :—ಎಲೌ ಮಹಾಲಕ್ಷ್ಮೀದೇವಿಯೇ, ಅತ್ಯಂತ ಸೂಕ್ಷ್ಮಳೂ, ವಾಚಾಮ (ಬುದ್ಧಿಗೆ) ಗೋಚರಳೂ, ತೇಜೋರೂಪಳೂ ಸನಾತನಿಯೂ ಆದ ನಿನ್ನನ್ನೂ ಈಶ್ವರಾದಿಗಳೇ ಸ್ತುತಿಸಲಾಗದಿರುವಾಗ ನಾನು ಸ್ತುತಿಸಲಾಪೆನೇ ? ಸಕಲ ಗುಣಪರಿಪೂರ್ಣಳಾದ ನಿನ್ನನ್ನು ಯಾರುತಾನೇ ಸ್ತುತಿಸಲು ಶಕ್ತರು ?

೨೮. ಎಲೌ ಜಗದಂಬಿಕೆಯೇ, ಸ್ವೇಚ್ಛಾರೂಪಿಣಿಯೊದ ನೀನು ವಸ್ತುತಃ ನಿರಾಕಾರಳಾದರೂ ಭಕ್ತಾನುಗ್ರಹಕ್ಕಾಗಿ ವಿಗ್ರಹಧಾರಣೆ ಮಾಡುವೆ. ವಾಙ್ಮನಸ್ಸುಗಳಿಗೆ ಅಗೋಚರಳಾದ ನಿನ್ನನ್ನು ನಾನೆಂತು ನುತಿಸಲಿ?

೨೯–೩೦. ಚತುರ್ವೇದಗಳಿಗೆ ಸಿಲುಕದವಳೂ, ಸಂಸಾರಸಾಗರತಾರಕಳೂ ಸಕಲಸಸ್ಯಾಧಿದೇವತೆಯೂ, ಸರ್ವಸಂಪದಭಿಮಾನಿನಿಯೂ, ಯೋಗಯೋಗಿಗಳಿಗೂ, ಜ್ಞಾನಜ್ಞಾನಿಗಳಿಗೂ, ವೇದ ವೇದಜ್ಞರಿಗೂ ಮಾತೆಯಾದ ನಿನ್ನನ್ನು ನಾನೆಂತು ವರ್ಣಿಸಲಿ ?

ಯಯಾ ವಿನಾ ಜಗತ್ಸರ್ವಮಬೀಜಂ ನಿಷ್ಫಲಂ ಧ್ರುವಂ ।
ಯಥಾ ಸ್ತನಂಧಯಾನಾಂ ಚ ವಿನಾ ಮಾತ್ರಾ ಸುಖಂ ಭವೇತ್ ॥ ೩೧ ॥

ಪ್ರಸೀದ ಜಗತಾಂ ಮಾತಾ ರಕ್ಷಾಸ್ಮಾನತಿಕಾತರಾನ್ ।
ವಯಂ ತ್ವಚ್ಚರಣಾಂಭೋಜೇ ಪ್ರಪನ್ನಾಃ ಶರಣಂ ಗತಾಃ ॥ ೩೨ ॥

ನಮಃ ಶಕ್ತಿಸ್ವರೂಪಾಯೈ ಜಗನ್ಮಾತ್ರೇ ನಮೋ ನಮಃ ।
ಜ್ಞಾನದಾಯೈ ಬುದ್ಧಿದಾಯೈ ಸರ್ವದಾಯೈ ನಮೋ ನಮಃ ॥ ೩೩ ॥

ಹರಿಭಕ್ತಿಪ್ರದಾಯಿನ್ಯೈ ಮುಕ್ತಿದಾಯೈ ನಮೋ ನಮಃ ।
ಸರ್ವಜ್ಞಾಯೈ ಸರ್ವದಾಯೈ ಮಹಾಲಕ್ಷ್ಮ್ಯೈ ನಮೋ ನಮಃ ॥ ೩೪ ॥

ಕುಪುತ್ರಾಃ ಕುತ್ರಚಿತ್ಸಂತಿ ನ ಕುತ್ರಾಪಿ ಕುಮಾತರಃ ।
ಕುತ್ರ ಮಾತಾ ಪುತ್ರದೋಷಂ ತಂ ವಿಹಾಯ ಚ ಗಚ್ಛತಿ ॥ ೩೫ ॥

೩೧. ಸ್ತನ್ಯಪಾನಮಾಡುವ ಮಕ್ಕಳಿಗೆ ತಾಯಿಯಿಲ್ಲದಿದ್ದರೆ ಎಂತು ಸುಖವಿಲ್ಲವೋ ಅಂತೆಯೇ ಜಗತ್ತಿಗೆ ಬೀಜರೂಪಳಾದ ನೀನಿಲ್ಲದಿದ್ದರೆ ನಿಖಿಲ ಜಗತ್ತೂ ನಿಷ್ಫಲವಾಗುವುದು.

೩೨. ಜಗನ್ಮಾತೆಯೇ ನೀನು ಪ್ರಸನ್ನಳಾಗಿ ಅತ್ಯಂತ ಕಾತರರಾದ ನಮ್ಮನ್ನು ಕಾಪಾಡು. ನಾವು ನಿನ್ನ ಅಡಿದಾವರೆಯನ್ನು ನಂಬಿ ಶರಣುಹೊಕ್ಕಿದ್ದೇವೆ

೩೩. ಶಕ್ತಿಸ್ವರೂಪಿಣಿಯಾದ ಎಲೌ ಜಗನ್ಮಾತೆಯೇ ನಿನಗೆ ನಮಿಸುವೆನು. ಜ್ಞಾನ, ಬುದ್ಧಿ ಮುಂತಾದ ಸಕಲಾಭೀಷ್ಟವನ್ನೂ ಕೊಡುವ ನಿನಗೆ ಅನಂತ ವಂದನೆಗಳು.

೩೪. ಹರಿಭಕ್ತಿಪ್ರದಳೂ, ಮುಕ್ತಿದಾಯಕಳೂ, ಸರ್ವಜ್ಞಳೂ, ಸಕಲೇಷ್ಟಾರ್ಥಸಿದ್ಧಿದಾಯಕಳೂ ಆದ ಎಲೌ ಮಹಾಲಕ್ಷ್ಮಿಯೇ ನಿನಗೆ ನಮಿಸುವೆನು.

೩೫. ದುಷ್ಟಪುತ್ರರನೇಕರಿರಬಹುದು. ಆದರೆ ಅವರಲ್ಲಿ ವಾತ್ಸಲ್ಯವಿಲ್ಲದ ದುಷ್ಟಮಾತೆಯರನ್ನು ಎಲ್ಲಿಯೂ ಕಾಣೆವು. ಮಾತೆಗೆ ಅವಿಧೇಯನಾದ ಪುತ್ರನ ದೋಷವು ಅವನನ್ನು ಬಿಟ್ಟು ಎಲ್ಲಿಗೆ ಹೋದೀತು

ಸ್ತನಂಧಯೇಭ್ಯ ಇವ ಮೇ ಹೇ ಮಾತರ್ದೇಹಿ ದರ್ಶನಂ ।
ಕೃಪಾಂ ಕುರು ಕೃಪಾಸಿಂಧೋ ತ್ವಮಸ್ಮಾನ್ಭಕ್ತವತ್ಸಲೇ ॥ ೩೬ ॥

ಇತ್ಯೇವಂ ಕಥಿತಂ ವತ್ಸ ಪದ್ಮಾಯಾಶ್ಚ ಶುಭಾವಹಂ ।
ಸುಖದಂ ಮೋಕ್ಷದಂ ಸಾರಂ ಶುಭದಂ ಸಂಪದಃ ಪ್ರದಂ ॥ ೩೭ ॥

ಇದಂ ಸ್ತೋತ್ರಂ ಮಹಾಪುಣ್ಯಂ ಪೂಜಾಕಾಲೇ ಚ ಯಃ ಪಠೇತ್ ।
ಮಹಾಲಕ್ಷ್ಮೀರ್ಗೃಹಂ ತಸ್ಯ ನ ಜಹಾತಿ ಕದಾಚನ ॥ ೩೮ ॥

ಇತ್ಯುಕ್ತ್ವಾ ಶ್ರೀಹರಿಸ್ತಂ ಚ ತತ್ರೈವಾಂತರಧೀಯತ ।
ದೇವೋ ಜಗಾಮ ಕ್ಷೀರೋದಂ ಸುರೈಃ ಸಾರ್ಧಂ ತದಾಜ್ಞಯಾ ॥ ೩೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣಸಂವಾದೇ ಲಕ್ಷ್ಮೀಸ್ತವಕವಚ ಪೂಜಾಕಥನಂ
ನಾಮ ದ್ವಾವಿಂಶತಿತಮೋಽಧ್ಯಾಯಃ

---

೩೬. ಎಲೌ ಮಾತೆಯೇ, ಅಳುತ್ತಿರುವ ತೊಟ್ಟಿಲ ಶಿಶುವಿಗೆ ತಾಯಿಯು ದರ್ಶನ ಕೊಡುವಂತೆ ನೀನು ನನಗೆ ದರ್ಶನಕೊಡು. ಭಕ್ತವತ್ಸಲೆಯೂ, ಕರುಣಾ ಸಾಗರಳೂ ಆದ ನೀನು ನನ್ನಲ್ಲಿ ದಯೆತೋರು.

೩೭. ವತ್ಸ ದೇವೇಂದ್ರನೇ, ಸಕಲಸಂಪತ್ಪ್ರದವೂ, ಸಾರಭೂತವೂ, ಮೋಕ್ಷ ಸುಖದಾಯಕವೂ, ಶುಭಪ್ರದವೂ ಆದ ಮಹಾಲಕ್ಷ್ಮಿಯ ಸ್ತೋತ್ರವನ್ನು ನಿನಗೆ ತಿಳಿಸಿರುವೆನು.

೩೮. ಮಹಾಪುಣ್ಯಕರವಾದ ಈ ಸ್ತೋತ್ರವನ್ನು ಯಾರು ಪೂಜಾಕಾಲದಲ್ಲಿ ಭಕ್ತಿಯಿಂದ ಪಠಿಸುವರೋ ಅವರ ಮನೆಯನ್ನು ಮಹಾಲಕ್ಷ್ಮಿಯು ಎಂದೆಂದಿಗೂ ಬಿಟ್ಟು ಹೋಗುವುದಿಲ್ಲ.

೩೯. ಶ್ರೀಹರಿಯು ದೇವೇಂದ್ರನಿಗೆ ಇಂತು ಉಪದೇಶಿಸಿ ಅಲ್ಲಿಯೇ ಅಂತರ್ಧಾನಹೊಂದಿ ಎಲ್ಲ ದೇವತೆಗಳೊಡನೆ ಕ್ಷೀರಸಾಗರಕ್ಕೆ ತೆರಳಿದನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಗಣಪತಿಖಂಡದಲ್ಲಿ
ಮಹಾಲಕ್ಷ್ಮಿಯ ಕವಚಸ್ತೋತ್ರಮಂತ್ರಪೂಜಾದಿ ಕ್ರಮವನ್ನು ತಿಳಿಸುವ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

## ಇಪ್ಪತ್ತೆರಡನೆಯ ಅಧ್ಯಾಯದ ಸಾರಾಂಶ

---

ಪುಷ್ಕರಕ್ಷೇತ್ರದಲ್ಲಿ ಉಗ್ರತಪಸ್ವಿಯಾಗಿದ್ದ ದೇವೇಂದ್ರನಿಗೆ ಶ್ರೀಹರಿಯು ಪ್ರತ್ಯಕ್ಷನಾಗಿ, ಸಕಲಸಂಪತ್ಪ್ರದವಾದ ಮಹಾಲಕ್ಷ್ಮಿಯ ಕವಚ, ಸ್ತೋತ್ರ ಮಂತ್ರಾದಿಗಳನ್ನೂ, ಅಭೀಪ್ಸಿತ ವರವನ್ನೂ ಅನುಗ್ರಹಿಸಿ ಅಂತರ್ಧಾನನಾದನು



—॥ ಓಂ ॥—

—॥ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ತ್ರಯೋವಿಂಶತಿತಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಇಂದ್ರಶ್ಚ ಗುರುಣಾ ಸಾರ್ಧಂ ಸುರೈಸ್ಸಂಹೃಷ್ಟಮಾನಸಃ ।
ಜಗಾಮ ಶೀಘ್ರಂ ಪದ್ಮಾಯೈ ತೀರಂ ಕ್ಷೀರಪಯೋನಿಧೇಃ ॥
ಕವಚಂ ಚ ಗಲೇ ಬದ್ಧ್ವಾ ಸದ್ರತ್ನಗುಟಿಕಾನ್ವಿತಂ ।
ಮನಸಾ ಸ್ತವನಂ ದಿವ್ಯಂ ಸ್ಮಾರಂ ಸ್ಮಾರಂ ಪುನಃ ಪುನಃ ॥ ೧ ॥

ತೇ ಸರ್ವೇ ಭಕ್ತಿಯುಕ್ತಾಶ್ಚ ತುಷ್ಟುವುಃ ಕಮಲಾಲಯಾಂ ।
ಸಾಶ್ರುನೇತ್ರಾಶ್ಚ ದೀನಾಶ್ಚ ಭಕ್ತಿನಮ್ರಾತ್ಮಕಂಧರಾಃ ॥ ೨ ॥

---

### ಇಪ್ಪತ್ತಮೂರನೆಯ ಅಧ್ಯಾಯವು

೧. ನಾರಾಯಣ:—ಇತ್ತ ಸಂತುಷ್ಟಾಂತರಂಗನಾದ ಇಂದ್ರನು ಬೃಹಸ್ಪತಿ ಮತ್ತು ದೇವತೆಗಳೊಡಗೂಡಿ, ರತ್ನಮಣಿಗಳನ್ನು ಪೋಣಿಸಿರುವ ಕವಚವನ್ನು ಕಂಠದಲ್ಲಿ ಧರಿಸಿ, ಮನಸ್ಸಿನಲ್ಲಿಯೇ ಮಹಾಲಕ್ಷ್ಮಿಯ ಸ್ತೋತ್ರವನ್ನು ಸ್ಮರಿಸಿ ಕೊಳ್ಳುತ್ತ ಕ್ಷೀರಸಮುದ್ರತೀರಕ್ಕೆ ಹೋದನು.

೨. ಅಲ್ಲಿ ಎಲ್ಲದೇವತೆಗಳೂ ಭಕ್ತಿಪುರಸ್ಸರವಾಗಿ ತಲೆಬಾಗಿ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ ಬಹಳ ದೈನ್ಯದಿಂದ ಮಹಾಲಕ್ಷ್ಮಿಯನ್ನು ಸ್ತುತಿಸಿದರು.

ಸಾ ತೇಷಾಂ ಸ್ತವನಂ ಶ್ರುತ್ವಾ ಸದ್ಯಃ ಸಾಕ್ಷಾದ್ಬಭೂವ ಹ ।
ಸಹಸ್ರದಲಪದ್ಮಸ್ಥಾ ಶತಚಂದ್ರಸಮಪ್ರಭಾ ॥ ೩

ಜಗದ್ವ್ಯಾಪ್ತಂ ಸುಪ್ರಭಯಾ ಜಗನ್ಮಾತ್ರಂ ಯಯಾ ಮುನೇ ।
ತಾನುವಾಚ ಜಗದ್ಧಾತ್ರೀ ಹಿತಂ ಸಾರಂ ಯಥೋಚಿತಂ ॥ ೪

॥ ಶ್ರೀ ಮಹಾಲಕ್ಷ್ಮೀರುವಾಚ ॥

ವತ್ಸಾ ನೇಚ್ಛಾಮಿ ವೋ ಗೇಹಾನ್ಗಂತುಂ ನೈವಂ ಕ್ಷಮಾಧುನಾ ।
ಭ್ರಷ್ಟಾನ್ದೃಷ್ಟ್ವಾ ಬ್ರಹ್ಮಶಾಪಾದ್ಬಿಭೇಮಿ ಬ್ರಹ್ಮಶಾಪತಃ ॥ ೫

ಪ್ರಾಣಾ ಮೇ ಬ್ರಾಹ್ಮಣಾಃ ಸರ್ವೇ ಶಶ್ವತ್ಪುತ್ರಾಧಿಕಂ ಪ್ರಿಯಾಃ ।
ವಿಪ್ರದತ್ತಂ ಚ ಯತ್ಕಿಂಚಿದುಪಜೀವ್ಯಂ ಸದೈವ ಚ ॥ ೬

೩. ಅವರ ಸ್ತುತಿಯನ್ನು ಕೇಳಿ ಶತಚ್ಚಂದ್ರನಿಗೆ ಸಮಾನವಾದ ಮುಃ ಕಾಂತಿಯುಳ್ಳ ಮಹಾಲಕ್ಷ್ಮಿಯು ಸಹಸ್ರದಳ ಪದ್ಮದಲ್ಲಿ ಕುಳಿತು ಅವರಿಗೆ ಪ್ರತ್ಯ: ಳಾದಳು.

೪. ಎಲೈ ನಾರದಮಹರ್ಷಿಯೇ, ತೇಜೋಮಯಳಾದ ಯಾವ ದೇವಿಯ ನಿಖಿಲ ಜಗತ್ತನ್ನೂ ವ್ಯಾಪಿಸಿರುವಳೋ, ಯಾರಿಂದ ಜಗತ್ತೆಲ್ಲವೂ ಜೀವಿಸಿರುವುದೋ ಅಂಥ ಜಗನ್ಮಾತೆಯು ಆ ದೇವತೆಗಳೆಲ್ಲರನ್ನೂ ಕುರಿತು ಹಿತವೂ ಸಾರವೂ ಆ ಕೆಲವು ಉಚಿತ ನುಡಿಗಳನ್ನಾಡಿದಳು.

೫. ಮಹಾಲಕ್ಷ್ಮಿ :—ಪುತ್ರರೇ, ನಿಮ್ಮ ಮನೆಗೆ ಬರಲು ಈಗ ನಾನ ಶಕ್ತಳಾಗಿಲ್ಲ. ದೂರ್ವಾಸರ ಶಾಪದಿಂದ ನೀವು ಭ್ರಷ್ಟರಾದುದನ್ನು ನೋಡಿ ನಾನು ಅವರ ಶಾಪಭೀತಳಾಗಿದ್ದೇನೆ.

೬. ಬ್ರಾಹ್ಮಣರೆಲ್ಲರೂ ನನಗೆ ಮಕ್ಕಳಿಗಿಂತಲೂ ಪ್ರಿಯರಾದವರು ಬ್ರಾಹ್ಮಣರು ಭಕ್ತಿಯಿಂದ ಏನನ್ನು ಅರ್ಪಿಸುವರೋ ಅದರಿಂದ ನಾನು ಸಂತುಷ್ಟ ಳಾಗುತ್ತೇನೆ.

ವಿಪ್ರಾ ಬ್ರುವಂತು ಮಾಂ ತುಷ್ಟಾ ಯಾಸ್ಯಾಮಿ ಭವದಾಜ್ಞಯಾ ।
ನ ಮೇ ಪೂಜಾಂ ಧ್ರುವಂ ಕರ್ತುಂ ಕ್ಷಮಾಸ್ತೇ ಚ ತಪಸ್ವಿನಃ ॥ ೭ ॥

ಗುರುಭಿರ್ಬ್ರಾಹ್ಮಣೈರ್ದೇವೈರ್ಭಿಕ್ಷುಭಿರ್ವೈಷ್ಣವೈಸ್ತಥಾ ।
ಯದ್ಯಭಾಗ್ಯಂ ಭವೇದ್ದೈವಾತ್ತೇ ಶಪ್ತಾಃ ಸಂತಿ ತೈಸ್ಸದಾ ॥ ೮ ॥

ನಾರಾಯಣಶ್ಚ ಭಗವಾನ್ಬಿಭೇತಿ ಬ್ರಹ್ಮಶಾಪತಃ ।
ಸರ್ವಬೀಜಂ ಚ ಭಗವಾನ್ಸರ್ವೇಶಶ್ಚ ಸನಾತನಃ ॥ ೯ ॥

ಏತಸ್ಮಿನ್ನಂತರೇ ಬ್ರಹ್ಮನ್ಬ್ರಾಹ್ಮಣಾ ಹೃಷ್ಟಮಾನಸಾಃ ।
ಆಜಗ್ಮುಃ ಸಸ್ಮಿತಾಃ ಸರ್ವೇ ಜ್ವಲಂತೋ ಬ್ರಹ್ಮತೇಜಸಾ ॥ ೧೦ ॥

ಅಂಗಿರಾಶ್ಚ ಪ್ರಚೇತಾಶ್ಚ ಕ್ರತುಶ್ಚ ಭೃಗುರೇವ ಚ ।
ಪುಲಹಶ್ಚ ಪುಲಸ್ತ್ಯಶ್ಚ ಮರೀಚಿಶ್ಚಾತ್ರಿರೇವ ಚ ॥ ೧೧ ॥

೭. ಬ್ರಾಹ್ಮಣರು ನನಗೆ ಆಜ್ಞೆಮಾಡಿದರೆ ಸಂತೋಷದಿಂದ ನಾನು ನಿಮ್ಮ ಮನೆಗೆ ಬರುವೆನು ಆ ತಪಸ್ವಿಗಳು ನನಗೆ ಯಾವ ಪೂಜೆಯನ್ನೂ ಮಾಡಬೇಕಾದುದಿಲ್ಲ.

೮. ಯಾರಾದರೂ ದುರದೃಷ್ಟವಶಾತ್ ದೇವಬ್ರಾಹ್ಮಣರಿಗಾಗಲೀ, ಗುರುಗಳಿಗಾಗಲೀ, ಭಿಕ್ಷುಕರಿಗಾಗಲೀ, ವಿಷ್ಣುಭಕ್ತರಿಗಾಗಲೀ ಅವಮಾನಗೊಳಿಸಿದರೆ ಅವರ ಶಾಪಕ್ಕೀಡಾಗಿ ಕಷ್ಟಪಡುವರು.

೯. ಜಗತ್ಕಾರಣನೂ, ಸರ್ವೇಶ್ವರನೂ, ಅನಾದಿಯೂ ಆದ ಶ್ರೀಮನ್ನಾರಾಯಣನೂ ಕೂಡ ಬ್ರಾಹ್ಮಣ ಶಾಪಕ್ಕೆ ಹೆದರುತ್ತಾನೆ.

೧೦. ಎಲೈ ನಾರದನೇ, ಮಹಾಲಕ್ಷ್ಮಿಯಾಡಿದ ನುಡಿಗಳನ್ನು ಕೇಳಿ ಪ್ರಸನ್ನರಾದ ಬ್ರಾಹ್ಮಣರು ತಮ್ಮ ತೇಜಸ್ಸಿನಿಂದ ದಶದಿಕ್ಕುಗಳನ್ನೂ ಬೆಳಗುತ್ತ ಮಂದಸ್ಮಿತರಾಗಿ ಅಲ್ಲಿಗೆ ಬಂದರು.

೧೧. ಅವರಲ್ಲಿ ಅಂಗಿರಸ್ಸು, ಪ್ರಜೇತಸ್ಸು, ಕ್ರತು, ಭೃಗು, ಪುಲಹ, ಪುಲಸ್ತ್ಯ, ಮರೀಚಿ, ಅತ್ರಿ ಮುಂತಾದ ಮಹರ್ಷಿಗಳಿದ್ದರು.

ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ।
ಸನತ್ಕುಮಾರೋ ಭಗವಾನ್ಸಾಕ್ಷಾನ್ನಾರಾಯಣಾತ್ಮಕಃ ॥ ೧೨ ॥

ಕಪಿಲಶ್ಚಾಸುರಿಶ್ಚೈವ ವೋಢುಃ ಪಂಚಶಿಖಸ್ತಥಾ ।
ದುರ್ವಾಸಾಃ ಕಶ್ಯಪೋಽಗಸ್ತ್ಯೋ ಗೌತಮಃ ಕಣ್ವ ಏವ ಚ ॥ ೧೩ ॥

ಔರ್ವಃ ಕಾತ್ಯಾಯನಶ್ಚೈವ ಕಣಾದಃ ಪಾಣಿನಿಸ್ತಥಾ ।
ಮಾರ್ಕಂಡೇಯೋ ಲೋಮಶಶ್ಚ ವಸಿಷ್ಠೋ ಭಗವಾನ್ಸ್ವಯಂ ॥ ೧೪ ॥

ಬ್ರಾಹ್ಮಣಾ ವಿವಿಧೈರ್ದ್ರವ್ಯೈಃ ಪೂಜಯಾಮಾಸುರೀಶ್ವರೀಂ ।
ದೇವಾಶ್ಚಾರಣ್ಯ ನೈವೇದ್ಯೈರುಪಹಾರೇಣ ಭಕ್ತಿತಃ ॥ ೧೫ ॥

ಸ್ತುತ್ವಾ ಮುನೀಂದ್ರಾಸ್ತಾಂ ಭಕ್ತ್ಯಾ ಚಕ್ರುರಾರಾಧನಂ ಮುದಾ ।
ಆಗಚ್ಛ ದೇವಭವನಂ ಮರ್ತ್ಯಂ ಚ ಜಗದಂಬಿಕೇ ॥ ೧೬ ॥

೧೨ ಸನಕಸನಂದರೂ, ಸನಾತನನೂ, ನಾರಾಯಣಸಂಭೂತನಾದ ಸನತ್ಕುಮಾರನೂ ಆ ಸಮೂಹದಲ್ಲಿದ್ದರು.

೧೩–೧೪. ಕಪಿಲ, ಆಸುರಿ, ವೋಢು, ಪಂಚಶಿಖ, ದೂರ್ವಾಸ, ಕಶ್ಯಪ, ಅಗಸ್ತ್ಯ, ಗೌತಮ, ಕಣ್ವ, ಔರ್ವ, ಕಾತ್ಯಾಯನ, ಕಣಾದ, ಪಾಣಿನಿ, ಮಾರ್ಕಂಡೇಯ, ಲೋಮಶ ಮತ್ತು ವಸಿಷ್ಠನೇ ಮುಂತಾದ ಮಹರ್ಷಿಗಳೂ ಅಲ್ಲಿದ್ದರು.

೧೫. ಆ ಬ್ರಾಹ್ಮಣರೆಲ್ಲರೂ ವಿವಿಧ ಪೂಜಾಸಾಮಗ್ರಿಗಳಿಂದ ಮಹಾಲಕ್ಷ್ಮಿಯನ್ನು ಪೂಜಿಸಿ ತೃಪ್ತಿಪಡಿಸಿದರು. ದೇವತೆಗಳೂ ಕೂಡ ಭಕ್ತಿಯಿಂದ ಪೂಜಿಸಿ ಅರಣ್ಯದಲ್ಲಿ ದೊರೆಯುವ ಕಂದಮೂಲಫಲಾದಿಗಳನ್ನು ಉಪಹಾರವಾಗಿ ಕೊಟ್ಟರು

೧೬. ಆ ಮುನಿಶ್ರೇಷ್ಠರೆಲ್ಲರೂ ಆ ದೇವಿಯನ್ನು ಭಕ್ತಿಯಿಂದ ಭಜಿಸಿ, ಸಂತೋಷದಿಂದ ಪೂಜಿಸಿ, 'ಎಲೌ ಜಗನ್ಮಾತೆಯೇ ನೀನು ದೇವಲೋಕಕ್ಕೂ, ಭೂಲೋಕಕ್ಕೂ ಬಂದು ನೆಲಸು' ಎಂದು ಬೇಡಿಕೊಂಡರು.

ತೇಷಾಂ ತದ್ವಚನಂ ಶ್ರುತ್ವಾ ತಾನುವಾಚ ಜಗತ್ಪ್ರಸೂಃ ।
ಪರಿತುಷ್ಟಾ ಗಾಮುಕೀ ಚ ನಿರ್ಭಯಾ ಬ್ರಾಹ್ಮಣಾಜ್ಞಯಾ ॥ ೧೬ ॥

॥ ಶ್ರೀ ಮಹಾಲಕ್ಷ್ಮೀರುವಾಚ ॥

ಗೃಹಾಣ್ಯಾಸ್ಯಾಮಿ ದೇವಾನಾಂ ಯುಷ್ಮಾಕಂ ಚಾಜ್ಞಯಾ ದ್ವಿಜಾಃ ।
ಯೇಷಾಂ ಗೇಹಂ ನ ಗಚ್ಛಾಮಿ ಶೃಣುಧ್ವಂ ಭಾರತೇಷು ಚ ॥ ೧೮ ॥

ಸ್ಥಿರಾ ಪುಣ್ಯವತಾಂ ಗೇಹೇ ಸುನೀತಿಪಥವೇದಿನಾಂ ।
ಗೃಹಸ್ಥಾನಾಂ ನೃಪಾಣಾಂ ವಾ ಪುತ್ರವತ್ಪಾಲಯಾಮಿ ತಾನ್ ॥ ೧೯ ॥

ಯಂ ಯಂ ರುಷ್ಟೋ ಗುರುರ್ದೇವೋ ಮಾತಾ ತಾತಶ್ಚ ಬಾಂಧವಾಃ ।
ಅತಿಥಿಃ ಪಿತೃಲೋಕಶ್ಚ ಯಾಮಿ ತಸ್ಯ ನ ಮಂದಿರಂ ॥ ೨೦ ॥

ಮಿಥ್ಯಾವಾದೀ ಚ ಯಃ ಶಶ್ವದನಧ್ಯಾಯೀ ಚ ಯಃ ಸದಾ ।
ಸತ್ವಹೀನಶ್ಚ ದುಶ್ಶೀಲೋ ನ ಗೇಹಂ ತಸ್ಯ ಯಾಮ್ಯಹಂ ॥ ೨೧ ॥

೧೭. ಜಗನ್ಮಾತೆಯು ಆ ಮಹರ್ಷಿಗಳ ಮಾತನ್ನು ಕೇಳಿ, ಸಂತುಷ್ಟಳಾಗಿ ನಿರ್ಭಯದಿಂದ ದೇವಮಂದಿರಕ್ಕೆ ಹೊರಡಲನುವಾಗಿ ಹೀಗೆ ಹೇಳಿದಳು.

೧೮. ಶ್ರೀ ಮಹಾಲಕ್ಷ್ಮಿ:—ಎಲೈ ವಿಪ್ರವರ್ಯರೇ ನಿಮ್ಮ ಅನುಜ್ಞೆಯಂತೆ ದೇವಮಂದಿರಕ್ಕೆ ಹೋಗುವೆನು. ಭರತಖಂಡದಲ್ಲಿ ನಾನು ಯಾರ ಮನೆಗೆ ಹೋಗುವು ದಿಲ್ಲವೆಂಬುದನ್ನು ಹೇಳುವೆನು, ಕೇಳಿರಿ

೧೯. ಸದಾಚಾರಸಂಪನ್ನರೂ, ಪುಣ್ಯಶಾಲಿಗಳೂ ಆದ ಗೃಹಸ್ಥರ ಮತ್ತು ರಾಜರ ಮನೆಯಲ್ಲಿ ನಾನು ಶಾಶ್ವತವಾಗಿ ನೆಲೆಸಿ ಅವರನ್ನು ನನ್ನ ಮಕ್ಕಳಂತೆ ಕಾಪಾಡುತ್ತೇನೆ.

೨೦. ಗುರುಗಳು, ದೇವತೆಗಳು, ತಂದೆತಾಯಿಯರು, ನೆಂಟರಿಷ್ಟರು, ಅತಿಥಿ ಅಭ್ಯಾಗತರು ಮತ್ತು ಪಿತೃದೇವತೆಗಳು ಯಾರ ವಿಷಯದಲ್ಲಿ ಕುಪಿತರಾಗಿರುವರೋ ಅವರ ಮನೆಗೆ ನಾನು ಹೋಗುವುದಿಲ್ಲ.

೨೧. ಯಾರು ಅಧ್ಯಯನಮಾಡದೆ, ಸರ್ವದಾ ಸುಳ್ಳುನುಡಿಯಾಡುವರೋ, ಯಾರು ದುರಾಚಾರಪರರೂ, ಸತ್ವಹೀನರೂ ಆಗಿರುವರೋ ಅವರ ಮಂದಿರಕ್ಕೆ ನಾನು ಹೋಗುವುದಿಲ್ಲ.

ಸತ್ಯಹೀನಃ ಸ್ಥಾಪ್ಯಹಾರೀ ಮಿಥ್ಯಾಸಾಕ್ಷ್ಯಪ್ರದಾಯಕಃ ।
ವಿಶ್ವಾಸಘ್ನಃ ಕೃತಘ್ನೋ ಯೋ ಯಾಮಿ ತಸ್ಯ ನ ಮಂದಿರಂ ॥ ೨೨ ॥

ಚಿಂತಾಗ್ರಸ್ತೋ ಭಯಗ್ರಸ್ತಃ ಶತ್ರುಗ್ರಸ್ತೋಽತಿಪಾತಕೀ ।
ಋಣಗ್ರಸ್ತೋಽತಿಕೃಪಣೋ ನ ಗೇಹಂ ಯಾಮಿ ಪಾಪಿನಾಂ ॥ ೨೩ ॥

ದೀಕ್ಷಾಹೀನಶ್ಚ ಶೋಕಾರ್ತೋ ಮಂದಧೀಃ ಸ್ತ್ರೀಜಿತಃ ಸದಾ ।
ನ ಯಾಮ್ಯಪಿ ಕದಾ ಗೇಹಂ ಪುಂಶ್ಚಲ್ಯಾಃ ಪತಿಪುತ್ರಯೋಃ ॥ ೨೪ ॥

ಯೋ ದುರ್ವಾಕ್ಕಲಹಾವಿಷ್ಟಃ ಕಲಿಃ ಶಶ್ವದ್ಯದಾಲಯೇ
ಸ್ತ್ರೀಪ್ರಧಾನಾ ಗೃಹೇ ಯಸ್ಯ ಯಾಮಿ ತಸ್ಯ ನ ಮಂದಿರಂ ॥ ೨೫ ॥

ಯತ್ರ ನಾಸ್ತಿ ಹರೇಃ ಪೂಜಾ ತದೀಯ ಗುಣಕೀರ್ತನಂ ।
ನೋತ್ಸುಕಸ್ತತ್ಪ್ರಶಂಸಾಯಾಂ ಯಾಮಿ ತಸ್ಯ ನ ಮಂದಿರಂ ॥ ೨೬ ॥

೨೨. ಅಡುವಿಟ್ಟ ವಸ್ತುವನ್ನು ಅಪಹರಿಸುವವರ ಮತ್ತು ಸುಳ್ಳುಸಾಕ್ಷ್ಯ ಹೇಳುವವರ, ವಿಶ್ವಾಸಘಾತಕರ ಮತ್ತು ಉಪಕಾರಸ್ಮರಣೆಯಿಲ್ಲದವರ ಮನೆಗೆ ನಾನು ಕಾಲಿಡುವುದಿಲ್ಲ

೨೩. ಚಿಂತಾಭಯಗಳಿಂದಲೂ, ಋಣಶತ್ರುಗಳಿಂದಲೂ ಪೀಡಿತನಾಗಿ ಅತ್ಯಂತ ಪಾತಕಿಯೂ, ಕೃಪಣನೂ ಆದವನ ಮನೆಗೆ ನಾನು ಹೋಗುವುದಿಲ್ಲ

೨೪. ದೀಕ್ಷಾರಹಿತನೂ, ಶೋಕಪೀಡಿತನೂ, ಮಂದಬುದ್ಧಿಯುಳ್ಳವನೂ. ಹೆಂಗಸಿಗೆ ಅಧೀನನಾದವನೂ, ವೇಶ್ಯಾಪತಿಯೂ, ವೇಶ್ಯಾಪುತ್ರನೂ ಆದವರ ಮನೆಯಲ್ಲಿ ನಾನು ಯಾವಾಗಲೂ ನೆಲೆಸುವುದಿಲ್ಲ

೨೫. ಯಾರು ಯಾವಾಗಲೂ ಕೆಟ್ಟಮಾತುಗಳನ್ನಾಡುವರೋ. ಯಾರ ಮನೆಯಲ್ಲಿ ಸರ್ವದಾ ಕಲಹವಾಗುತ್ತಿರುವುದೋ, ಹೆಂಗಸು ಯಾರ ಮನೆಯ ಯಜಮಾನಿಕೆಯನ್ನು ವಹಿಸಿರುವಳೋ, ಅವರ ಮನೆಗೆ ನಾನು ಹೋಗುವುದಿಲ್ಲ.

೨೬. ಎಲ್ಲಿ ಶ್ರೀಹರಿಯ ಪೂಜೆಯೂ ಗುಣಕೀರ್ತನೆಗಳೂ, ಸ್ತೋತ್ರ ಭಜನೆಗಳೂ ನಡೆಯುವುದಿಲ್ಲವೋ ಅಲ್ಲಿಗೆ ನಾನು ಕಾಲಿಡುವುದಿಲ್ಲ.

ಅಧೌತಪಾದಶಾಯೀ ಯೋ ನಗ್ನಃ ಶೇತೇಽತಿನಿದ್ರಿತಃ ।
ಸಂಧ್ಯಾಶಾಯೀ ದಿವಾಶಾಯೀ ಯಾಮಿ ತಸ್ಯ ನ ಮಂದಿರಂ ॥ ೩೨ ॥

ಮೂರ್ಧ್ನಿ ತೈಲಂ ಪುರೋ ದತ್ವಾ ಯೋಽನ್ಯದಂಗಮುಪಸ್ಪೃಶೇತ್ ।
ದದಾತಿ ಪಶ್ಚಾದ್ಗಾತ್ರೇ ವಾ ಯಾಮಿ ತಸ್ಯ ನ ಮಂದಿರಂ ॥ ೩೩ ॥

ದತ್ವಾ ತೈಲಂ ಮೂರ್ಧ್ನಿ ಗಾತ್ರೇ ವಿಣ್ಮೂತ್ರಂ ಯಃ ಸಮುತ್ಸೃಜೇತ್ ।
ಪ್ರಣಮೇದಾಹರೇತ್ಪುಷ್ಪಂ ಯಾಮಿ ತಸ್ಯ ನ ಮಂದಿರಂ ॥ ೩೪ ॥

ತೃಣಂ ಛಿನತ್ತಿ ನಖರೈರ್ನಖರೈರ್ವಿಲಿಖೇನ್ಮಹೀಂ ।
ಗಾತ್ರೇ ಪಾದೇ ಮಲಂ ಯಸ್ಯ ಯಾಮಿ ತಸ್ಯ ನ ಮಂದಿರಂ ॥ ೩೫ ॥

ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಸುರಸ್ಯ ಚ ।
ಯೋ ಹರೇಜ್ಜ್ಞಾನಶೀಲಶ್ಚ ಯಾಮಿ ತಸ್ಯ ನ ಮಂದಿರಂ ॥ ೩೬ ॥

---

೩೨. ಕಾಲುಗಳನ್ನು ತೊಳೆಯದೆಯೂ, ಬೆತ್ತಲೆಯಾಗಿಯೂ ಯಾರು ಮಲಗಿಕೊಳ್ಳುವರೋ, ಸಂಧ್ಯಾಕಾಲದಲ್ಲಿಯೂ, ಹಗಲುಹೊತ್ತಿನಲ್ಲಿಯೂ ಯಾರು ನಿದ್ರೆಮಾಡುವರೋ ಅವರ ಮನೆಗೆ ನಾನು ಹೋಗುವುದಿಲ್ಲ

೩೩. ಯಾರು ಮೊದಲು ತಲೆಗೆ ಎಣ್ಣೆಯನ್ನು ಹಾಕಿಕೊಂಡು ಅನಂತರ ಇತರ ಅಂಗಗಳನ್ನು ಸ್ಪರ್ಶಮಾಡುವರೋ, ಅಥವಾ ತಲೆಗೆ ಎಣ್ಣೆ ಹಚ್ಚಿಕೊಂಡ ನಂತರ ಮೈಗೆ ಹಚ್ಚಿಕೊಳ್ಳುವರೋ ಅಂಥವರ ಮನೆಗೆ ನಾನು ಕಾಲಿಡುವುದಿಲ್ಲ.

೩೪. ತಲೆಗೂ ಮೈಗೂ ಎಣ್ಣೆ ಹಚ್ಚಿಕೊಂಡು, ಮಲಮೂತ್ರವಿಸರ್ಜನೆ ಮಾಡುವವರ, ಅಥವಾ ಪುಷ್ಪಗಳನ್ನು ತಂದರ್ಪಿಸಿ ನಮಸ್ಕರಿಸುವವರ ಮನೆಗೆ ನಾನು ಹೋಗುವುದಿಲ್ಲ.

೩೫. ಉಗುರುಗಳಿಂದ ಹುಲ್ಲನ್ನು ಕತ್ತರಿಸುವವರ ಅಥವಾ ಭೂಮಿಯ ಮೇಲೆ ಗೆರೆಯೆಳೆಯುವವರ, ಮತ್ತು ಕೊಳಕಾದ ಕೈಕಾಲುಗಳುಳ್ಳವರ ಮನೆಗೆ ನಾನು ಹೋಗುವುದಿಲ್ಲ

೩೬. ತಾನಾಗಲೀ ಅಥವಾ ಮತ್ತೊಬ್ಬರಾಗಲೀ ದಾನಮಾಡಿರುವ ದೇವ ಬ್ರಾಹ್ಮಣರ ವೃತ್ತಿಯನ್ನು ಅಪಹರಿಸುವವನು ಜ್ಞಾನಿಯಾದರೂ ಅವನ ಮಂದಿರದಲ್ಲಿ ನಾನಿರುವುದಿಲ್ಲ.

ಕನ್ಯಾನ್ನವೇದವಿಕ್ರೇತಾ ನರಘಾತೀ ಚ ಹಿಂಸಕಃ ।
ನರಕಾಗಾರಸದೃಶಂ ಯಾಮಿ ತಸ್ಯ ನ ಮಂದಿರಂ　　॥ ೨೭ ॥

ಮಾತರಂ ಪಿತರಂ ಭಾರ್ಯಾಂ ಗುರುಪತ್ನೀಂ ಗುರುಂ ಸುತಂ ।
ಅನಾಥಾಂ ಭಗಿನೀಂ ಕನ್ಯಾಮನನ್ಯಾಶ್ರಯಬಾಂಧವಾನ್　　॥ ೨೮ ॥

ಕಾರ್ಪಣ್ಯಾದ್ಯೋ ನ ಪುಷ್ಣಾತಿ ಸಂಚಯಂ ಕುರುತೇ ಸದಾ ।
ತದ್ಗೇಹಾನ್ನರಕಾಗಾರಾನ್ಯಾಮಿ ತಾನ್ನ ಮುನೀಶ್ವರಾಃ　　॥ ೨೯ ॥

ದಶನಂ ವಸನಂ ಯಸ್ಯ ಸಮಲಂ ರೂಕ್ಷಮಸ್ತಕಂ ।
ವಿಕೃತೌ ಗ್ರಾಸಹಾಸೌ ಚ ಯಾಮಿ ತಸ್ಯ ನ ಮಂದಿರಂ　　॥ ೩೦ ॥

ಮೂತ್ರಂ ಪುರೀಷಮುತ್ಸೃಜ್ಯ ಯಸ್ತತ್ಪಶ್ಯತಿ ಮಂದಧೀಃ ।
ಯಃ ಶೇತೇ ಸ್ನಿಗ್ಧಪಾದೇನ ಯಾಮಿ ತಸ್ಯ ನ ಮಂದಿರಂ　　॥ ೩೧ ॥

೨೭. ಹಣದಾಸೆಗಾಗಿ ಕನ್ಯ ಮಗಳನ್ನೂ, ಅನ್ನ ಮತ್ತು ವೇದವನ್ನೂ ಮಾರುವ ಲೋಭಿಯ ಮನೆಗೂ, ನರಹಿಂಸಕನ ನರಕಸದೃಶವಾದ ಮನೆಗೂ ನಾನು ಎಂದಿಗೂ ಹೋಗುವುದಿಲ್ಲ.

೨೮-೨೯ ಯಾರು ಅತಿಲೋಭದಿಂದ, ತಂದೆತಾಯಿಯರನ್ನೂ ಹೆಂಡತಿಯನ್ನೂ, ಗುರುವಿನ ಪತ್ನೀಪುತ್ರರನ್ನೂ, ಗುರುವನ್ನೂ, ತನ್ನ ಮಗನನ್ನೂ, ದಿಕ್ಕಿಲ್ಲದ ಸಹೋದರಿಯನ್ನೂ, ಮಗಳನ್ನೂ ಗತಿಯಿಲ್ಲದ ಬಾಂಧವರನ್ನೂ ಪೋಷಿಸದೆ ಹಣವನ್ನು ಕೂಡಿಡುವನೋ ಅಂಥವನ ಮನೆಯಲ್ಲಿ ನಾನು ನೆಲೆಯಾಗಿರುವುದಿಲ್ಲ.

೩೦. ಯಾರ ಹಲ್ಲುಗಳು, ಮತ್ತು ಧರಿಸುವ ವಸ್ತ್ರಗಳು ಕೊಳಕಾಗಿರುವುವೋ, ಯಾರು ತಲೆಗೆ ಸ್ನಾನಮಾಡುವುದಿಲ್ಲವೋ, ಯಾರ ಊಟ ಉಪಚಾರಗಳೂ, ಸುಖಸಂತೋಷಗಳೂ ಲೋಕವಿಲಕ್ಷಣವಾದುವೋ ಅಂಥವರ ಮನೆಗೆ ನಾನು ಕಾಲಿಡುವುದಿಲ್ಲ.

೩೧. ಮಲಮೂತ್ರ ವಿಸರ್ಜನೆಮಾಡಿದನಂತರ ಅದನ್ನು ನೋಡುವ ಮೂರ್ಖನ, ಮತ್ತು ಕಾಲಿಗೆ ಎಣ್ಣೆ ಒಳಿದುಕೊಂಡು ಮಲಗುವವನ ಮಂದಿರದಲ್ಲಿ ನಾನು ಇರುವುದಿಲ್ಲ.

ಯತ್ಕರ್ಮ ದಕ್ಷಿಣಾಹೀನಂ ಕುರತೇ ಮೂಢಧೀಃ ಶಠಃ |
ಸ ಪಾಪೀ ಪುಣ್ಯಹೀನಶ್ಚ ಯಾಮಿ ತಸ್ಯ ನ ಮಂದಿರಂ || ೩೭ ||

ಮಂತ್ರವಿದ್ಯೋಪಜೀವೀ ಚ ಗ್ರಾಮಯಾಜೀ ಚಿಕಿತ್ಸಕಃ |
ಸೂಪಕೃದ್ದೇವಲಶ್ಚೈವ ಯಾಮಿ ತಸ್ಯ ನ ಮಂದಿರಂ || ೩೮ ||

ವಿವಾಹಂ ಧರ್ಮಕಾರ್ಯಂ ವಾ ಯೋ ನಿಹಂತಿ ಚ ಕೋಪತಃ |
ದಿವಾ ಮೈಥುನಕಾರೀ ಯೋ ಯಾಮಿ ತಸ್ಯ ನ ಮಂದಿರಂ || ೩೯ ||

ಇತ್ಯುಕ್ತ್ವಾ ಸಾ ಮಹಾಲಕ್ಷ್ಮೀರಂತರ್ಧಾನಂ ಜಗಾಮ ಹ |
ದದೌ ದೃಷ್ಟಿಂ ಚ ದೇವಾನಾಂ ಗೃಹೇ ಮರ್ತ್ಯೇ ಚ ನಾರದ || ೪೦ ||

ತಾಂ ಪ್ರಣಮ್ಯ ಸುರಾಃ ಸರ್ವೇ ಮುನಯಶ್ಚ ಮುದಾನ್ವಿತಾಃ |
ಪ್ರಜಗ್ಮುಃ ಸ್ವಾಲಯಂ ಶೀಘ್ರಂ ಶತ್ರುತ್ಯಕ್ತಂ ಸುಹೃದ್ಯುತಂ || ೪೧ ||

೩೭. ಯಾವ ಮೂರ್ಖನು ದಕ್ಷಿಣಾರಹಿತವಾದ ಕರ್ಮಮಾಡುವನೋ ಪುಣ್ಯಹೀನನಾದ ಆ ಪಾಪಿಯ ಮನೆಗೆ ನಾನು ಹೋಗುವುದಿಲ್ಲ.

೩೮. ಮಂತ್ರವಿದ್ಯೆಯಿಂದ ಜೀವಿಸುವವನೂ, ಗ್ರಾಮಪುರೋಹಿತನೂ, ವೈದ್ಯನೂ, ಅಡಿಗೆಮಾಡುವವನೂ, ಪೂಜಾರಿಯೂ ಆದವರ ಮಂದಿರದಲ್ಲಿ ನಾನು ನೆಲೆಸಿರುವುದಿಲ್ಲ.

೩೯. ಯಾರು ಕೋಪದಿಂದ ವಿವಾಹವನ್ನೂ, ಧರ್ಮಕಾರ್ಯವನ್ನೂ ತಪ್ಪಿಸುವರೋ, ಯಾರು ಹಗಲಿನಲ್ಲಿ ಸ್ತ್ರೀಸಹವಾಸಮಾಡುವರೋ ಅವರ ಮಂದಿರದಲ್ಲಿ ನಾನಿರುವುದಿಲ್ಲ.

೪೦. ಹೀಗೆ ಹೇಳಿ ಮಹಾಲಕ್ಷ್ಮಿಯು ಅಂತರ್ಧಾನ ಹೊಂದಿದಳು. ಅಲ್ಲದೆ ದೇವತೆಗಳ ಮತ್ತು ಮನುಜರ ಮನೆಗಳಿಗೆ ತನ್ನ ಕಟಾಕ್ಷವನ್ನು ಬೀರಿದಳು.

೪೧. ಸಕಲ ದೇವತೆಗಳೂ, ಮುನಿಗಳೂ, ಮಹಾಲಕ್ಷ್ಮಿಗೆ ವಂದಿಸಿ, ಸಂತುಷ್ಟರಾಗಿ ಶತ್ರುರಹಿತವೂ, ಮಿತ್ರಸಹಿತವೂ ಆದ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

ನೇದುರ್ದುಂದುಭಯಃ ಸ್ವರ್ಗೇ ಬಭೂವುಃ ಪುಷ್ಪವೃಷ್ಟಯಃ ।
ಪ್ರಾಪುರ್ದೇವಾಃ ಸ್ವರಾಜ್ಯಂ ಚ ನಿಶ್ಚಲಾಂ ಕಮಲಾಂ ಮುನೇ ॥ ೪೨ ॥

ಇತ್ಯೇವಂ ಕಥಿತಂ ವತ್ಸ ಲಕ್ಷ್ಮೀಚರಿತಮುತ್ತಮಂ ।
ಸುಖದಂ ಮೋಕ್ಷದಂ ಸಾರಂ ಕಿಂ ಪುನಃ ಶ್ರೋತುಮಿಚ್ಛಸಿ ॥ ೪೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ತೃತೀಯೇ ಗಣಪತಿಖಂಡೇ
ನಾರದನಾರಾಯಣ ಸಂವಾದೇ ಗಣಪತೇರ್ಗಜಾಸ್ಯತ್ವಕಾರಣ
ಲಕ್ಷ್ಮೀಬ್ರಾಹ್ಮಣವಿರೋಧಾದಿಲಕ್ಷ್ಮೀಚರಿತ್ರಕಥನಂ
ನಾಮ ತ್ರಯೋವಿಂಶತಿತಮೋಽಧ್ಯಾಯಃ

೪೨. ಆಗ ಸ್ವರ್ಗದಲ್ಲಿ ದುಂದುಭಿಧ್ವನಿಯೂ, ಪುಷ್ಪವೃಷ್ಟಿಯೂ ಆಯಿತ ದೇವತೆಗಳಿಗೆ ಸ್ವರಾಜ್ಯವೂ, ಶಾಶ್ವತವಾದ ಸಂಪತ್ತೂ ದೊರೆಯಿತು.

೪೩. ವತ್ಸ ನಾರದನೇ, ಅತ್ಯುತ್ತಮವಾದ ಮಹಾಲಕ್ಷ್ಮಿಯ ಚರಿತ್ರೆಯನ ಹೇಳಿದೆನು. ಅತ್ಯಂತಸಾರಭೂತವಾದ ಈ ಕಥೆಯನ್ನು ಕೇಳಿದವರಿಗೆ ಸುಖವು ಮೋಕ್ಷವೂ ದೊರೆಯುವುದು. ಇನ್ನು ಯಾವ ವಿಷಯವನ್ನು ನೀನು ಕೇಳಬಂ ಸುತ್ತೀಯೆ?

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣದ ಗಣಪತಿಖಂಡದಲ್ಲಿ ಲಕ್ಷ್ಮೀಚರಿತ್ರೆ
ಯನ್ನು ತಿಳಿಸುವ ಇಪ್ಪತ್ತಮೂರನೆಯ ಅಧ್ಯಾಯವು
ಮುಗಿದುದು.



## ಇಪ್ಪತ್ತಮೂರನೆಯ ಅಧ್ಯಾಯದ ಸಾರಾಂಶ



ಇಂದ್ರಾದಿ ಸಕಲ ದೇವತೆಗಳ ಸ್ತುತಿಗೆ ಮೆಚ್ಚಿ ಪ್ರತ್ಯಕ್ಷಳಾದ ಮಹಾಲಕ್ಷ್ಮಿಯು ಬ್ರಾಹ್ಮಣರ ಶಾಪಪ್ರಭಾವವನ್ನು ವರ್ಣಿಸಿ ಬ್ರಾಹ್ಮಣರ ಅನುಜ್ಞೆಯಾದರೆ ತಾನು ಎಲ್ಲರಿಗೂ ಒಲಿಯುವುದಾಗಿ ಹೇಳಿದಳು. ಅಷ್ಟುಹೊತ್ತಿಗೆ ಸರಿಯಾಗಿ ಸನಕಾದಿ ಮಹರ್ಷಿಗಳೆಲ್ಲರೂ ಅಲ್ಲಿಗೆ ಬಂದು ಮಹಾಲಕ್ಷ್ಮಿಯನ್ನು ತುಷ್ಟಿಪಡಿಸಿ, ಎಲ್ಲರಿಗೂ ಪ್ರಸನ್ನಳಾಗಬೇಕೆಂದು ಬೇಡಿಕೊಂಡರು. ಆಗ ಮಹಾಲಕ್ಷ್ಮಿಯು ತಾನು ಎಂಥವರಿಗೆ ಪ್ರಸನ್ನಳಾಗುವುದಿಲ್ಲವೆಂಬುದನ್ನು ತಿಳಿಸಿ ದೇವಬ್ರಾಹ್ಮಣರಿಗೆ ಸಂಪತ್ತನ್ನಿತ್ತಳು. ಇಂದ್ರಾದಿ ದೇವತೆಗಳೂ, ಸುಸ್ವರ್ಗದಿ ತಮ್ಮ ಪೂರ್ವಸಂಪತ್ತನ್ನು ಪಡೆದು ಸುಖವಾಗಿದ್ದರು.



ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೫೦

# ಶ್ರೀ ಬ್ರಹ್ಮವೈವರ್ತಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೫

ಅನುವಾದಕ:

ಸಾಹಿತ್ಯ ಮತ್ತು ಕನ್ನಡ ವಿದ್ವಾನ್

**ಚಿಟ್ನಿಡಪುರದ ಸುಬ್ರಾಯರ ಮಗ ಕೃಷ್ಣಪ್ಪ,**

ಸಂಸ್ಕೃತ ಪಂಡಿತ,

ಟ್ರೈನಿಂಗ್ ಕಾಲೇಜು, ಮೈಸೂರು.



ಶ್ರೀ ಶಾರದಾ ಪ್ರೆಸ್,

ಮೈಸೂರು.

೧೯೫೦

# ಮುನ್ನುಡಿ

---

ಗಣಪತಿಖಂಡದ ಈ ಪ್ರಥಮ ಸಂಪುಟದಲ್ಲಿ ಷಣ್ಮುಖ ಮತ್ತು ಗಣಪತಿಯ ಅವತಾರವು (ಪ್ರಧಾನವಾಗಿ) ನಿರೂಪಿತವಾಗಿದೆ. ಷಣ್ಮುಖ ಮತ್ತು ಗಣಪತಿ ಇಬ್ಬರೂ ಅಯೋನಿಜರು ಶರಣಾಗತರಕ್ಷಕನಾದ ಶಿವನು ದೇವತೆಗಳ ಮೊರೆಯನ್ನು ಕೇಳಿ ಸತಿಯೊಡನೆ ಸಂಭೋಗವನ್ನು ತೊರೆದು ಹೊರಕ್ಕೆ ಬಂದಾಗ ಬಿದ್ದ ತೇಜಸ್ವಿನ ಬಿಂದುವನ್ನು ಹೊರಲಾರದೆ ಭೂದೇವಿಯು ಅಗ್ನಿದೇವನಿಗೂ, ಅಗ್ನಿದೇವನು ಶರವಣ (ಲಾಳದಗುತ್ತಿ) ಕ್ಕೂ ಅರ್ಪಿಸಿದರು. ಅಲ್ಲಿ ಆವಿರ್ಭವಿಸಿದ ಷಣ್ಮುಖನನ್ನು ಕೃತ್ತಿಕೆಯರು ತಮ್ಮ ಮಂದಿರಕ್ಕೆ ಕರೆದೊಯ್ದು ಪಾಲಿಸಿ ಕಾಲಾಂತರದಲ್ಲಿ ಪಾರ್ವತಿಯ ಸಮೀಪಕ್ಕೆ ಬೀಳ್ಕೊಟ್ಟರು. ಅನಂತರ ಷಣ್ಮುಖನು ದೇವತೆಗಳ ಸೇನಾನಿಯಾದನು.

ಶಿವನ ಪ್ರೇರಣೆಯಂತೆ ಪಾರ್ವತಿಯು ಪುತ್ರಪ್ರಾಪ್ತಿಗಾಗಿ ಪುಣ್ಯಕವ್ರತವನ್ನಾಚರಿಸಿ, ದಾನಧರ್ಮಗಳನ್ನು ಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರಳಾದಳು. ಶ್ರೀಹರಿಯು ವೃದ್ಧಬ್ರಾಹ್ಮಣನ ರೂಪದಲ್ಲಿ ಶಿವಪಾರ್ವತಿಯರ ರತಿಗೃಹದ ಸಮೀಪಕ್ಕೆ ಬಂದು ಕಣ್ಮರೆಯಾಗಿ ಶಿವನ ವೀರ್ಯದಲ್ಲಿ ವ್ಯಕ್ತನಾದನು. ಅವನೇ ಗಣಪತಿಯೆನಿಸಿದನು. ಬಾಲಗಣಪತಿಯನ್ನು ನೋಡಲು ದೇವತೆಗಳೊಡನೆ ಶನೈಶ್ಚರನು ಬಂದಾಗ ಅವನ ದೃಷ್ಟಿಯು ಬಿದ್ದು ಗಣಪತಿಯ ರುಂಡವು ಕತ್ತರಿಸಿಬಿದ್ದಿತು. ಆಗ ಕಾಡಿನಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ ಒಂದು ಆನೆಯ ತಲೆಯನ್ನು ಕತ್ತರಿಸಿ ತಂದು ಗಣಪತಿಯ ಮುಂಡಕ್ಕೆ ಸೇರಿಸಿದರು. ಅಂದಿನಿಂದ ಅವನು ಗಜಾನನನಾದನು.

ಈ ರೀತಿ ಷಡಾನನ ಗಜಾನನರ ಇತಿಹಾಸವು ಅದ್ಭುತವಾಗಿದೆ ಲೋಕಮಾತೆಯಾದ ಪಾರ್ವತಿಯೇ ಪುತ್ರಪ್ರಾಪ್ತಿಗಾಗಿ ಪುಣ್ಯಕವ್ರತವನ್ನಾಚರಿಸಿ ಇತರರಿಗೆ ಆದರ್ಶಪ್ರಾಯಳಾಗಿದ್ದಾಳೆ. ಈ ರೀತಿ ವಂಶಾಭಿವೃದ್ಧಿಕರನಾದ ಪುತ್ರನನ್ನು ಪಡೆಯುವುದು ವ್ರತನಿಯಮಾದಿಗಳಿಂದ ಮಾತ್ರ ಸಾಧ್ಯವೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ.

ಸಂಪತ್ತಿನಿಂದಲೂ ಸ್ತ್ರೀಲೋಲುಪತೆಯಿಂದಲೂ ಮದಿಸಿದ್ದ ದೇವೇಂದ್ರನು ಶ್ರೀಹರಿಯ ಪ್ರಸಾದವನ್ನು ತಿರಸ್ಕರಿಸಿದುದರ ಫಲವಾಗಿ ಸಂಪದ್ಭ್ರಷ್ಟನಾದನು. ಕಳೆದುಹೋದ ಸಂಪತ್ತನ್ನು ಪುನಃ ಪಡೆಯಲು ಇಂದ್ರನು ಬಹಳ ಕಷ್ಟಪಡಬೇಕಾಯಿತು. ಈ ರೀತಿ ಭಕ್ತಿವಿನಯಾದಿಗಳು ಶ್ರೇಯಸ್ಸಿಗೆ ಸಾಧನವೆಂದೂ, ಅಹಂಕಾರ ಮಮಕಾರಗಳು ಮನುಜನ ದುಃಸ್ಥಿತಿಗೆ ಕಾರಣವೆಂದೂ ಇಲ್ಲಿಯ ಸನ್ನಿವೇಶಗಳಿಂದ ಸ್ಪಷ್ಟವಾಗುತ್ತದೆ.

ಈ ರೀತಿಯಾದ ಮಹಾಪುರಾಣಗಳನ್ನು ಕರ್ಣಾಟಕಭಾಷೆಯಲ್ಲಿ ಅನುವಾದ ಮಾಡಿಸಿ ಜನಸ್ತೋಮಕ್ಕೆ ಮಹದುಪಕಾರವನ್ನು ಮಾಡುತ್ತಿರುವ ಪರಮೋದಾರಿಗಳೂ, ವಿದ್ವದಭಿಮಾನಿಗಳೂ, ಕರ್ಣಾಟಕ ಸಿಂಹಾಸನಾಧೀಶ್ವರರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳವರು ಬಂಧುಮಿತ್ರಕಳತ್ರಾದಿಗಳೊಡನೆ ಚಿರಕಾಲ ಸುಖವಾಗಿದ್ದು ಧರ್ಮದಿಂದ ರಾಜ್ಯವನ್ನು ಪರಿಪಾಲಿಸಲೆಂದು ಮಹಾಗಣಪತಿಯನ್ನು ಪ್ರಾರ್ಥಿಸುವ,

ವಿರೋಧಿ ಸಂ|| ಫಾಲ್ಗುಣ ಶುದ್ಧ ಪೂರ್ಣಿಮಾ ಶುಕ್ರವಾರ.

ಅನುವಾದಕ,
**ಬೆಟ್ಟದಪುರದ ಸುಬ್ರಾಯರ ಮಗ ಕೃಷ್ಣಪ್ಪ.**



# ಗಣಪತಿಖಂಡದ ವಿಷಯಾನುಕ್ರಮಣಿಕೆ.

॥ ಓಂ ॥

—॥ ಶ್ರೀ ಗಣೇಶಾಯ ನಮಃ ॥—

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಗಣಪತಿಖಂಡೇ

---

### ॥ ಪ್ರಥಮೋಽಧ್ಯಾಯಃ ॥

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥**

**॥ ನಾರದ ಉವಾಚ ॥**

**ಶ್ರುತಂ ಪ್ರಕೃತಿಖಂಡಂ ತದಮೃತಾರ್ಣವಮುತ್ತಮಂ ।**
**ಸರ್ವೋತ್ಕೃಷ್ಟಮಭೀಷ್ಟಂ ಚ ಮೂಢಾನಾಂ ಜ್ಞಾನವರ್ಧನಂ ॥ ೨ ॥**

---

### ಒಂದನೆಯ ಅಧ್ಯಾಯವು

೧. ಮುನಿವರ್ಯರಾದ ನರನಾರಾಯಣರಿಗೆ ನಮಸ್ಕರಿಸಿ, ಸರಸ್ವತೀದೇವಿಯನ್ನೂ ವ್ಯಾಸಮಹರ್ಷಿಯನ್ನೂ ಭಕ್ತಿಯಿಂದ ವಂದಿಸಿ ಅನಂತರ ಪುರಾಣವನ್ನಾರಂಭಿಸಬೇಕು.

೨. ನಾರದ:—ಎಲೈ ನಾರಾಯಣಮಹರ್ಷಿಯೇ, ನಿನ್ನ ಅನುಗ್ರಹದಿಂದ ಸರ್ವೋತ್ಕೃಷ್ಟವೂ, ಅಮೃತದಂತೆ ಆನಂದಕರವೂ, ಅಜ್ಞರಿಗೆ ಜ್ಞಾನದಾಯಕವೂ, ಅಭೀಷ್ಟಫಲಪ್ರದವೂ ಆದ ಪ್ರಕೃತಿಖಂಡದ ಕಥೆಯನ್ನು ಕೇಳಿ ನಾನು ಸಂತೋಷಪಟ್ಟೆನು.